ಗಳಗನಾಥ ಸುರಸಗ್ರಂಥಮಾಲಾ.

೮ನೆಯ ಗ್ರಂಥ.



## ಪ್ರಬುದ್ಧ

# ಪದ್ಮನಯನೆ.

ಇದನ್ನು

**ವೇಂಕಟೇಶ ತಿರಕೋ ಕುಲಕರಣಿ ಗಳಗನಾಥ,**

ಇವರು ಬರೆದರು.

೫ ನೆ ಆವೃತ್ತಿ ೧೦೦೦ ಪ್ರತಿಗಳು.





**1933**

ಬೆಲೆ ೧ ರೂಪಾಯಿ.

೫ ನೆಯ ಆವೃತ್ತಿಯ

# ಪ್ರಸ್ತಾವನ.



ಕನ್ನಡಿಗರ ಆಶ್ರಯದಿಂದ ಈ ಕಾದಂಬರಿಯ ೫ನೆಯಾವೃತ್ತಿ ಹೊರಡಿಸುವ ಪ್ರಸಂಗ ಒದಗಿದ್ದಕ್ಕಾಗಿ ಬಹಳ ಸಂತೋಷವಾಗುತ್ತದೆ. ೪ನೆಯ ಆವೃತ್ತಿಯ ಪ್ರತಿಗಳು ತೀರಿದಕೂಡಲೆ ನಾವು ಈ ಕಾದಂಬರಿಯನ್ನು ಪ್ರಿಂಟಮಾಡಿಸುತ್ತಬಂದಿದ್ದರೆ, ಇಷ್ಟುಹೊತ್ತಿಗೆ ಇದರ ಎಂಟನೆಯ ಆವೃತ್ತಿಯನ್ನಾದರೂ ತೆಗೆಯಬಹುದಾಗಿತ್ತು! ಕನ್ನಡಿಗರ ಓದುವ ಆತುರಕ್ಕಾಗಿ ನಮ್ಮ ಅನನುಕೂಲತೆಯನ್ನು ಲಕ್ಷಿಸದೆ ಈಗ ೫ನೆಯಾವೃತ್ತಿಯನ್ನು ಕೃತಜ್ಞತೆಯಿಂದ ಹೊರಡಿಸಿರುವೆವು.

ಸದ್ಗುರು ಆಫೀಸ
ಹಾವೇರಿ
೮-೪-೩೩



ವಿಧೇಯ
ವೆಂ. ತಿ. ಕುಲಕರಣಿ
ಗಳಗನಾಥ.

# ಪ್ರಬುದ್ಧ ಪದ್ಮನಯನೆ.



## ೧ ನೆಯ ಪ್ರಕರಣ.

## ಪಂಚಪ್ರಾಣ.

ಮಂಗಲಕರವಾದ ಉಷಃಕಾಲವು. ಪೂರ್ವದಿಕ್ಕು ಬಿಳುಪೇರಿದೆ. ನಸುಗಾಳಿಯು ಸುಯ್ಯನೆ ಸುಳಿಯಹತ್ತಿದೆ. ಕೋಳಿಗಳು "ಕು ಕೂ ಕೂ" ಎಂದು ಉಚ್ಚಸ್ವರದಿಂದ ಕೂಗತೊಡಗಿವೆ. ದುಂಡಮಲ್ಲಿಗೆ, ಕವರುಮಲ್ಲಿಗೆ, ಜಾಜಿಮಲ್ಲಿಗೆ, ಸಂಪಗೆ, ಗುಲಾಬಿ ಮೊದಲಾದ ಹೂಗಳ ಮೊಗ್ಗೆಗಳು ಅರಳತೊಡಗಿ, ನಾಲ್ಕೂಕಡೆಗೆ ತಮ್ಮ ಸುಗಂಧವನ್ನು ಬೀರುತ್ತಲಿವೆ. ಗೂಡಿನಲ್ಲಿದ್ದ ಹಕ್ಕಿಗಳು ಮೆಲ್ಲನೆ ಮುಖವೆತ್ತಿ ನೋಡಿ, ಪ್ಪೃಕೊಡವಿ ಹೊರಬೀಳುವ ಉಬ್ಬಿನಿಂದ ಕಿಲಿಕಿಲಿ ಧ್ವನಿಮಾಡತೊಡಗಿವೆ. ಪಶು-ಮೃಗಾದಿಗಳು ಒಡ್ಡಮುರಿದು, ಆಕಳಿಸಿ, ಬಾಲಕೊಡವಿ ಚೇತರಿಸಿಕೊಳ್ಳಹತ್ತಿವೆ. ಸಂಸಾರಶ್ರಮದಿಂದ ಶ್ರಾಂತರಾಗಿ ನಿದ್ದೆ ಹೋಗಿದ್ದ ಜನರು ಎಚ್ಚತ್ತು, ತಮ್ಮ ತಮ್ಮ ಉದ್ಯೋಗಗಳನ್ನು ಕೈಕೊಳ್ಳುವ ಲವಲವಿಕೆಯಿಂದ ಪ್ರಾತರ್ವಿಧಿಗಳನ್ನು ತೀರಿಸಿಕೊಳ್ಳಹತ್ತಿದ್ದಾರೆ. ದೇವಭಕ್ತರ ಪ್ರಾತಃಸ್ಮರಣಗಳೂ, ಪ್ರಾರ್ಥನೆಗಳೂ ನಡೆದಿವೆ. ವಿದ್ಯಾರ್ಥಿಗಳು ತಮ್ಮ ಬೆಳಗುಮುಂಜಾವಿನ ಓದನ್ನು ಮುಗಿಸಿ, ಪುಸ್ತಕಗಳನ್ನು ಕಟ್ಟತೊಡಗಿದ್ದಾರೆ. ಕರ್ಮನಿರತರ ಪ್ರಾತಃಸ್ನಾನಗಳು ನಡೆದಿವೆ. ದೇವಾಲಯಗಳೊಳಗಿನ ಗಂಟೆಗಳ ನಾದಗಳು ಕಿವಿಗೆ ಇಂಪಾಗಿ ಕೇಳಿಸಹತ್ತಿವೆ. ಕೂಸುಗಳು ಎಚ್ಚತ್ತು ಕೆಲವು ಆಡತೊಡಗಿವೆ, ಕೆಲವು ಅಳತೊಡಗಿವೆ. ನವವಧುಗಳು ತಮ್ಮ ಪತಿಗಳ ಮಗ್ಗಲಲ್ಲಿ ಪಕ್ಕನೆ ಎಚ್ಚತ್ತು, ನಿದ್ದೆಗಣ್ಣುಗಳನ್ನು ತಿಕ್ಕುತ್ತ, ತತ್ತರಿಸುತ್ತ, ಲಜ್ಜಿತರಾಗಿ ಅವಸರದಿಂದ ಹೊರಗೆ ಬರತೊಡಗಿದ್ದಾರೆ. ಚಪಲರಾದ ತರುಣರು ಸ್ವಚ್ಛವಾದ ಬೈಲಹವೆಯಲ್ಲಿ ಉಲ್ಲಾ

ಸದಿಂದ ಸಂಚರಿಸುತ್ತಲಿದ್ದಾರೆ. ಸೋಮಾರಿಗಳು ಮಾತ್ರ ಮುಸುಕಿನೊಳಗಿಂದ ಹಣಕಿ ನೋಡಿ ನೋಡಿ, ಇನ್ನೂ ಬೆಳಗಾಗಿಲ್ಲೆಂದು ಮತ್ತೆ ಮತ್ತೆ ಮುದುಡಿಕೊಂಡು ಬೀಳತೊಡಗಿದ್ದಾರೆ. ಕಾಗೆಗಳ ಕರ್ಕಶವಾದ ಕೂಗಿಗೂ ಅವರು ಎಚ್ಚರಿಯಲೊಲ್ಲರು! ಇಂಥ ಭಾಗ್ಯಹೀನರಿಗೆ ಉಷಃಕಾಲದಂಥ ಪ್ರಶಾಂತಸಮಯದ ಆನಂದದ ಅನುಭವವು ಹೇಗಾಗಬೇಕು?

ಹೀಗೆ ಬಿಳುಪೇರಿದ ಪೂರ್ವದಿಕ್ಕು ಮೆಲ್ಲಮೆಲ್ಲನೆ ಕೆಂಪಾಗತೊಡಗಿತು. ಇನ್ನು ಬಾಲಸೂರ್ಯನು ಹೊರಬಿದ್ದು ತನ್ನ ಹೊಂಬಣ್ಣದ ಕಿರಣಗಳನ್ನು ಹರವತಕ್ಕವನು, ಅಷ್ಟರಲ್ಲಿ ಗಂಗಾತೀರದ ಮಣಿಕರ್ಣಿಕೆಯ ಘಾಟಿನಮೇಲೆ ಒಬ್ಬ ಬ್ರಹ್ಮರ್ಷಿಯು ಬೊಗಸೆಯಲ್ಲಿ ನೀರನ್ನು ತುಂಬಿಕೊಂಡು, ಅರ್ಘ್ಯಕೊಡುವದಕ್ಕಾಗಿ ಮಂತ್ರವನ್ನು ಉಚ್ಚರಿಸುತ್ತ ಪ್ರತಿಸೂರ್ಯನಂತೆ ನಿಂತುಕೊಂಡಿದ್ದನು. ಆತನಲ್ಲಿ ಬಾಹ್ಯಾಡಂಬರವು ಎಷ್ಟು ಮಾತ್ರವೂ ತೋರುತ್ತಿದ್ದಿಲ್ಲ. ಆತನು ಗೃಹಸ್ಥಾಶ್ರಮಿಯು. ಆತನ ವಯಸ್ಸು ಅರವತ್ತರಮೇಲೆ ಎಪ್ಪತ್ತರ ಒಳಗೆ ಇರಬಹುದು. ಆ ಮಹಾತ್ಮನು ಶುಭ್ರವಸ್ತ್ರವನ್ನುಟ್ಟುಕೊಂಡು, ಕೆಂಪುಶಾಲನ್ನು ಹೊದುಕೊಂಡಿದ್ದನು. ಆತನ ತಲೆಯಲ್ಲಿ ಕೆಂಪುಶಕಲಾತಿಯ ಮನೋಹರವಾದ ಟೊಪ್ಪಿಗೆಯು ಒಪ್ಪುತ್ತಿತ್ತು. ಆ ಶಾಮಸುಂದರನು ಮೈತುಂಬ ಭಸ್ಮವನ್ನು ಹಚ್ಚಿಕೊಂಡು, ಕೊರಳಲ್ಲಿ ರುದ್ರಾಕ್ಷಮಾಲೆಯನ್ನೂ, ಸ್ಫಟಿಕಮಾಲೆಯನ್ನೂ ಹಾಕಿಕೊಂಡಿದ್ದನು. ಆತನ ಬಲಭಾಗದಲ್ಲಿ ಸುಮಾರು ನಾಲ್ವತ್ತೈದು ವರ್ಷದ ತೇಜಃಪುಂಜನಾದ ಜಟಾಧಾರಿ ಶಿಷ್ಯನೊಬ್ಬನು, ಮತ್ತೆ ಅರ್ಘ್ಯೋದಕವನ್ನು ಸದ್ಗುರುವಿನ ಬೊಗಸೆಯಲ್ಲಿ ಹಾಕುವದಕ್ಕಾಗಿ ಗಂಗೋದಕದ ಕಲಶವನ್ನು ಕೈಯಲ್ಲಿ ಹಿಡಿದು ಬಗ್ಗಿ ಬಹು ವಿನಯದಿಂದ ನಿಂತುಕೊಂಡಿದ್ದನು. ಉಳಿದ ನಾಲ್ಕಾರು ಜನ ಶಿಷ್ಯರು ಆ ತೇಜೋಮೂರ್ತಿಯಲ್ಲಿಯೇ ಚಿತ್ತವನ್ನಿಟ್ಟು ನಿಂತುಕೊಂಡಿದ್ದರು. ಆಗಿನ ಮಣಿಕರ್ಣಿಕೆಯ ಘಾಟಿನ ವಿಚಿತ್ರವಾದ ಶೋಭೆಯನ್ನು ವರ್ಣಿಸುವದು ಸುಲಭವಲ್ಲ. ತರತರದ ಉಡಿಗೆ ತೊಡಿಗೆಯ, ಹಾಗು ವಿಚಿತ್ರವಾದ ನಡೆನುಡಿಯ ಹಲವು ಜಾತಿಯ ಜನರಿಂದ ಅದು ತುಂಬಿತುಳುಕುತ್ತಿತ್ತು. ಗಂಡಸರು ಸ್ನಾನಮಾಡಿ, ಕೆಲವರು ತ್ರಿಪುಂಡ್ರಭಸ್ಮವನ್ನೂ, ಕೆಲವರು ಮುದ್ರೆಗಳನ್ನೂ, ಕೆಲವರು ಕುಂಕುಮವನ್ನೂ ಧರಿಸಿದ್ದರು. ಹೆಂಗಸರು ಮೈತೊಳೆದು

ಅರಿಸಿಣ, ಕುಂಕುಮ, ಹೂಮಾಲೆ ಮೊದಲಾದ ಸೌಭಾಗ್ಯದ್ರವ್ಯಗಳಿಂದ ಒಪ್ಪುತ್ತಿದ್ದರು. ಸಂಧ್ಯಾವಂದನ, ವೇದಘೋಷ, ನಾಮಸಂಕೀರ್ತನ, ಗಂಗಾಪೂಜೆ, ಪ್ರತಿಮಾರ್ಚನ, ಪಾರ್ಥಿವಪೂಜೆ ಮೊದಲಾದವುಗಳ ಯೋಗದಿಂದ ಜನರ ಕಣ್ಣುಗಳೂ, ಕಿವಿಗಳೂ ಪವಿತ್ರವಾಗಿ ಮನಸ್ಸು ಪ್ರಸನ್ನವಾಗುತ್ತಿತ್ತು!

ಸೂರ್ಯನು ಮೇಲಕ್ಕೇರಿದಂತೆ ಅವನ ಕೆಂಪುಕಿರಣಗಳು ಸುತ್ತೆಲ್ಲ ಪಸರಿಸಿ, ಮಣಿಕರ್ಣಿಕೆಯ ಶೋಭೆಯನ್ನು ಹೆಚ್ಚಿಸಿದವು. ಬ್ರಹ್ಮರ್ಷಿಯು ಅನುಷ್ಠಾನವನ್ನು ತೀರಿಸಿಕೊಂಡು, ಘಾಟಿನ ಮೇಲಿದ್ದ ದತ್ತಮಂದಿರಕ್ಕೆ ಹೋದನು. ಆತನು ಶ್ರೀ ದತ್ತಸದ್ಗುರುವನ್ನು ಪೂಜಿಸಿದಬಳಿಕ, ಹೊರಗೆಬಂದು, ನೆರೆದ ಜನರನ್ನು ಬ್ರಹ್ಮಭಾವನೆಯಿಂದ ವಂದಿಸಿ, ಶಿಷ್ಯರು ಹಾಕಿದ ಕೃಷ್ಣಾಜಿನದಮೇಲೆ ಕುಳಿತುಕೊಂಡನು. ನೋಡನೋಡುತ್ತ ಗುಡಿಯು ಜನರಿಂದ ತುಂಬಿಹೋಯಿತು. ಯತಿಗಳು, ಗೃಹಸ್ಥಾಶ್ರಮಿಗಳು, ಸಾಧು—ಸಂತರು, ಬೈರಾಗಿಗಳು, ಹೆಂಗಸರು, ಹುಡುಗರು ಆ ಬ್ರಹ್ಮರ್ಷಿಯನ್ನು ಸುತ್ತುಗಟ್ಟಿ ಕುಳಿತರು. ಆ ಮಹಾತ್ಮನ ದಿವ್ಯವಾದ ತೇಜಸ್ಸು ಜನರ ಮನಸ್ಸನ್ನು ಆಕರ್ಷಿಸಿಬಿಟ್ಟಿತು. ಜನರು ಸದ್ಬೋಧಾಮೃತಶ್ರವಣದಿಂದ ಪರವಶರಾಗತೊಡಗಿದರು. ಈ ಮೇರೆಗೆ ಸಣ್ಣವರು—ದೊಡ್ಡವರು, ಗಂಡಸರು—ಹೆಂಗಸರು, ಪಂಡಿತರು—ಪಾಮರರು, ವಿರಕ್ತರು—ವಿಷಯಿಗಳು ಸರಿಯಾಗಿ ಸಮಾಧಾನಪಟ್ಟು ಮಂದಿರದಲ್ಲಿ ಕುಳಿತಿರಲು, ತೇಜಃಪುಂಜನಾದ ಒಬ್ಬ ಪುರುಷನು ದರ್ಶನೋತ್ಕಂಠಿತನಾಗಿ ತನ್ನ ಪತ್ನಿಯೊಡನೆ ಅಲ್ಲಿಗೆ ಬಂದನು.

ಆ ದಿವ್ಯ ಪುರುಷನು ವಿನಯದ ಉಡಿಗೆ—ತೊಡಿಗೆಗಳನ್ನು ಧರಿಸಿದ್ದರೂ, ಅವನ ಮುಖದಲ್ಲಿ ರಾಜತೇಜವು ಉಕ್ಕುತ್ತಿತ್ತು. ಆತನ ವಯಸ್ಸು ಐವತ್ತರ ಮೇಲೆ ಇರಬಹುದು; ಅವನ ನಿಲುವಿಕೆ ಎತ್ತರ, ಮೈಕಟ್ಟು ಕಸುವಿನದು. ವಿಶಾಲವಾದ ವಕ್ಷಸ್ಥಳವೂ, ಆಜಾನುಬಾಹುಗಳೂ ಆತನ ಅಲೌಕಿಕತೆಯನ್ನು ವ್ಯಕ್ತ ಮಾಡುತ್ತಿದ್ದವು. ಒಟ್ಟಿಗೆ ಆತನ ಭವ್ಯಮೂರ್ತಿಯು ಜನರ ಚಿತ್ತವನ್ನು ಆಕರ್ಷಿಸತೊಡಗಿತು. ಆತನು ಪಂಚಫಲಗಳನ್ನು ಸಮರ್ಪಿಸಿ, ಬ್ರಹ್ಮರ್ಷಿಯನ್ನು ಸಾಷ್ಟಾಂಗವಾಗಿ ವಂದಿಸಿ, ಎದ್ದು ಕೈಜೋಡಿಸಿ ನಿಂತುಕೊಂಡನು. ಸ್ವಪ್ನದಲ್ಲಿ ದರ್ಶನಕೊಟ್ಟ ಮಹಾಪುರುಷನೇ ಪ್ರತ್ಯಕ್ಷ ತನ್ನ ಎದುರಿಗೆ ಕುಳಿತಿದ್ದನ್ನು ನೋಡಿ,

ಆತನು ಆನಂದಾಶ್ಚರ್ಯಗಳಿಂದಪರವಶನಾದನು.ಆತನಕಣ್ಣೊಳಗಿಂದ ಆನಂದ ಬಾಷ್ಪಗಳು ಉದರತೊಡಗಿದವು;ಆತನ ದೇಹವು ರೋಮಾಂಚಿತವಾಯಿತು; ಆತ ನಲ್ಲಿವಿಚಿತ್ರವಾದ ಭಕ್ತಿಯು ತಲೆದೋರಿತು. ಬರಬರುತ್ತ ಆತನ ರಾಜತೇಜಸ್ಸು ಋಷಿಯ ಬ್ರಹ್ಮತೇಜಸ್ಸಿನಲ್ಲಿ ಅಡಗತೊಡಗಿತು. ಹೀಗೆ ಆ ವೀರವರ್ಮ-ಸಾರ್ವ ಭೌಮನು ಸ್ವ-ಪರಪ್ರಭಾವಗಳನ್ನು ಮರೆತು, ಬ್ರಹ್ಮರ್ಷಿಯಲ್ಲಿನಟ್ಟಮನಸ್ಸುಳ್ಳವ ನಾಗಿ ಲೀನತೆಯಿಂದ ನಿಂತುಕೊಂಡಿರಲು, ಆತನ ಹೆಂಡತಿಯಾದ ಮನಮೋಹಿ ನಿಯು ಋಷಿಯನ್ನು ವಂದಿಸಿ, ಪತಿಯ ಬಳಿಯಲ್ಲಿ ನಿಂತುಕೊಂಡಿದ್ದಳು. ಉತ್ತ ರೀಯದಿಂದ ಆಕೆಯ ಸರ್ವಾಂಗವು ಮುಚ್ಚಿತ್ತು. ಆ ಸಾಧ್ವಿಯ ಮನೋ ಹರವಾದ ಮುಖಮಂಡಲದಲ್ಲಿ ಸುಪ್ರಸನ್ನತೆಯು ಒಪ್ಪುತ್ತಿತ್ತು. ಆಗಿನ ಆ ದತ್ತಮಂದಿರದ ಶೋಭೆಯು ವರ್ಣನೀಯವಾಗಿತ್ತು. ಏನು ಹೇಳುವದು! ಅಗ್ರಸ್ಥಾನದಲ್ಲಿ ಅಮೋಘವಾದ ಬ್ರಹ್ಮತೇಜಸ್ಸು ವಿರಾಜಮಾನವಾಗಿದ್ದು, ಅದರ ಸಮ್ಮುಖದಲ್ಲಿ ಪ್ರತಾಪಯುಕ್ತವಾದ ಕ್ಷಾತ್ರತೇಜಸ್ಸು ಸೌಭಾಗ್ಯದೊಡನೆ ಒಪ್ಪು ತ್ತಲಿದೆ; ಅವೆರಡು ತೇಜಸ್ಸುಗಳನ್ನು ಚರಾಚರಾತ್ಮಕವಾದ ಪ್ರಪಂಚವೇ ಆಶ್ರಯಿಸಿರುವಂತೆ, ಶ್ರೋತೃಸಮೂಹವು ಆ ಬ್ರಹ್ಮರ್ಷಿಯನ್ನು ಸುತ್ತುಗ ಟ್ಟಿದೆ; ಹೀಗೆ ಆಕಸ್ಮಿಕವಾಗಿ ಒದಗಿದ ಈ ಅಪೂರ್ವ ಯೋಗದಿಂದ ಆ ಮಂದಿ ರವು ಕ್ಷಣಮಾತ್ರ ನಿಃಶಬ್ದವಾಯಿತು. ಬ್ರಹ್ಮರ್ಷಿಯ ಕೃಪಾದೃಷ್ಟಿಯು ವೀರ ವರ್ಮನ ಮೇಲೆ ಬಿದ್ದಿತ್ತು. ವೀರವರ್ಮನೂ, ಮನಮೋಹಿನಿಯೂ ಭಕ್ತಿ ಪುರಸ್ಸರವಾಗಿ ವಿನಯದಿಂದ ಬ್ರಹ್ಮರ್ಷಿಯ ಚರಣಗಳಲ್ಲಿ ದೃಷ್ಟಿಯನ್ನಿಟ್ಟು ನಿಂತಿದ್ದರು. ಕುಳಿತವರು ಕೌತುಕದಿಂದ ಒಮ್ಮೆ ವೀರವರ್ಮನನ್ನೂ, ಒಮ್ಮೆ ಬ್ರಹ್ಮರ್ಷಿಯನ್ನೂ ನೋಡುತ್ತಿದ್ದರು.

ಹೀಗಿರಲು, ವೀರವರ್ಮನು ಸದ್ಗದಿತಕಂಠನಾಗಿ ಬ್ರಹ್ಮರ್ಷಿಯನ್ನು ಕುರಿತು-ಮಹಾತ್ಮನೇ, ನಿನ್ನ ಪುಣ್ಯಕರವಾದ ಮೂರ್ತಿಯ ದರ್ಶನದಿಂದ ಈ ವೀರವರ್ಮನು ಕೃತಾರ್ಥನಾದನು. ಅವನಕುಲಕೋಟಿಯುಉದ್ಧೃತವಾಯಿತು. ಅವನ ಪೂರ್ವಜರ ಪ್ರಜಾಪಾಲನದ ಪುಣ್ಯವೇ ಇಂದು ವೀರವರ್ಮನಿಗೆ ಲಭ ಸಿದಂತಾಗಿರುತ್ತದೆ. ನಮ್ಮಂಥ ಪತಿತರ ಉದ್ಧಾರಕ್ಕಾಗಿ ಪರಮೇಶ್ವರನು ಮಹಾ ಪುರುಷರ ರೂಪದಿಂದ ಆಗಾಗ್ಗೆ ಪ್ರಕಟವಾಗುತ್ತಾನಂತೆ! ಹಾಗಿಲ್ಲದಿದ್ದರೆ ಸಂಸಾ ರಮಗ್ನರಾದ ನಮ್ಮನ್ನು ಮೇಲಕ್ಕೆ ಯಾರು ಎತ್ತಿಕೊಳ್ಳಬೇಕು? ಮಹಾತ್ಮನೇ,

ಪೂರ್ವಜರ ಪುಣ್ಯದಿಂದಲೂ, ನಿನ್ನ ಕೃಪೆಯಿಂದಲೂ ನನಗೆ ಸಾರ್ವಭೌಮಪದವಿಯು ಪ್ರಾಪ್ತವಾಗಿರುತ್ತದೆ; ನನ್ನ ಐಶ್ವರ್ಯ—ವೈಭವಗಳಿಗೆ ಕೊರತೆಯಿಲ್ಲ; ಅಸಂಖ್ಯ ಜನರು ನನ್ನ ಮುಂದೆ—"ಜೀಯಾ" ಎಂದು ಕೈಕಟ್ಟಿಕೊಂಡು ನಿಂತುಕೊಳ್ಳುತ್ತಾರೆ; ಪರರಾಜರನ್ನು ಪರಾಭವಗೊಳಿಸುವಷ್ಟು ಬಲವೂ, ಪ್ರತಾಪವೂ ನನ್ನಲ್ಲಿರುತ್ತವೆಂಬ ಅಭಿಮಾನವು ನನಗಿರುತ್ತದೆ; ಅನುಕೂಲೆಯೂ, ಸುಂದರಿಯೂ ಆದ ಈ ಹೆಂಡತಿಯಿದ್ದಾಳೆ; ಅವಯವಗಳಂತೆ ಸಹಾಯಮಾಡುವ ಮಂತ್ರಿಮಂಡಲವೂ, ಸೇನಾಪತಿಗಳೂ ಇದ್ದಾರೆ; ಯಾತಕ್ಕೇನು ಕೊರತೆಯಿದೆ? ಇದ್ದರೆ ಸಂತತಿಯ ಕೊರತೆಮಾತ್ರ ಇರಬಹುದು; ಆದರೆ ಅದಕ್ಕೆ ನಾನು ಸದ್ಯಕ್ಕೆ ಮಹತ್ವಕೊಡುವದಿಲ್ಲ. ಪುಣ್ಯಮೂರ್ತಿಯೇ, ಯಾರಿಗೂ ಇಲ್ಲದಷ್ಟು ಅನುಕೂಲತೆಗಳು ನನಗಿದ್ದು, ಕೃಪಾಮೂರ್ತಿಯಾದ ನಿನ್ನ ದರ್ಶನಮಾತ್ರದಿಂದ ಈಗಾಗಿರುವ ಸಾತ್ವಿಕಾನಂದದ ಅನುಭವವು ಇಂದಿನವರೆಗೆ ಒಮ್ಮೆಯಾದರೂ ನನಗೆ ಆಗಿರಬಾರದೆ? ಸತ್ಸಮಾಗಮದಲ್ಲಿಯೇ ಆನಂದವಿರುತ್ತದೆಂಬದನ್ನು ನಾನು ಇಂದು ಮನಗಂಡೆನು. ಈಗಿನ ವೃತ್ತಿಯು ಅಖಂಡವಾಗಿ ನನ್ನಲ್ಲಿ ನೆಲಸಿದರೆ, ಸಾರ್ವಭೌಮಪದವಿಗಿಂತ ಹೆಚ್ಚಿನ ಪದವಿಗಳನ್ನು ಅದರ ಮೇಲೆ ನಿವಾಳಿಸಿ ಒಗೆಯಬಹುದು. ಸಾಕು, ಹೆಚ್ಚಿನ ಸುಖಕ್ಕಾಗಿ ಮುಗಿಬಿದ್ದು, ಮುಗ್ಗರಿಸಿ ಗಾಸಿಯಾಗುವದು ಇಂದಿಗೆ ಸಾಕು. ಕರುಣಾಸಿಂಧುವೇ, ನೀನು ಸ್ವಪ್ನದಲ್ಲಿ ಬಂದು ನನ್ನನ್ನು ಎಚ್ಚರಗೊಳಿಸಿ ಇಲ್ಲಿಗೆ ಬರಮಾಡದಿದ್ದರೆ, ನಾನೆಲ್ಲಿ ಇಲ್ಲಿಗೆ ಬರುತ್ತಿದ್ದೆನು? ನಿನ್ನ ದರ್ಶನಲಾಭವು ನನಗೆಲ್ಲಿ ಆಗುತ್ತಿತ್ತು? ಈ ಅಲಂಬುದ್ಧಿಯು ನನ್ನಲ್ಲೆಲ್ಲಿ ಹುಟ್ಟುತ್ತಿತ್ತು? ನನ್ನ ಕನೋಜ ಪಟ್ಟಣವೆಲ್ಲಿ, ಕಾಶಿಯೆಲ್ಲಿ? ನನ್ನ ಆಗಿನ ಪುತ್ರಕಾಮನವೆಲ್ಲಿ, ಈಗಿನ ನಿಸ್ಪೃಹತೆಯೆಲ್ಲಿ? ಇಷ್ಟಾರ್ಥಪ್ರದನೇ, ದರ್ಶನಕ್ಕಾಗಿ ಬಂದವನನ್ನು ಸುಮ್ಮನೆ ಹಿಂದಕ್ಕೆ ಕಳಿಸಬೇಡ ಕಂಡೆಯಾ! ದರ್ಶನದಿಂದ ತೃಪ್ತವಾಗಿದ್ದ ನನ್ನ ಕಣ್ಣುಗಳಿಗೆ ನಿನ್ನ ಮೂರ್ತಿಯು ಮರೆಯಾಗದಂತೆ ಅನುಗ್ರಹಿಸು!

ಈ ಮೇರೆಗೆ ನುಡಿದು ವೀರವರ್ಮನು ಬ್ರಹ್ಮರ್ಷಿಯನ್ನು ಮತ್ತೆ ಸಾಷ್ಟಾಂಗವಾಗಿ ವಂದಿಸಿ, ಎದ್ದು ಕೈಜೋಡಿಸಿ ನಿಂತುಕೊಂಡನು. ಅದನ್ನು ನೋಡಿ ಬ್ರಹ್ಮರ್ಷಿಯು ಸಂತುಷ್ಟನಾಗಿ ವೀರವರ್ಮನನ್ನು ಕುರಿತು—"ನೃಪೋ

ತ್ತಮನೇ, ಪತ್ನೀಸಮೇತನಾದ ನೀನು ಇತ್ತ ಬಾ, ಈ ಆಸನದಲ್ಲಿ ವಿಶ್ರಮಿಸು. ನೀನು ಬಹು ಭಾಗ್ಯವಂತನು ಕಂಡೆಯಾ! ಈಶ್ವರಾಂಶನಾದ ನಿನ್ನ ಪುಣ್ಯವನ್ನು ನಾನೇನು ವರ್ಣಿಸುವೆನು? ನಿನ್ನ ಪ್ರಜಾವಾತ್ಸಲ್ಯಕ್ಕೂ, ಸತ್ವಕ್ಕೂ, ವಿನಯಕ್ಕೂ ಮೆಚ್ಚಿ ಭಗವಂತನು, ಯಃಕಶ್ಚಿತ ಬ್ರಾಹ್ಮಣನಾದ ನನ್ನ ರೂಪನಿಂದ ನಿನಗೆ ದರ್ಶನಕೊಟ್ಟಿರಬಹುದು. ನಿನ್ನ ಪುಣ್ಯದ ಬಲವಲ್ಲದೆ ಈ ಕಪಿಂಜಲನಲ್ಲೇನು ಮಹತ್ವವಿದೆ? ಈ ಜಗತ್ತಿನಲ್ಲಿ ಯಾವಾಗಲೂ ಎಚ್ಚರದಿಂದ ನಡೆಯುವ ನೀನು, ನನ್ನ ದರ್ಶನದಿಂದ ಅಲಂಬುದ್ಧಿಯನ್ನು ಪಡೆದೆನೆಂದು ಹೇಳುವದು ಔಪಚಾರಿಕವೇ ಸರಿ. ನಿನ್ನಂಥ ನಿಸ್ಪೃಹನನ್ನಲ್ಲದೆ, ಸಾರ್ವಭೌಮಪದವಿಯು ಮತ್ತಾರನ್ನು ಹೊಂದಬೇಕು? ಚಕ್ರವರ್ತಿಯೇ, ನಿನ್ನ ಪದವಿಯು ಸ್ಥಿರವಾಗಿರಲಿ; ನಿನ್ನ ಕೊರತೆಗಳೆಲ್ಲ ಕೂಡಿಬರಲಿ; ನೀನು ಜಯಶಾಲಿಯಾಗಿ ಬಾಳಿ, ಕಡೆಗೆ ಪತ್ನಿಯೊಡನೆ ಶಾಶ್ವತಸುಖವನ್ನು ಹೊಂದು" ಎಂದು ಆಶೀರ್ವದಿಸಿದನು. ವೀರವರ್ಮನು ಕೆಲವುದಿನ ಕಾಶಿಯಲ್ಲಿದ್ದು, ಹೆಂಡತಿಯೊಡನೆ ಕಪಿಂಜಲನ ಸೇವೆಯನ್ನು ಮಾಡಿ ಆತನ ಮನಸ್ಸನ್ನು ಒಲಿಸಿಕೊಂಡನು. ಸತ್ಸಂಗತಿಯ ಮುಂದೆ ರಾಜ್ಯಸುಖವು ತುಚ್ಛವೆಂದು ತಿಳಿಯುವ ಆ ವೀರವರ್ಮನು, ಕಪಿಂಜಲನನ್ನು ಅಗಲಿ ಇರದಾದನು. ಆತನು ಕಪಿಂಜಲನನ್ನು ಪ್ರಾರ್ಥಿಸಿ, ಶಿಷ್ಯಸಮೇತನಾದ ಆ ಮಹಾ ಪುರುಷನನ್ನು ತನ್ನ ರಾಜಧಾನಿಗೆ ಪ್ರಯತ್ನಪೂರ್ವಕವಾಗಿ ಕರೆದೊಯ್ದನು. ಸ್ವಲ್ಪದಿನಗಳಲ್ಲಿಯೇ ಆತನು ಭವ್ಯವೂ, ಮನೋಹರವೂ ಆದ ಒಂದು ಮಂದಿರವನ್ನು ಕಪಿಂಜಲನ ಸಲುವಾಗಿ ಅರಮನೆಯ ಸಮೀಪದಲ್ಲಿ ಕಟ್ಟಿಸಿ, ಅದರಲ್ಲಿ ಎಲ್ಲಬಗೆಯ ಅನುಕೂಲತೆಗಳನ್ನು ಒದಗಿಸಿಕೊಟ್ಟು, ತಾನು ಪತ್ನಿಯೊಡನೆ ಗುರುಸೇವಾತತ್ಪರನಾದನು.

ಈ ಮೇರೆಗೆ ವೀರವರ್ಮನ ಮನಸ್ಸು ಗುರುಸೇವೆಯಲ್ಲಿ ತೊಡಗಿ ಕೆಲವು ದಿನಗಳು ಕ್ರಮಿಸಲು, "ನಿನ್ನ ಕೊರತೆಗಳು ಕೂಡಿಬರಲಿ" ಎಂಬ ಸದ್ಗುರುವಿನ ಆಶೀರ್ವಚನವು ಸತ್ಯವಾಗುವ ಕಾಲವು ಒದಗಿತು. ಶ್ರೀ ಗುರುಕೃಪೆಯಿಂದ ಮನಮೋಹಿನಿಯು ಗರ್ಭಿಣಿಯಾಗಿ, ಕಾಲೋಚಿತವಾದ ವೈಭವಗಳನ್ನು ಅನುಭವಿಸುತ್ತ, ನವಮಾಸಗಳು ತುಂಬುತ್ತಲೆ ಹೆಣ್ಣು ಮಗುವನ್ನು ಹೆತ್ತಳು. ಆಗ ಅರಸನಿಗಾದ ಆನಂದವನ್ನು ವರ್ಣಿಸುವದು ಸುಸಾಧ್ಯವಲ್ಲ. ಬಹುದಿವಸ ಮೇಲೆ

ಳು—ಮಕ್ಕಳಿಂದು ಹಲುಬಿದವರಿಗೆ ಗಂಡಾಗಲಿ, ಹೆಣ್ಣಾಗಲಿ ಸಂತತಿಯಾದರೆ, ಎಷ್ಟು ಸಂತೋಷವಾಗುತ್ತದೆಂಬದನ್ನು ಬರೆದು ತಿಳಿಸಲಾಗುವದಿಲ್ಲ. ಅದು ಅನುಭವದಿಂದ ತಿಳಿಯತಕ್ಕದ್ದಾಗಿರುವದು. ವೀರವರ್ಮನ ಅಂತಃಕರಣವು ಆನಂದದಿಂದ ಉಕ್ಕಿಬರತೊಡಗಿತು. ಆತನು ತನ್ನ ಗುರುವನ್ನು ಮನಸ್ಸಿನಲ್ಲಿ ಸ್ಮರಿಸಿ ಶತಶಃ ಆತನನ್ನು ನಮಸ್ಕರಿಸಿದನು; ಯಾಚಕರಿಗೆ ದಾನಮಾಡುವದಕ್ಕಾಗಿ ಬಹಳ ಹಣವನ್ನು ಭಂಡಾರದೊಳಗಿಂದ ಕೊಡಿಸಿದನು; ಅವನ ಅಪ್ಪಣೆಯಿಂದ ಕಾರಾಗೃಹದಲ್ಲಿದ್ದ ಅಪರಾಧಿಗಳು ಮುಕ್ತರಾದರು; ಎಲ್ಲ ದೇವಾಲಯಗಳು ಶೃಂಗರಿಸಲ್ಪಟ್ಟವು; ಮಂಗಳವಾದ್ಯಗಳು ಮೊಳಗಿದವು. ರಾಜಪುತ್ರಿಯ ಜನನದ ಆನಂದಕ್ಕಾಗಿ ಪ್ರಜೆಗಳು ಸ್ವಾಮಿಭಕ್ತಿ ಪ್ರದರ್ಶಕವಾದ ಉತ್ಸವಗಳನ್ನು ಮಾಡತೊಡಗಿದರು. ಶಿಶುವನ್ನು ನೋಡಲು ಆತುರಪಡುತ್ತಿದ್ದ ಅರಸನಿಗೆ ದಾಸಿಯರು ರಾಜಪುತ್ರಿಯನ್ನು ತೋರಿಸಿದರು. ಆತನು ಕನ್ಯಾರತ್ನದ ಅಪ್ರತಿಮವಾದ ಸೌಂದರ್ಯಕ್ಕೆ ಬೆರಗಾಗಿ ಆನಂದಸಾಗರದಲ್ಲಿ ಮುಳುಗಿದನು. ಹೀಗೆ ಆನಂದಪರವಶನಾದ ಅರಸನು ಕಪಿಂಜಲಋಷಿಯ ಬಳಿಗೆ ಹೋಗಿ, ಪುತ್ರಿಯು ಜನಿಸಿದ ಸಂಗತಿಯನ್ನು ತಿಳಿಸಲು, ತ್ರಿಕಾಲಜ್ಞನಾದ ಆ ಮಹಾತ್ಮನು ಅರಸನನ್ನು ಕುರಿತು—ದೊರೆಯೇ, ನಿನಗೆ ಸಂತತಿಯಾದದ್ದು ಬಹು ಸಂತೋಷವು. ಆ ಕೂಸಿಗೆ ಪದ್ಮನಯನೆಯೆಂದು ಹೆಸರಿಡಿರಿ. ಸಾರ್ವಭೌಮನ ಮಗಳಾದ ಪದ್ಮನಯನೆಯು ಸಾರ್ವಭೌಮನ ಹೆಂಡತಿಯೂ, ಸಾರ್ವಭೌಮನ ತಾಯಿಯೂ ಆಗುವಳು. ಅದನ್ನು ನೀನು ಕಣ್ಣಾರೆ ನೋಡುವೆ. ಇದೆಲ್ಲ ಸರಿ; ಆದರೆ ನಿನ್ನ ಪುತ್ರಿಯು ಹದಿನಾರನೆಯ ವರುಷದ ಪ್ರಾಯದಲ್ಲಿ ನಿನ್ನನ್ನು ಅಗಲಿ ಬಹಳ ಸಂಕಟಗಳನ್ನು ಅನುಭವಿಸುವಳು. ನೀನು ಮಾತ್ರ ಅವಳಿಗೆ ಯಾವತ್ತು ವಿದ್ಯಾಭ್ಯಾಸವನ್ನು ಮನಮುಟ್ಟಿ ಮಾಡಿಸು. ಇಲ್ಲದಿದ್ದರೆ ಮುಂದೆ ಒದಗುವ ಸಂಕಟಗಳನ್ನು ನೀಗುವದು ಅವಳಿಗೆ ಬಹಳ ಕಠಿಣವಾದೀತು.

ಋಷಿಯ ಭವಿಷ್ಯವಚನದಲ್ಲಿ ಇಷ್ಟಸಂಗತಿಗಿಂತ ಅನಿಷ್ಟವಾದ ಸಂಗತಿಯು ಕಡಿಮೆಯಿದ್ದರೂ, ಆ ಅನಿಷ್ಟಸಂಗತಿಯಿಂದ ಅರಸನ ಮನಸ್ಸು ಬಹಳವಾಗಿ ನೊಂದಿತು. ಸಾಂಸಾರಿಕರು ಸದಾಸುಖವನ್ನು ಬಯಸುತ್ತಾರೆ; ದುಃಖದ ನೆರಳಿಗೆ ಸಹ ನಿಲ್ಲಲು ಅವರು ಅಂಜುವರು; ಆದರೆ ಸಂಸಾರದಲ್ಲಂತು ಸುಖ—ದುಃಖ

ಗಳು ಬಹುತರ ಜೋಡಾಗಿಯೇ ಬರುವವು. ಸದಾ ಸುಖಿಯಾಗಿರುವ ಸದಾ ದುಃಖಿಯಾಗಿರುವ ಸಾಂಸಾರಿಕರನ್ನು ಕಾಣುವದು ಅಸಂಭವವು. ಹೀಗಿದ್ದರೂ, ಸತ್ಸಮಾಗಮದಿಂದ ವೀರವರ್ಮನ ಮನಸ್ಸಿನ ಮೇಲೆ ಬಹುಮಟ್ಟಿಗೆ ಸತ್ಪರಿಣಾಮವಾಗಿದ್ದರೂ ಮಗಳ ವಿಯೋಗದುಃಖವು ಆತನನ್ನು ಅಲುಕಿಸದೆ ಬಿಡಲಿಲ್ಲ. ವೀರವರ್ಮನು ತಲ್ಲಣಿಸಿ ಸದ್ಗುರುವನ್ನು ಕುರಿತು—ಮಹಾತ್ಮರೇ, ಮುಪ್ಪಿನಲ್ಲಿ ಮಗಳ ವಿಯೋಗದುಃಖವನ್ನು ನಾನು ಹೇಗೆ ತಡೆಯಲಿ? ಮುಂದೆ ಒದಗಬಹುದಾದ ದುಃಖದ ಸ್ಮರಣದಿಂದಲೇ ನನ್ನ ಮನಸ್ಸು ಇಷ್ಟು ವ್ಯಾಕುಲವಾಗಿರಲು, ಪ್ರತ್ಯಕ್ಷವಾಗಿ ಒದಗಿದ ದುಃಖವು ನನಗೆ ಹೇಗೆ ಸಹನವಾದೀತು? ಮಗಳು ಹುಟ್ಟದಿದ್ದರೆ ನೆಟ್ಟಗಾಗುತ್ತಿತ್ತೆಂದು ನನಗೆ ತೋರುತ್ತದೆ, ಅನ್ನಲು ಋಷಿಯು—ಅರಸನೇ, ಏನು ವಿಚಿತ್ರವಿದು! ಮಗಳು ಹುಟ್ಟಿ ಒಂದು ದಿನವೂ ಆಗಿಲ್ಲ, ನಿನ್ನ ಚಿಂತೆಗೆ ಆರಂಭವಾಯಿತಲ್ಲ! ಸಾಂಸಾರಿಕರ ದಡ್ಡತನವು ಇಲ್ಲಿಯೇ ಇರುವದು. ಅವರು ಸಂಸಾರದಲ್ಲಿ ಕಾಣುವ ಸುಖದ ಪ್ರಸಂಗಗಳನ್ನು ಮಾತ್ರ ನೋಡಿ ಅವನ್ನು ಬಯಸಿ, ದುಃಖದ ಪ್ರಸಂಗಗಳನ್ನು ಮರೆತುಬಿಡುವರು. ಹೇಗಂದರೆ, ಅವರು ಮಕ್ಕಳನ್ನು ಬಯಸುವರು; ಆದರೆ ಮಕ್ಕಳಿಗೆ ಒದಗತಕ್ಕವಾಗಿರುವ ಬೇನೆ-ಬೇಸರಿಕೆ, ಸಾವು-ಕೇಡುಗಳನ್ನು ಮನಸ್ಸಿನಲ್ಲಿ ತರುವದಿಲ್ಲ; ಅದರಂತೆ ಅವರು ದುಡ್ಡಿಗೆ ಬಾಯಿ ತೆರೆಯುವರು; ಆದರೆ ಕಷ್ಟಪಟ್ಟು ಗಳಿಸಿಟ್ಟ ದುಡ್ಡನ್ನು ಅನ್ಯರು ಸೆಳಕೊಯ್ಯುವಾಗ, ಇಲ್ಲವೆ ತಾವು ಈ ಲೋಕವನ್ನು ಬಿಟ್ಟು ತೆರಳುವಾಗ ಆಗುವ ದುಃಖವನ್ನು ಮನಸ್ಸಿನಲ್ಲಿ ತರುವದಿಲ್ಲ. ಅರಸೇ, ವಿಚಾರಮಾಡಿ ನೋಡು, ನೀನು ಮಗಳನ್ನು ಇನ್ನೂ ಎತ್ತಿಲ್ಲ-ಆಡಿಸಿಲ್ಲ, ಆಕೆಗೆ ಉಣಿಸಿಲ್ಲ-ತಿನಿಸಿಲ್ಲ, ಆಕೆಯಿಂದ ಸುಖವಾಗಿಲ್ಲ-ಸಂತೋಷವಾಗಿಲ್ಲ; ಬರಿ ಮಗಳ ಮೋರೆಯನ್ನು ಮಾತ್ರ ನೋಡಿರುವೆ. ಅಷ್ಟೇ ಅಪರಾಧಕ್ಕೆ ಇಂಥ ಶಿಕ್ಷೆಯು ನಿನಗೆ ಒದಗಿರುವದೆಂದಬಳಿಕ ಈಶ್ವರೀಮಾಯೆಯ ಸಾಮರ್ಥ್ಯವು ಅಗಾಧವಾದದ್ದೇ ಸರಿ.

ಅರಸೇ, ವಿಚಾರಮಾಡು. ಆಗುವದನ್ನು ತಪ್ಪಿಸಲು ಯಾರು ಸಮರ್ಥರು? ಕಾಲಚಕ್ರಕ್ಕೆ ಅನುಸರಿಸಿ ಒದಗುವ ಸುಖದುಃಖಗಳನ್ನು ಅನುಭವಿಸಲಿಕ್ಕೆ ಮನುಷ್ಯನು ಎದೆಗೊಟ್ಟು ನಿಲ್ಲಲಿಕ್ಕೆ ಬೇಕು. ಸ್ವಕರ್ಮಾನುಸಾರ ಪರಮೇಶ್ವರನಿಂದ ನಿಯಮಿಸಲ್ಪಡುವ ಸುಖದುಃಖಗಳನ್ನು ಸಮಾನವಾಗಿ ತಿಳಿಯ

ದಿದ್ದರೆ ಅಪರಾಧವಾಗುವದು. ಮನುಷ್ಯನು ಕಷ್ಟಗಳಿಗೆ ಹೆದರತಕ್ಕದ್ದಲ್ಲ. ಅವು ನಮ್ಮ ಹಿತಕ್ಕಾಗಿಯೇ ಬರುತ್ತವೆಂದು ತಿಳಿಯಬೇಕು. ಈವರೆ ತ್ತಿನ ವರೆಗೆ ಬಗೆಬಗೆಯ ಕಷ್ಟಗಳನ್ನು ಅನುಭವಿಸಿದವರೇ ಧನ್ಯರಾಗಿರುವರು. ಪಾಂಡವ ರನ್ನು ನೋಡು, ಹರಿಶ್ಚಂದ್ರನನ್ನು ನೆನಪಿಗೆ ತಂದುಕೋ, ಸಿರಿಯಾಳರಾಜ ನನ್ನು ಮರೆಯಬೇಡ. ಅಶುದ್ಧವಾದ ಚಿನ್ನವನ್ನು ಪುಟಕ್ಕೆ ಹಾಕದಿದ್ದರೆ ಅದು ಶುದ್ಧವಾಗಬಹುದೋ? ಅದರಂತೆ ಹೊಲಸಾದ ನಮ್ಮ ಮನಸ್ಸನ್ನು ಸಂಸಾರತಾಪ ವೆಂಬ ಅಗ್ನಿಯಲ್ಲಿ ಪುಟಕ್ಕೆ ಹಾಕದಿದ್ದರೆ ಶುದ್ಧವಾಗಲಾರದು. ಅರಸಾ, ಇನ್ನು ಹದಿನಾರುವರ್ಷಗಳ ಮೇಲೆ ಆಗುವ ಮಗಳ ವಿಯೋಗದುಃಖದ ಪಾಡೇನು? ಆಜನ್ಮ ಒಂದನ್ನೊಂದು ಹೊಂದಿಕೊಂಡಿರುವ ನಿನ್ನ ಶರೀರ—ಜೀವಗಳ ವಿಯೋಗವು ಒಂದಿಲ್ಲೊಂದು ದಿನ ಆಗತಕ್ಕದ್ದೇ ಎಂಬದು ನಿನಗೆ ತಿಳಿದಿಲ್ಲವೋ? ಅದರ ಸಲುವಾಗಿ ನೀನು ವ್ಯಸನಮಾಡುತ್ತ ಸರ್ವಸಂಗ ಪರಿತ್ಯಾಗವನ್ನು ಈ ವರೆಗೆ ಯಾಕೆ ಮಾಡಲಿಲ್ಲ? ಮುಂದೆ ಒದಗುವ ದುಃಖಕ್ಕಾಗಿ ಈಗಿನ ಸುಖಕ್ಕೆ ಎರವಾಗುವದು ಜಾಣತನವಲ್ಲ. ಸುಖದುಃಖಗಳು ಮನುಷ್ಯಾಧೀನವೇ? ಅವು ಮುಂಗಡ ಗೊತ್ತಾಗದಿರುವದರಿಂದಲೇ ಮೂಢರ ಎಲ್ಲ ವ್ಯವಹಾರಗಳು ಸುಸೂ ತ್ರವಾಗಿ ನಡೆದಿವೆ. ನೀನು ಮೂಢನಾಗಬೇಡ. ಪರೀಕ್ಷಿತನ ವೃತ್ತಾಂತವನ್ನು ಇಲ್ಲಿ ನೆನಪಿಗೆ ತಂದುಕೋ. ಆ ಮಹಾತ್ಮನು ತನ್ನ ಮರಣಕಾಲವು ಗೊತ್ತಾ ದಾಗ ಸಮಾಧಾನಪಟ್ಟು ಮುಕ್ತಿಯನ್ನು ಸಾಧಿಸಿಕೊಂಡಂತೆ, ಜಾಗರೂಕನಾಗಿ ನೀನು ಮಗಳ ಹಿತವನ್ನು ಸಾಧಿಸು.

ನನ್ನ ರುಷಿಯ ಈ ಉಪದೇಶದಿಂದ ವೀರವರ್ಮನ ಮನಸ್ಸು ಬಹು ಮಟ್ಟಿಗೆ ಸಮಾಧಾನವಾಯಿತು. ಆತನು ಕಪಿಂಜಲನ ಹೇಳಿಕೆಯಂತೆ ಮಗಳಿಗೆ ಪದ್ಮ ನಯನೆಯೆಂದು ಹೆಸರನ್ನಿಡುವದಕ್ಕೆ ಹೇಳಿದನು. ಪದ್ಮನಯನೆಯು ದಿನದಿ ನಕ್ಕೆ ಬೆಳೆಯಹತ್ತಿದಳು. ಅವಳ ಬಾಲಕ್ರೀಡೆಗಳು ಎಲ್ಲರ ಮನಸ್ಸನ್ನು ಆನಂದ ಗೊಳಿಸಹತ್ತಿದವು. ರಾಜಪುತ್ರಿಯು ಐದು ವರ್ಷದವಳಾಗಲು, ಅರಸನು ಅವ ಳನ್ನು ವಿದ್ಯಾಭ್ಯಾಸಕ್ಕಾಗಿ ಕಪಿಂಜಲನ ಬಳಿಗೆ ಕಳುಹಿದನು. ಸಕಲ ವಿದ್ಯಾಪಾ ರಂಗತನಾದ ಕಪಿಂಜಲನು ರಾಜಪುತ್ರಿಯ ಯೋಗ್ಯತೆಯನ್ನನುಸರಿಸಿ ಕ್ರಮವಾಗಿ ಆಕೆಯನ್ನು ಜ್ಞಾನಸಂಪನ್ನಳಾಗಮಾಡಿದನು. ಪದ್ಮನಯನೆಯು ಋಷಿಯ

ಪ್ರಸಾದದಿಂದ ತನ್ನ ಹದಿನಾಲ್ಕು ವರ್ಷದ ವಯಸ್ಸಿನಲ್ಲಿ ಸುಸಂಸ್ಕೃತಳಾದಳು. ಅರಸನು ಆವಳಿಗೆ ಧನುರ್ವಿದ್ಯೆಯನ್ನು ಸ್ವತಃ ಕಲಿಸಿದನು. ಕುಮರಿ ಹತ್ತುವಲ್ಲಿ ಪದ್ಮನಯನೆಯು ಒಳ್ಳೇ ಪ್ರಾವಿಣ್ಯವನ್ನು ಸಂಪಾದಿಸಿದಳು. ಆಕೆಯು ಮೊದಲೇ ಸ್ವಭಾವಸುಂದರಿಯು, ಮೇಲಾಗಿ ವಿದ್ಯಾವಿನಯಸಂಪನ್ನಳು, ಅದರಲ್ಲಿ ಯೌವನೋದಯವು; ಕೇಳುವದೇನು? ಬಹು ಜನ ರಾಜಪುತ್ರರು ಆವಳನ್ನು ಮದುವೆಯಾಗುವದಕ್ಕಾಗಿ ಆತುರಪಡುತ್ತಿದ್ದರು; ಆದರೆ ವೀರವರ್ಮನು ಮಗಳ ವಿಯೋಗದಭಯದಿಂದ ಹದಿನಾರುವರ್ಷ ಮೀರುವವರೆಗೆ ಅವಳ ಲಗ್ನ ಮಾಡಲಿಕ್ಕಿಲ್ಲೆಂದು ನಿಶ್ಚಯಿಸಿದನು. ಶ್ರೀ ಗುರುಪ್ರಸಾದರೂಪವಾದ ಆ ಕನ್ಯಾರತ್ನವು ವೀರವರ್ಮನ ಪಂಚಪ್ರಾಣವಾಗಿತ್ತು!



## ೨ ನೆಯ ಪ್ರಕರಣ.

# ವೈಭವಶಿಖರ.



ಬರಬರುತ್ತ ಪದ್ಮನಯನೆಗೆ ಹದಿನಾರು ವರ್ಷಗಳು ತುಂಬಿ ಯೌವ್ವನವ್ಯಕ್ತವಾಯಿತು. ಆಕೆಯ ಶರೀರವು ಗೌರವರ್ಣದ್ದು, ಮೂಗು ಸರಳ, ಕಣ್ಣುದೊಡ್ಡವು. ತುಟಿಗಳು ಅಚ್ಚಗೆಂಪು, ಕುಚಗಳು ತಮ್ಮ ಸೀಮೆಯನ್ನು ಒತ್ತಿ ಆದೇ ಮೇಲಕ್ಕೆ ಬಂದಿದ್ದವು, ಟೊಂಕವು ಸಣ್ಣಾಗಿತ್ತು, ನಿತಂಬಗಳು ಸ್ಥೂಲವಾಗಿದ್ದವು. ಆಕೆಯು, ತುಂಬಿದ ಮೈಕಟ್ಟಿನಿಂದಲೂ, ಸ್ವಚ್ಛವಾದ ಹಣೆಯನ್ನಲಂಕರಿಸುವ ಉಂಗುರುಗೂದಲುಗಳಿಂದಲೂ ಮನೋಹರವಾಗಿ ಒಪ್ಪುತ್ತಿದ್ದಳು. ಪದ್ಮನಯನೆಯ ಕಣ್ಣಿನ ನೋಟ, ಹುಬ್ಬುಗಳ ಅಪರೂಪದ ಆಟದಾಟ, ನಗೆಮೊಗದ ಮಾಟ, ಮಂಜುಲವಾಣಿಯ ಸವಿಯೂಟಇವು ಎಂಥವರನ್ನಾದರೂ ಮರುಳುಮಾಡದೆ ಬಿಡುತ್ತಿದ್ದಿಲ್ಲ. ಆ ಸುಕುಮಾರಿಗೆ ವಸ್ತ್ರಾಭರ-

ಣದ ಆಡಂಬರವು ಸೇರದು. ಆಕೆಯು ಹಳದಿಯಬಣ್ಣದ ಸೂಕ್ಷ್ಮವಾದ ರೇಶಿಮೆಯ ಜರದಂಚಿನ ಸೀರೆಯನ್ನು ಉಡಲಿಕ್ಕೂ, ಜರದಂಚಿನ ಕೆಂಪು ರೇಶಿಮೆಯ ಕುಪ್ಪಸವನ್ನು ತೊಡಲಿಕ್ಕೂ ಬಹಳವಾಗಿ ಮೆಚ್ಚಿದ್ದಳು. ಎಂಥ ಶೀರೆ-ಕುಪ್ಪಸಗಳಿದ್ದರೂ ಪದ್ಮನಯನೆಯ ಚಲ್ವಿಕೆಯಲ್ಲಿ ಕೊರತೆಯುಂಟಾಗುತ್ತಿದ್ದಿಲ್ಲ- ಆ ಲೋಕಸುಂದರಿಯ ಮೈಮೇಲೆ ಅಲಂಕಾರಗಳು ಬಹು ವಿರಲವಾಗಿದ್ದವು- ಕಿವಿಯಲ್ಲಿ ವಜ್ರದ ಓಲೆ, ಮೂಗಿನಲ್ಲಿ ವಜ್ರದ ಮೂಗಬಟ್ಟು, ಕೊರಳಲ್ಲಿ ದೊಡ್ಡ ಮುತ್ತಿನ ಒಂಟಿಳೆಯ ಸರ, ಕೈಗಳಲ್ಲಿ ರತ್ನದ ಕಂಕಣ, ಟೊಂಕದಲ್ಲಿ ರತ್ನಖಚಿತವಾದ ಪಟ್ಟಿ, ಕಾಲಲ್ಲಿ ಸರಪಳಿ ಇಷ್ಟೇ ಪದ್ಮನಯನೆಯ ಪ್ರೀತಿಯ ಆಭರಣಗಳಾಗಿದ್ದವು. ಆಕೆಯ ತಲೆಯಲ್ಲಿ ಮುತ್ತಿನ ದಂಡೆಯೂ, ಚಕ್ರದುರಬಿನಲ್ಲಿ ಒಂದೇ ಒಂದು ಸುಂದರವಾದ ಚಿನ್ನದ ಗುಲಾಬಿಯ ಹೂವೂ ಇರುತ್ತಿದ್ದವು. ಹಣೆಯಲ್ಲಿಯ ಸುಂದರವಾದ ತಿಲಕದಿಂದ ಆಕೆಯು ಎದ್ದು ಕಾಣುತ್ತಿದ್ದಳು. ಈ ಮೇರೆಗೆ ಪುಟಚಂಡಿನಂತೆ ಮನೋಹರವಾಗಿ ಒಪ್ಪುತ್ತಿದ್ದ ಪದ್ಮನಯನೆಯು, ವಿದ್ಯಾವಿನಯಸಂಪನ್ನೆಯಾದ್ದರಿಂದ ಸ್ವರ್ಗಾಂಗನೆಯಂತೆ ಕಂಗೊಳಿಸಿ, ಮನುಷ್ಯಮಾತ್ರರ ಆದರಕ್ಕೆ ಪಾತ್ರಳಾಗಿದ್ದದ್ದು ಸೋಜಿಗವಲ್ಲ! ಆಗಾಗ್ಗೆ ಪದ್ಮನಯನೆಯು ಗಂಡಸರ ಉಡಿಗೆ-ತೊಡಿಗೆಗಳನ್ನು ಧರಿಸುತ್ತಿದ್ದಳು. ಆಗಿನ ಆಕೆಯ ಚಲ್ವಿಕೆಯಂತು ಬಲು ಕೌತುಕದ್ದಾಗಿರುತ್ತಿತ್ತು.

ಕಪಿಂಜಲನ ಭವಿಷ್ಯದ ಕಾಲಾವಧಿಯು ಒದಗಿರಲು, ವೀರವರ್ಮನು ಮಗಳ ರಕ್ಷಣವನ್ನು ಬಹಳ ಎಚ್ಚರದಿಂದ ಮಾಡುತ್ತಿದ್ದನು. ಆಕೆಗೆ ಅಂಗರಕ್ಷಕರು ನಿಯಮಿಸಲ್ಪಟ್ಟಿದ್ದರು. ರಾಜಪುತ್ರಿಯು ಕುದರೆ ಹತ್ತುವಲ್ಲಿ ಒಳ್ಳೇ ಪ್ರವೀಣಳಾಗಿದ್ದಳೆಂದು ಹಿಂದೆ ಹೇಳಿರುತ್ತವಷ್ಟೆ? ಆದರೆ ಅರಸನ ನಿರ್ಧಾರದ ಅಪ್ಪಣೆಯಿದ್ದದ್ದರಿಂದ ಆಕೆಯು ಕುದುರೆಯ ಸನಿಯಕ್ಕೆ ಸಹ ಹೋಗುವಂತೆ ಇದ್ದಿಲ್ಲ. ಮನುಷ್ಯನ ಮನಸ್ಸಿನ ಕೋರಿಕೆಗಳು ಪ್ರತಿಬಂಧದಿಂದ ಮತ್ತಿಷ್ಟು ಬಲಪಡುತ್ತವೆ ಅದರಂತೆ ವೀರವರ್ಮನ ಪ್ರತಿಬಂಧದಿಂದ ಪದ್ಮನಯನೆಯು ಕುದುರೆ ಹತ್ತುವ ಲವಲವಿಕೆಯು ಹೆಚ್ಚುತ್ತ ಹೋಯಿತು. ತಾನೊಂದು ಬಗೆದರೆ, ದೈವವು ಮತ್ತೊಂದು ಬಗೆಯುತ್ತದಂತೆ. ಈ ಮೇರೆಗೆ ವೀರವರ್ಮನು ಮಗಳ ವಿಯೋಗವಾಗಬಾರದೆಂದು ಯತ್ನಿಸುತ್ತಿದ್ದರೂ, ಆತನ ಮಗಳು

ನಿಯೋಗವ ಬಲಿಗೆ ತಾನಾಗಿ ಬೀಳಲಿಕ್ಕೆ ಹಾತೊರೆಯುತ್ತಿದ್ದನು! ಹೀಗೆ ಕೆಲವು ದಿನಗಳು ಕ್ರಮಿಸುತ್ತಿರಲು, ಕಪಿಂಜಲನು [illegible] ಮೂಲಕ ನಿರ್ವಾಣ ವನ್ನು ಹೊಂದಿದನು. ಆ ಋಷಿವರ್ಯನಲ್ಲಿ ಅರಸನವನಷ್ಟೇ ಅಲ್ಲ; ಪಟ್ಟಣದೊಳಗಿನ ಆಬಾಲವೃದ್ಧರ ಭಕ್ತಿಯೂ ವಿಶೇಷವಾಗಿತ್ತು. ಈ ಲೋಕಪ್ರಿಯತೆಗೆ ಅನುಸರಿಸಿ ಆ ಮಹಾತ್ಮನ ಶ್ಮಶಾನಯಾತ್ರೆಯು ಬಹುಮಾನದಿಂದ ಸಾಗಿದ್ದು ಆಶ್ಚರ್ಯವಲ್ಲ. ಸದ್ಗುರುವಿನ ಮರಣದಿಂದ ಸೀರಧ್ವಜನ ಮನಸ್ಸು ಖಿನ್ನವಾದದ್ದರಿಂದ, ಆತನು ಮಗಳ ಯೋಗಕ್ಷೇಮದಲ್ಲಿ ಸ್ವಲ್ಪ ದುರ್ಲಕ್ಷ್ಯಮಾಡಿದನು. ಈ ದುರ್ಲಕ್ಷ್ಯವೇ ತಂದೆ-ಮಕ್ಕಳ ವಿಯೋಗಕ್ಕೆ ಕಾರಣವಾಯಿತೆಂದು ಹೇಳಬೇಕಾಯಿತು.

ಕಪಿಂಜಲನ ಶ್ಮಶಾನಯಾತ್ರೆಯ ಸಮಾರಂಭಕ್ಕಾಗಿ ಅರಸನ ತೀಕ್ಷ್ಣವೇಗವೆಂಬ ಹೆಸರಿನ ಪಟ್ಟದ ಕುದುರೆಯು ಶೃಂಗರಿಸಲ್ಪಟ್ಟಿತ್ತು. ಪದ್ಮನಯನೆಯು ಅದನ್ನು ಹತ್ತುವ ಆತುರತೆಯನ್ನು ತೋರಿಸಲು, ಅರಸನು ಪ್ರಸಾದದಿಂದ ಅದಕ್ಕೆ ಒಡಂಬಟ್ಟನು. ಆಗ ಪದ್ಮನಯನೆಯ ಆನಂದವು ಹೊಟ್ಟೆಯಲ್ಲಿ ಹಿಡಿಸದಾಯಿತು. ಆಕೆಯು ಪೂರಸರದಾರರಿಗೆ ಒಪ್ಪುವಂಥ ಪೋಷಾಕನ್ನು ಹಾಕಿಕೊಂಡಳು. ಖಡ್ಗವು ಆಕೆಯ ಟೊಂಕದಲ್ಲಿ ಅಲೆದಾಡುತ್ತಿತ್ತು. ಬಿಲ್ಲು-ಬತ್ತಳಿಕೆಗಳು ಆಕೆಯ ಬೆನ್ನಿಗೆ ಒಪ್ಪುತ್ತಿದ್ದವು. ಹೀಗೆ ಉತ್ಸಾಹದಿಂದ ಪುರುಷವೇಷವನ್ನು ಧರಿಸಿದ ರಾಜಪುತ್ರಿಯನ್ನು ಪ್ರಜೆಗಳು ಕೌತುಕದಿಂದ ನೋಡುತ್ತಿರಲು, ಆಕೆಯು ಠೀವಿಯಿಂದ ಕುದುರೆಯನ್ನು ಹತ್ತಿದಳು. ಅಶ್ವಾರೋಹಣದಲ್ಲಿ ಆಕೆಯ ಗಟ್ಟಿಗತನವನ್ನು ಎಲ್ಲರೂ ಬಲ್ಲವರಾದ್ದರಿಂದ ಯಾವ ಬಗೆಯ ಅಂದೇಶಕ್ಕೂ ಅವಕಾಶವಿದ್ದಿಲ್ಲ. ಪದ್ಧತಿಯಂತೆ ಅಂಗರಕ್ಷಕರು ಕುದುರೆಯನ್ನೊಂದಿ ಸುತ್ತುಗಟ್ಟಿ ಆಕೆಯನ್ನು ರಕ್ಷಿಸುತ್ತಿದ್ದರು. ಮೆರವಣಿಗೆಯು ಉತ್ಸವದಿಂದ ಸಾಗಿತ್ತು. "ಬಲವಿಲ್ಲದ ಕಾಲದಲ್ಲಿ ನೆಲವೆಷ್ಟು ಬಡೆಯಿತೆಂ"ಬ ನಾಣ್ಣುಡಿಯು ಸುಳ್ಳಲ್ಲ. ಪಟ್ಟದ ಕುದುರೆಯ ನೆಲೆಯನ್ನು ತಾನು ಬಲ್ಲವಳೆಂದು, ಪದ್ಮನಯನೆಯು ಅಭಿಮಾನಪಡುತ್ತಿದ್ದಳು; ಅದರೆ "ಹೆಂಗಸರ ನೆಲೆ, ಕುದುರೆಯನೆಲೆ, ನೀರಿನ ನೆಲೆ ಯಾರಿಗೂ ತಿಳಿಯುವದಿಲ್ಲೆಂ"ದು ಅನುಭವಿಕರು ಹೇಳುವರು. ಯಾವದು ನಿಜವೋ ದೇವರಿಗೆ ಗೊತ್ತು! ಈಗಂತು ಪದ್ಮನಯನೆಯು ಕುದು

ರೆಯನ್ನು ಒಂದುಸಾರಿ ಚಬಕದಿಂದ ಹೊಡೆದದ್ದೇ ತಪ್ಪು, ಅದು ಭಯಂಕರವಾದ ವೇಗದಿಂದ ಓಡತೊಡಗಿತು. ಕುದುರೆಯ ವೇಗಾತಿಶಯಕ್ಕೆ ಜನಸಮೂಹವು ಚದರಿತು; ಮೆರವಣಿಗೆಯು ಹಿಂದಾಯಿತು; ಅಂಗರಕ್ಷಕರು ಹಿಂದೆ ಉಳಿದರು. ಪದ್ಮನಯನೆಯು ಕುದುರೆಯನ್ನು ನಿಲ್ಲಿಸಲಿಕ್ಕೆ ವಿಶ್ವಪ್ರಯತ್ನ ಮಾಡಿದಾಗ್ಯೂ ಅದು ಆಕೆಯ ಅಂಕಿತಕ್ಕೆ ಬರಲಿಲ್ಲ. ತಡೆತಡೆದಂತೆ ಅದು ಹೆಚ್ಚು ಹೆಚ್ಚು ವೇಗದಿಂದ ಓಡತೊಡಗಿತು. ಹೀಗೆ ತಾಸುಹೊತ್ತು ಏರಿದಾಗಿನಿಂದ ಓಡಹತ್ತಿದ ಕುದುರೆಯು, ಒಂಬತ್ತು ತಾಸಿನವರೆಗೆ ಓಡಿ ಓಡಿ, ಒಂದು ಅರಣ್ಯವನ್ನು ಹೊಕ್ಕು ದಣಿದು ಕಳವಳಗೊಂಡು, ನೆಲಕ್ಕೆ ಬಿದ್ದಿತು. ಪದ್ಮನಯನೆಯೂ ಅರಣ್ಯದಲ್ಲಿ ಒತ್ತಟ್ಟಿಗೆ ಸಿಡಿದು ಬಿದ್ದಳು.

ಕುದುರೆಯ ಪ್ರಚಂಡವಾದ ವೇಗದಮೂಲಕವಾಗಿ ಹೌಹಾರಿ ಕುಳಿತುಕೊಂಡಿದ್ದ ಪದ್ಮನಯನೆಯು, ಕುದುರೆಯ ಮೇಲಿಂದ ಒಮ್ಮೆಲೆ ನೆಲಕ್ಕೆ ಬಿದ್ದದ್ದರಿಂದ ಬಹಳ ಗಾಸಿಯಾದಳು. ಈ ಭಯಂಕರವಾದ ಅಪಘಾತದಲ್ಲಿ ಆ ಕೋಮಲೆಯ ಇಹಲೋಕದ ಯಾತ್ರೆಯೇ ಮುಗಿದು ಹೋಗತಕ್ಕದ್ದಿತ್ತು; ಆದರೆ ಆ ಯಾತ್ರೆಯಲ್ಲಿ ಆಕೆಯು ಇನ್ನೂ ಬಗೆಬಗೆಯ ಸುಖದುಃಖಗಳನ್ನು ಅನುಭವಿಸಬೇಕಾಗಿದ್ದದ್ದರಿಂದ ಹಾಗಾಗಲಿಲ್ಲ. ಅಸಹ್ಯವೇದನೆಯಿಂದ ಆಕೆಯ ಪ್ರಜ್ಞೆಯು ಮಾತ್ರ ತಪ್ಪಿತು. ಆ ಅನಾಥಳು ಅರಣ್ಯದಲ್ಲಿ ಬೀಸುತ್ತಿದ್ದ ತಂಗಾಳಿಯಿಂದ ಕೆಲಹೊತ್ತಿನಮೇಲೆ ತಾನಾಗಿ ಎಚ್ಚತ್ತು, ಬೆದರಿದ ಚಿಗರೆಯಂತೆ ತನ್ನ ದೊಡ್ಡ ಕಣ್ಣುಗಳನ್ನು ನಾಲ್ಕೂಕಡೆಗೆ ತಿರುಗಿಸಿ ನೋಡಿದಳು. ಮರಣಹೊಂದಿದ ಕುದುರೆಯೂ, ಭಯಂಕರವಾದ ಅರಣ್ಯವೂ ಅವಳ ದೃಷ್ಟಿಗೆ ಬೀಳಲು, ಭಯ-ಶೋಕಗಳಿಂದ ಮೂರ್ಛೆಯು ಪುನಃ ಅವಳನ್ನು ಆವರಿಸಿತು. ಕೆಲಹೊತ್ತಿನಮೇಲೆ ಪದ್ಮನಯನೆಯು ಮತ್ತೆ ಎಚ್ಚತ್ತು ಎದ್ದು ಕುಳಿತುಕೊಳ್ಳಲು, ಭಯದಿಂದ ಆಕೆಯ ಮೈ ನಡುಗಹತ್ತಿತು; ತಾಯಿ-ತಂದೆಗಳ ಸ್ಮರಣವಾದಕೂಡಲೆ ಆಕೆಯ ಕಣ್ಣೀರುಗಳು ಬಳಬಳ ಉದುರಿದವು! ಅಹಾ! ದೈವದ ಏನು ವಿಚಿತ್ರಲೀಲೆಯಿದು! ಸುಖಸಂಪದಗಳಲ್ಲಿ ಲೋಲಾಡುತ್ತಿದ್ದ ಸಾರ್ವಭೌಮನ ಮಗಳು, ನಾಲ್ಕೆಂಟು ತಾಸುಗಳಲ್ಲಿ ನಿರಾಶ್ರಿತಳಾಗಿ ದುಃಖದಲ್ಲಿ ಮುಳುಗಿದ್ದು ಆಶ್ಚರ್ಯವಲ್ಲವೆ? ರಾಜಪುತ್ರಿಯು ಅಪ್ರಬುದ್ಧಳಂತೆ ದೊಡ್ಡ ದನಿಯಿಂದ ಅಳುತ್ತ ಗದ್ಗದ

ಕಂಠೆಯಾಗಿ—ಅಯ್ಯೋ, ಕುಮುರೆಯನ್ನೇರಬೇಕೆಂಬ ನನ್ನ ಲವಲವಿಕೆಯ ಪರಿಣಾಮವು ಹೀಗಾಯಿತೇ? ನನ್ನನ್ನು ತನ್ನ ಪ್ರಾಣಕ್ಕಿಂತಲೂ ಹೆಚ್ಚೆಂದು ತಿಳಿದು ರಕ್ಷಿಸುತ್ತಿದ್ದ ಅರಸನ ಮೋರೆಯು, ನನ್ನ ಕಣ್ಣಿಗೆ ಇನ್ನು ಹೇಗೆ ಬಿದ್ದೀತು! ನಾನು ಯಾವಕಡೆಗೆ ಹೋಗಲಿ, ಯಾರನ್ನು ಹೊಂದಲಿ? ನನ್ನನ್ನು ಈ ಸಂಕಟದೊಳಗಿಂದ ಯಾರು ಪಾರುಮಾಡಿಯಾರು? ಅಪ್ಪಾ, ನನ್ನಿಂದ ದೊಡ್ಡ ತಪ್ಪಾಯಿತು, ಹೇಗಾದರೂ ಮಾಡಿ ನನ್ನನ್ನು ಕರಕೊಂಡು ಹೋಗು, ನನಗೆ ಬಹಳ ಹೆದರಿಕೆ ಬರುತ್ತದೆ. ಅಪ್ಪಾ, ನಾನು ನಿನ್ನನ್ನು ಅಗಲಿದ್ದರಿಂದ ನೀನು ಎಷ್ಟು ಪ್ರಲಾಪಿಸುತ್ತಿರುವೆಯೋ ತಿಳಿಯದು. ಈ ದುರ್ದೈವಿಯಾದ ಪದ್ಮನಯನೆಗೆ ಸ್ವಲ್ಪ ದುಃಖವಾದರೆ ನಿಮ್ಮ ಪ್ರಾಣವೇ ಹೋಗುತ್ತಿತ್ತಲ್ಲ (ಸುಮ್ಮನಾಗಿ ಕಣ್ಣು ಒರಿಸುತ್ತ ಭ್ರಾಂತಿಯಿಂದ) ಛೇ, ನಾನು ಕನಸಿನಲ್ಲಿದ್ದೇನೆ. ಇಲ್ಲದಿದ್ದರೆ, ಇಂದು ಮುಂಜಾನೆ ಅರಮನೆಯಲ್ಲಿ ಸುಖದಿಂದಿದ್ದ ನಾನು, ಇಂಥ ಘೋರಾರಣ್ಯವನ್ನು ಸೇರಿ ಕಷ್ಟಪಡುವ ಬಗೆ ಹೇಗೆ? ಅಯ್ಯೋ! ಕನಸು ಹೇಗೆ ಆದೀತು, ಇದು ನಮ್ಮ ತೀಕ್ಷ್ಣವೇಗನೆಂಬ ಪಟ್ಟದ ಕುದುರೆಯು, ಅದರ ಮೇಲಿಂದ ಬಿದ್ದದ್ದರಿಂದ ನನ್ನ ಮೈಯೆಲ್ಲವು ಲಿಕಿಲಿಕಿಯಾಗಿದೆ, ನನ್ನ ಉಡಿಗೆ-ತೊಡಿಗೆಗಳು ರಕ್ತಮಯವಾಗಿವೆ, ಧನುಸ್ಸು ಅಲ್ಲಿ ಸಿಡಿದು ಬಿದ್ದದೆ. ಅಲ್ಲ, ಇದು ಕನಸಲ್ಲ. ನಾನು ನಿಜವಾಗಿಯೇ ಅರಣ್ಯದಲ್ಲಿದ್ದೇನೆ. ಇನ್ನೆಲ್ಲಿಯ ತಂದೆಯು, ಇನ್ನೆಲ್ಲಿಯ ತಾಯಿಯು, ಇನ್ನೆಲ್ಲಿಯ ಆಪ್ತೇಷ್ಟರು! ಪರಮೇಶ್ವರಾ, ದೀನಬಂಧೋ, ಅನಾಥರಕ್ಷಕಾ, ಇಂಥ ದುರ್ಘಟ ಪ್ರಸಂಗವನ್ನು ನನ್ನ ಮೇಲೆ ಯಾಕೆ ತಂದೆ? ನಾನು ಮಾಡಿದ ಅಪರಾಧವಾದರೂ ಯಾವದು?

ಈ ಪ್ರಕಾರ ರಾಜಪುತ್ರಿಯು ಹಲುಬಿ, ಹಂಬಲಿಸಿ, ಚೀರಿ, ಹಣೆಯನ್ನು ಚಚ್ಚಿ, ಎದೆಬಡಕೊಂಡು, ದುಃಖಿಸಿ ಹಣ್ಣಾದಮೇಲೆ ಮನಸ್ಸಿನಲ್ಲಿ —ನನ್ನ ಈ ಅರಣ್ಯರೋದನವನ್ನು ಯಾರು ಕೇಳಬೇಕು? ನೀರಡಿಕೆಯಾಗಿ ಗಂಟಲು ಹರಿಯುತ್ತದೆ; ಹೇಗೂ ನಾನು ಇಂದು ಪ್ರಾಣಕ್ಕೆ ಎರವಾಗುವದು ನಿಶ್ಚಯವು. ನೀರು ಕುಡಿದಾದರೂ ಸಾಯುವೆನು, ಎಂದು ಯೋಚಿಸಿ, ಮೇಲಕ್ಕೇಳಲು, ಕಸುವುಗೆಟ್ಟಿದ್ದರಿಂದ ಅವಳ ಕಣ್ಣುಗಳಲ್ಲಿ ದೀಪಹಚ್ಚಿದಂತಾಗಿ ಪುನಃ ಆಕೆಯು ನೆಲಕ್ಕೆ ಕೂಳಿತಳು. ಆ ಅರಣ್ಯದಲ್ಲಿ ಗಿಡಗಳು ದಟ್ಟವಾಗಿ ಬೆಳೆದದ್ದರಿಂದ ಸೂರ್ಯನ

ಕಾಶಕ್ಕೆ ಆಸ್ಪದವಿದ್ದಿಲ್ಲ. ಕಾಡುಮೃಗಗಳ ಕಾಲತುಳಿತದ ಸಪ್ಪಳವೂ, ನೀರಿನ ಪ್ರವಾಹದ ಘೋರೆಂಬ ಸಪ್ಪಳವೂ, ಮರಗಳ ತಿಕ್ಕಾಟದಿಂದುಂಟಾವ " ಜಿರ್ ಜಟ್ಟಿ "ಂಬ ಸಪ್ಪಳವೂ ಎಡೆಬಿಡದೆ ಕೇಳುತ್ತಿದ್ದವು. ರಾಜಪುತ್ರಿಯು ಸಾವರಿಸಿಕೊಂಡು ಮೆಲ್ಲನೆ ಎದ್ದು ನೀರಿದ್ದಲ್ಲಿ ಹೋಗುವದಕ್ಕಾಗಿ ಮುಂದಕ್ಕೆ ಹೆಜ್ಜೆಯಿಡಲು, ಕಾಲ್ತುಂಬ ಮುಳ್ಳುಗಳು ನಟ್ಟವು. ಆ ಮುಳ್ಳುಗಳ ಬಾಧೆಯಿಂದ ವಿಲಿವಿಲಿಯಾದ ಪದ್ಮನಯನೆಯು ನೆಲಕ್ಕೆ ಕುಸಿಬಿದ್ದು, ಆತುರದೊಡನೆ ನಟ್ಟ ಮುಳ್ಳುಗಳನ್ನು ತಕ್ಕೊಳ್ಳಲು, ಗಾಯಗಳಿಂದ ರಕ್ತವು ಸೋರಹತ್ತಿತು. ನೆಲದಮೇಲೆ ಕಾಲಿಟ್ಟ ಅನುಭವವಿಲ್ಲದ ಆ ಸುಕುಮಾರಿಯ ಹೊಟ್ಟೆಯಲ್ಲಿ ದುಃಖವು ಪುಟಿದೆದ್ದು ಸಿಲ್ಲದೆ ಮತ್ತೆ ಹೊರಬಿದ್ದಿತು. ಆಕೆಯ ಕಣ್ಣುಗಳಲ್ಲಿ ಮತ್ತೆ ನೀರುಗಳು ಘುಮುರಹತ್ತಿದವು. ಆಕೆಯು ಬುಡಗುಟ್ಟಿ ನೆಲದಮೇಲೆ ಉರುಳಾಡಹತ್ತಿದಳು, ಸಂತಾಪದಿಂದ ಕೈಯನ್ನು ನೆಲಕ್ಕಪ್ಪಳಿಸಹತ್ತಿದಳು; ಆದರೆ ಏನು ಮಾಡಿದರೂ ವ್ಯರ್ಥ. ನಿರಾಶೆಯ ಹೊರತು ಮತ್ತೊಂದು ಫಲವೇ ಆಕೆಗೆ ತೋರಲಿಲ್ಲ. ಅಷ್ಟರಲ್ಲಿ ಸೂರ್ಯನು ಅಸ್ತಂಗತನಾದದ್ದರಿಂದ ಅರಣ್ಯದಲ್ಲಿ ಕಗ್ಗತ್ತಲೆಯು ಮುಸುಕಲು, ಆಕೆಯು ಆಶೆದೊರೆದು ಪ್ರಾಯೋಪವೇಶನಕ್ಕೆ ಕುಳಿತಂತೆ ಒಂದು ಸ್ಥಳವನ್ನು ಹಿಡಿದು ಸುಮ್ಮನೆ ಕುಳಿತುಬಿಟ್ಟಳು.

ಪದ್ಮನಯನೆಯು ಕುಳಿತುಕೊಂಡಿದ್ದ ಅರಣ್ಯವು ಆಕೆಯ ತಂದೆಯ ರಾಜ್ಯದೊಳಗಿನದೇ ಇತ್ತು. ಕನೋಜಪಟ್ಟಣವು ಅಲ್ಲಿಂದ ಉತ್ತರಕ್ಕೆ ಸುಮಾರು ನಾಲ್ವತ್ತು ಹರದಾರಿಯ ಮೇಲೆ ಇತ್ತೆಂದು ಹೇಳಬಹುದು. ಈಗಿನಂತೆ ಪೂರ್ವದಲ್ಲಿ ಬೈಲುಪ್ರದೇಶಗಳು ವಿಶೇಷವಾಗಿರುತ್ತಿದ್ದಿಲ್ಲ. ಪ್ರತಿ ಒಬ್ಬ ಅರಸನ ರಾಜ್ಯದಲ್ಲಿ ಹಲವು ಅರಣ್ಯಗಳು ಇರುತ್ತಿದ್ದವಲ್ಲದೆ, ಅರಸರು ತಮ್ಮ ತಮ್ಮ ರಾಜ್ಯಗಳ ಮೇರೆಗಳಲ್ಲಿ ಬುದ್ಧಿಪೂರ್ವಕವಾಗಿ ದೊಡ್ಡ ದೊಡ್ಡ ಅರಣ್ಯಗಳನ್ನು ಕಾಯಿಡುತ್ತಿದ್ದರು. ಪರಚಕ್ರಗಳ ಅಭಿಯೋಗಕ್ಕೆ ಪ್ರತಿಬಂಧವಾಗಬೇಕೆಂಬದೇ ಅವರ ಉದ್ದೇಶವಾಗಿರುತ್ತಿತ್ತು. ಪದ್ಮನಯನೆಯ ಅಂಗರಕ್ಷಕರು ಆಕೆಯನ್ನು ಹಿಂಬಾಲಿಸಿದ್ದರೆ, ಆಕೆಯ ಸಂಕಟದ ನಿವಾರಣವು ಸುಲಭವಾಗಿ ಆಗುವಂತೆ ಇತ್ತು; ಆದರೆ ಪದ್ಮನಯನೆಯ ದುರದೃಷ್ಟವು ಹಾಗೆ ಆಗಗೊಡಲಿಲ್ಲ. ಪಟ್ಟದ ಕುದುರೆಯ ತೀಕ್ಷ್ಣವೇಗವನ್ನು ಅಂಗರಕ್ಷಕರ ಕುದುರೆಗಳು ಸರಿಗಟ್ಟಲಾರದೆ ಹಿಂದಾ

ದವು. ನೋಡನೋಡುತ್ತ ಪದ್ಮನಯನೆಯು ಅಂಗರಕ್ಷಕರಿಗೆ ಕಾಣದಾದಳು. ಕಡೆಗೆ ಪದ್ಮನಯನೆಯಿರುವಮೊತ್ತಟ್ಟಿಗೆ, ಅಂಗರಕ್ಷಕರು ಹುಡುಕುವಮೊತ್ತಟ್ಟಿಗೆ ಆಗಿ, ಅವರಲ್ಲಿ ಬಹುಜನರು ವೀರವರ್ಮನಿಗೆ ಮೋರೆ ತೋರಿಸಲಾರದೆ ದೇಸೆಗೆಟ್ಟು ಹೋಗಬೇಕಾಯಿತು! ಪ್ರಾರಬ್ಧಭೋಗವನ್ನು ಯಾರು ತಪ್ಪಿಸುವರು?

ರಾಜಪುತ್ರಿಯು ಸ್ವಸ್ಥವಾಗಿ ಕುಳಿತಿದ್ದರೂ, ಅವಳ ಮನಸ್ಸು ಸ್ವಸ್ಥವಾಗಿದ್ದಿಲ್ಲ. ಅದರಲ್ಲಿ ಬಗೆಬಗೆಯ ಕಲ್ಪನಾತರಂಗಗಳು ಹುಟ್ಟುತ್ತಿದ್ದವು. ತಾನು ಹಾವು-ಚೇಳುಗಳ ಕಡತದಿಂದ ಜೀವಬಿಡುವೆನೋ, ಕ್ರೂರ ಮೃಗಗಳಿಗೆ ತುತ್ತಾಗುವೆನೋ, ಕಳ್ಳಗ-ಕಾಕರ ಮರಾಳಿಯ ಬಲಿಗೆ ಬೀಳುವೆನೋ, ಪರರಾಜರ ಎಳತಕ್ಕೆ ಸಿಗುವೆನೋ, ಭೂತ-ಪಿಶಾಚಗಳ ಬಾಧೆಗೆ ಒಳಗಾಗುವೆನೋ! ದೇವರೇ, ನನ್ನ ಗತಿಯು ಏನಾಗುವದೋ, ಎಂದು ಆಕೆಯು ಚಿಂತಿಸುತ್ತಿದ್ದಳು. ರಾಕ್ಷಸರ ಭಯಂಕರವಾದ ಕೃತಿಗಳನ್ನು ಆಕೆಯು ಪುರಾಣಾಂತರಗಳಲ್ಲಿ ಕೇಳಿದ್ದಳು-ಓದಿದ್ದಳು. ಆ ಕೃತಿಗಳಂತು ನಮ್ಮ ಸುಕೋಮಲ ಹೃದಯದ ಪದ್ಮನಯನೆಯನ್ನು ಗಡಗಡನೆ ನಡುಗಿಸಿದವು. ರಾಕ್ಷಸರ ಪ್ರಾಚೀನಕಾಲದ ಬಲ-ವೈಭವಗಳು ಪದ್ಮನಯನೆಯ ಕಾಲದಲ್ಲಿ ಕೆಲಮಟ್ಟಿಗೆ ಕುಗ್ಗಿದ್ದರೂ, ಅವರ ಮಾಯಾ ವ್ಯಾಪಾರಗಳು ಮಾತ್ರ ಕುಗ್ಗಿದ್ದಿಲ್ಲ. ಇಂಥ ಕ್ರೂರ ರಾಕ್ಷಸರ ಬಾಧೆಯು ಎಲ್ಲಿ ತಟ್ಟುವದೋ, ಎಂದು ಆ ಅಬಲೆಯು ಚಿಂತಿಸಿದ್ದು ಆಶ್ಚರ್ಯವಲ್ಲ. ಒಟ್ಟಿಗೆ, ರಾಜಪುತ್ರಿಯ ಕೋಮಲ ಹೃದಯಕ್ಕೆ ಭಯ-ಶೋಕಗಳ ಘರ್ಷಣವಾಗುವಾಗ, ಆಕೆಗೆ ವಿಚಿತ್ರವಾದ ವ್ಯಥೆಯಾಗುತ್ತಿತ್ತು. ಆಕೆಯು ದುಃಖವೇಗವನ್ನು ಸಹಿಸಲಾರದೆ, ಒಮ್ಮೊಮ್ಮೆ ಕಣ್ಣೀರು ಸುರಿಸುವಳು, ನಿರಾಶೆಯಿಂದ ಮನಸ್ಸು ಕಲ್ಲುಮಾಡುವಾಗ ಒಮ್ಮೊಮ್ಮೆ ಕಣ್ಣು ಒರಸಿಕೊಂಡು ಜಗತ್ತನ್ನೇ ತೃಣೀಕರಿಸುವಳು; ತಾಯಿ-ತಂದೆಗಳ ಹಾಗು ಬಂಧು-ಮಿತ್ರರ ಸ್ಮರಣವಾಗಿ ಮೋಹವು ಒತ್ತರಿಸಲು, ಹುಡುಗರಂತೆ ಒಮ್ಮೊಮ್ಮೆ ದೊಡ್ಡ ದನಿತೆಗೆದು ಅಳುವಳು; ಜಗತ್ತು ಅಶಾಶ್ವತವೆಂಬ ಕಲ್ಪನೆಯು ಮನಸ್ಸಿನಲ್ಲಿ ಹೊಳೆಯಲು, ತತ್ವಜ್ಞಾನಿಗಳಂತೆ ವೈರಾಗ್ಯದಿಂದ ಒಮ್ಮೊಮ್ಮೆ ಗಂಭೀರವೃತ್ತಿಯನ್ನು ತಾಳುವಳು. ಹೀಗೆ ವಿರುದ್ಧ ಸ್ಥಿತಿಗಳ ಜಗ್ಗಾಟದಿಂದ ಪದ್ಮನಯನೆಯು ಗಾಸಿಯಾ

ಗುತ್ತಿರಲು, ಕುದುರೆಯ ಕೊಳಗಗಳ ಅಸ್ಪಷ್ಟವಾದ ಸಪ್ಪಳವು ಆಕೆಗೆ ಕೇಳಿಸ ತೊಡಗಿತು!

ಹೀಗೆ ಆಕಸ್ಮಿಕವಾಗಿ ಕೇಳತೊಡಗಿದ ಕುದುರೆಯ ಖುರಗಳ ಧ್ವನಿ ಯಿಂದ, ಪದ್ಮನಯನೆಯ ಮನಸ್ಸಿನೊಳಗಿನ ಕಲ್ಪನೆಗಳೆಲ್ಲ ಅಳಿದುಹೋಗಿ, ಆಕೆಯ ಮನಸ್ಸು ಏಕಾಗ್ರವಾಯಿತು. ಧ್ವನಿಯು ಕೇಳಬರುವದಿಕ್ಕಿಗೇ ಆಕೆಯು ಮೋರೆಮಾಡಿ ಕುಳಿತುಕೊಂಡು, ಸಪ್ಪಳವನ್ನು ಕಿವಿಗೊಟ್ಟು ಕೇಳತೊಡಗಿದಳು. ಬರಬರುತ್ತ ಸಪ್ಪಳವು ಸ್ಪಷ್ಟವಾಗಿ ಕೇಳಿಸಹತ್ತಿತು. ಸ್ವಲ್ಪ ಹೊತ್ತಿನಲ್ಲಿ ಅಶ್ವಾ ರೂಢನಾದ ಸರದಾರನೊಬ್ಬನು, ಪದ್ಮನಯನೆಯ ಎದುರಿಗೆ ಬಂದು ನಿಂತು ಕೊಂಡನು. ಪದ್ಮನಯನೆಯು ಎಷ್ಟು ದಿಟ್ಟತನವನ್ನು ತಂದುಕೊಂಡರೂ, ಆಕೆಯ ಹೃದಯವು ಭಯದಿಂದ ತಲ್ಲಣಿಸದೆ ಇರಲಿಲ್ಲ. ಆಕೆಯು ಮುಖ ವೆತ್ತಿ ಆ ಸರದಾರನನ್ನು ನೋಡದಾದಳು. ಆಕೆಯ ಮನಸ್ಸು ಅಸ್ವಸ್ಥವಾಯಿ ತು. ಬಂದವನು ಯಾವನಿರುವನೋ, ಇನ್ನು ಏನು ಅನರ್ಥವು ಒದಗುವದೋ, ಎಂಬ ವಿಚಾರವು ಮನಸ್ಸಿನಲ್ಲಿ ಉತ್ಪನ್ನವಾದ ಕೂಡಲೆ, ಆಕೆಯ ಭಯವು ಮತ್ತಿಷ್ಟು ಹೆಚ್ಚಿತು. ಅಷ್ಟರಲ್ಲಿ ಕೃಷ್ಣಪಕ್ಷದ ಅಷ್ಟಮಿಯ ಚಂದ್ರನು ಉದ ಯವಾಗಿ, ಅದೇ ಮೇಲಕ್ಕೆಏರಹತ್ತಿದ್ದರಿಂದ, ಬೆಳದಿಂಗಳು ಅಸ್ಪಷ್ಟವಾಗಿ ಅರಣ್ಯ ದಲ್ಲಿ ಪಸರಿಸತೊಡಗಿತ್ತು. ಈ ಬೆಳದಿಂಗಳೂ ಪದ್ಮನಯನೆಗೆ ಆನಂದಕರವಾ ಗಲಿಲ್ಲ. ಪ್ರಾಣಸಂಕಟಕ್ಕೆ ಗುರಿಯಾಗಿದ್ದ ಆಕೆಗೆ, ಆ ಸರದಾರನು ಯಮಸ್ವ ರೂಪವಾಗಿ ತೋರಹತ್ತಿದ್ದರಿಂದ, ಅವನ ಸ್ಪಷ್ಟದರ್ಶನಕ್ಕಾಗಿ ಬೆದರಿ, ಆ ಭೀರುವು ಕಣ್ಣುಗಳನ್ನು ಮುಚ್ಚಿಕೊಂಡು ಕುಳಿತಳು. ಆಗ ಆ ಸರದಾರನು ಕುದುರೆಯಿಂದ ಇಳಿದು—ರಾಜಪುತ್ರೀ, ಪದ್ಮನಯನೇ, ಏನು ದುರ್ಧರ ಪ್ರಸಂಗವಿದು! ನಾನು ಹಲವು ಸಂಕಟಗಳನ್ನು ಅನುಭವಿಸಿ, ಈಗ ನಿನ್ನನ್ನು ಸೇರದಿದ್ದರೆ, ನಿನ್ನ ಗತಿಯು ಏನಾಗುತ್ತಿತ್ತೋ ತಿಳಿಯದು. ಆಗುವದೇನು? ನೀನು ನಿಶ್ಚಯವಾಗಿ ಆಡವಿಯ ಪಾಲಾಗುತ್ತಿದ್ದೆ. ನಿನ್ನ ಅಂಗರಕ್ಷಕರೆಲ್ಲ ನಿನ್ನನ್ನು ಹಿಂಬಾಲಿಸಲಾರದೆ ಎತ್ತೆತ್ತೋ ಹೋಗಿಬಿಟ್ಟರು; ಆದರೆ ನಿನ್ನ ಹಿತ ಚಿಂತನವೇ ಕರ್ತವ್ಯವೆಂದು ತಿಳಿಯುವ, ಈ ಧನಮಲ್ಲನು ಸಾಹಸಪಟ್ಟು ನಿನ್ನ ಸಂರಕ್ಷಣಕ್ಕಾಗಿ ಸಿದ್ಧವಾಗಿ ನಿಂತಿದ್ದಾನೆ. ಇನ್ನು ಚಿಂತಿಸಬೇಡ. ಶಂಕಿಸದೆ

ಮುಖವೆತ್ತಿ ನನ್ನನ್ನು ನೋಡಿ ಸಮಾಧಾನಪಡು, ನನ್ನನ್ನೂ ಸಮಾಧಾನ ಪಡಿಸು.

ಈ ಮಾತುಗಳನ್ನು ಕೇಳಿ, ಪದ್ಮನಯನೆಗೆ ಅಷ್ಟು ಸಮಾಧಾನವಾಗದಿದ್ದರೂ, ನೀರಲ್ಲಿ ಮುಳುಗುವವನಿಗೆ ಮುಳ್ಳುಕಂಟಿಯೂ ಆಧಾರವಾಗಿ ತೋರಿ ಅವನು ಸಮಾಧಾನಪಡುವಂತೆ, ಆಕೆಯು ಧನಮಲ್ಲನ ಆಗಮನದಿಂದ ಸಮಾಧಾನಪಟ್ಟಳು. ಆ ಮರ್ಯಾದಶೀಲಳು ಮುಖವೆತ್ತಿ ಧನಮಲ್ಲನನ್ನು ನೋಡಿ, ಕೃತಜ್ಞತೆಯಿಂದ—ನನ್ನ ತಂದೆಯ ಆದರಕ್ಕೆ ಪಾತ್ರನಾದ ಧನಮಲ್ಲ ಸರದಾರನೇ, ನನ್ನ ಸಂಕಟಕಾಲದಲ್ಲಿ ಸಹಾಯಕನಾಗಿ ಬಂದು ಒದಗಿದ್ದರಿಂದ, ನೀನು ಇಂದಿನಿಂದ ನನ್ನ ಆದರಕ್ಕೂ ಪಾತ್ರನಾಗಿರುತ್ತೀ. ನೀನು ಬಾರದಿದ್ದರೆ ನಾನು ನಿಸ್ಸಹಾಯವಾಗಿ ಅಡವಿಯ ಪಾಲಾಗುತ್ತಿದ್ದೆನು. ನಿನ್ನ ಉಪಕಾರವು ನನ್ನಮೇಲೆ ಬಹಳವಾಯಿತು. ನಾನು ಆಗಾಗ್ಗೆ ನಿನ್ನನ್ನು ತಿರಸ್ಕರಿಸುತ್ತಿದ್ದದ್ದು ನಿಜವು. ಅದನ್ನು ಮನಸ್ಸಿನಲ್ಲಿ ಹಿಡಿಯದೆ ನನ್ನನ್ನು ಕ್ಷಮಿಸು. ನಿನ್ನ ಅಮರ್ಯಾದೆಯ ನಡತೆಗಾಗಿ ನಾನು ನಿನ್ನನ್ನು ತಿರಸ್ಕರಿಸುತ್ತಿದ್ದೆನು; ಆದರೆ ಅನಾಥಳಾದ ನನ್ನನ್ನು ಉದ್ಧರಿಸುವದಕ್ಕೆ ನೀನು ದೇವರಂತೆಈಗ ಬಂದಿರುತ್ತೀ. ಅಪ್ಪಾ, ನಿನ್ನ ಆಯುಷ್ಯವು ಹೆಚ್ಚಲಿ; ದೇವರು ನಿನ್ನ ಕಲ್ಯಾಣ ಮಾಡಲಿ. ಅನಾಥೆಯಾದ ಈ ಅಬಲೆಯನ್ನು ಆಕೆಯ ತಂದೆಯಬಳಿಗೆ ಕಳಿಸಿ ಪುಣ್ಯಕಟ್ಟಿಕೋ. ನನ್ನ ವಿಷಯದ ದುರಾಶೆಯನ್ನು ಬಿಟ್ಟು, ನನ್ನನ್ನು ಒಡಹುಟ್ಟಿದವಳೆಂದು ತಿಳಿದು ಕೀರ್ತಿಯನ್ನು ಸಂಪಾದಿಸು. ನೀನು ಬೇಡಿದ ಅಧಿಕಾರ-ವೈಭವಗಳನ್ನು ನನ್ನ ತಂದೆಯು ನಿನಗೆ ಕೊಡುವನು; ಕೊಡದಿದ್ದರೆ ನಾನು ಹೇಳಿ ಕೊಡಿಸುವೆನು.

ಪದ್ಮನಯನೆಯ ಈ ಮಾತುಗಳನ್ನು ಕೇಳಿ, ಧನಮಲ್ಲನು ಅಟ್ಟಹಾಸದಿಂದ ನಗಹತ್ತಿದನು. ಧನಮಲ್ಲನು ಬಹು ಉಗ್ರಸ್ವರೂಪಿಯು. ಅವನ ಮೈಬಣ್ಣ ಅಚ್ಚಕಪ್ಪು, ಮೂಗು ಗಡುತರ, ಕಣ್ಣು ತೇಜಃಪುಂಜವಾದವುಗಳು, ನಿಲುವಿಕೆ ಎತ್ತರ, ಮೈಕಟ್ಟು ಕಸುವಿನದು—ಸ್ಥೂಲ, ತಲೆ ದೊಡ್ಡದು, ತಲೆಗೂದಲುಗಳು ಬಹು ಉದ್ದ. ಅವನು ದೊಡ್ಡ ರುಮಾಲದ ಹಾಗೆ ಏನೋ ಸುತ್ತಿದ್ದನು. ಮೈಯಲ್ಲಿ ಬಿಗಿಯಾದ ಅಂಗಿಯನ್ನು ತೊಟ್ಟಿದ್ದನು. ಅವನ ಸೈಲಾದ ಬಣ್ಣವು ಅವನ ಉಗ್ರಸ್ವರೂಪವನ್ನು ಹೆಚ್ಚಿಸುತ್ತಿತ್ತು. ಅವನಟೊಂಕದಲ್ಲಿದೊಡ್ಡಖಡ್ಗವೂ,

ಬೆನ್ನಲ್ಲಿ ಢಾಲು—ಬಿಲ್ಲು—ಬತ್ತಳಿಕೆಗಳೂ, ಕೈಯಲ್ಲಿ ಭಾಲೆಯೂ ಒಪ್ಪುತ್ತಿದವು-ಒಟ್ಟಿಗೆ ಧನಮಲ್ಲನು ಶೂರನೂ, ಉಗ್ರನೂ, ತಾಮಸಸ್ವಭಾವದವನೂ ಆಗಿ ದ್ದನು. ಆತನು ಪದ್ಮನಯನೆಯನ್ನು ಕುರಿತು—ಎಲೈ ಭುವನಸುಂದರಿಯೇ, ನನ್ನನ್ನು ನಿನ್ನ ತಂದೆಯು ಒಬ್ಬ ಬಹು ಶೂರಸರದಾರನೆಂದೂ, ನೀನು ತಿರಸ್ಕ ರಣೀಯನಾದ ನರಾಧಮನೆಂದೂ ತಿಳಿದಿರುತ್ತೀರಿ. ನಿಮ್ಮಿಬ್ಬರ ತಿಳುವಳಿಕೆ ಯಲ್ಲಿ ಅರ್ಥವಿರಲಿ, ಇಲ್ಲದಿರಲಿ. ನಾನು ಯಾರೆಂಬದನ್ನೂ, ನನ್ನ ಮನಸ್ಸಿ ನಲ್ಲಿ ಏನಿರುತ್ತದೆಂಬದನ್ನೂ ಈಗ ಸ್ಪಷ್ಟವಾಗಿ ಹೇಳುತ್ತೇನೆ ಕೇಳು. ನಾನು ದೈತ್ಯರಾಜನಾದ ಮೇಘನಾದನು. ಸಿಂಹಲದ್ವೀಪವು ನನ್ನ ರಾಜ್ಯವು; ಶೋಣಿ ತಪುರವೇ ನನ್ನ ರಾಜಧಾನಿಯು. ಈ ಭರತಭೂಮಿಯಲ್ಲಿಯೂ ನನ್ನ ಹಲವು ಗುಪ್ತವಾದ ವಿಂಶ್ರಾಂತಿಸ್ಥಾನಗಳಿರುತ್ತವೆ. ನನ್ನಲ್ಲಿ ಅಸಂಖ್ಯಬಲವುಂಟು, ಅಭೇದ್ಯವಾದ ಹಡಗುಪಡೆಯುಂಟು, ಎಣೆಯಿಲ್ಲದ ಐಶ್ವರ್ಯವುಂಟು. ಹೀಗೆ ಪರಮ ವೈಭವಶಾಲಿಯಾದ ನಾನು ನಿನ್ನ ರೂಪಾತಿಶಯವನ್ನು ಕೇಳಿ, ನಿನ್ನ ಪ್ರಾಪ್ತಿಗಾಗಿ ನಿನ್ನ ತಂದೆಯ ಬಳಿಯಲ್ಲಿ ಸರದಾರನಾಗಿ ದುಡಿದೆನು; ನಿನ್ನ ಹಲವು ಕಠಿಣೋಕ್ತಿಗಳನ್ನು ಸಹಿಸಿದೆನು.ಮನಮೋಹಿನೀ,ನಿನ್ನ ಮೇಲಿನ ಮೋ ಹಾತಿಶಯದಿಂದ ನಾನು ಮರ್ಯಾದೆಬಿಟ್ಟುಮಾತಾಡಿದ್ದನ್ನು, ನೀನು ನನ್ನ ಅನು ಗ್ರಹವೆಂದು ತಿಳಿಯದೆ, ಅಜ್ಞಾನದಿಂದ ಅಪರಾಧವೆಂದು ಭಾವಿಸಿದೆಯಲ್ಲ! ನನ್ನ ರಾಣೀವಾಸದಲ್ಲಿ ಅಸಂಖ್ಯ ಸುಂದರಸ್ತ್ರೀಯರು, ನನ್ನ ಬರವನ್ನು ಎದುರುನೋಡು ತ್ತಿರುವರು. ಜನವಾರ್ತೆಗಿಂತಲೂ ಅಧಿಕವಾಗಿದ್ದ ನಿನ್ನ ರೂಪ—ಲಾವಣ್ಯಗಳೂ, ವಿನಯಾದಿಗುಣಗಳೂ, ವಿದ್ಯೆಯೂ ಮನಸ್ಸನ್ನು ಆಕರ್ಷಿಸಿದ್ದರಿಂದ ಈ ಮೇಘನಾದನು, ರಾವಣೇಶ್ವರನಂತೆ ಸ್ತ್ರೀದಾಸ್ಯವೃತ್ತಿಯನ್ನು ತಾಳಿ, ಕೈಕಟ್ಟಿ ಕೊಂಡು ನಿಂತಿರುತ್ತಾನೆಂದು ಭಾವಿಸು. ಮೋಹನಾಂಗಿಯೇ, ಮನಸ್ಸಿನೊಳಗಿನ ವಿಕಲ್ಪವನ್ನು ಬಿಟ್ಟು, ಈ ದಾಸನನ್ನು ಅನುಗ್ರಹಿಸಿ ಋಣಿಯಾಗಮಾಡು. ನೀನು ಅರ್ಧಾಂಗಿಯಾಗುವದಕ್ಕಿಂತ, ಹೆಚ್ಚಿನ ಯಾವ ಸುಖಸಾಧನವೂ ಸಾಧಿಸ ತಕ್ಕದ್ದಾಗಿ ನನ್ನ ಪಾಲಿಗೆ ಉಳಿದಿರುವದಿಲ್ಲ! ನೀನು ನನ್ನ ವೈಭವ—ಶಿಖರವಾ ಗಿರುತ್ತೀ! !



## ೩ ನೆಯ ಪ್ರಕರಣ.

## ಕಾಲ್ಪನಿಕ--ಸುಖ.



ರಾಜಪುತ್ರಿಯು ರಾಕ್ಷಸನ ಈಮಾತುಗಳನ್ನು ಕೇಳಿ, ವಿಚಾರಮಾಡಿದಳೇ ನಂದರೆ—ನಾನು ಈಗ್ಗೆ ಒಣಚಂಡಿತನವನ್ನು ಮಾಡಿದರೆ, ಈ ದುಷ್ಟನು ನನ್ನ ಮೇಲೆ ಬಲಾತ್ಕಾರ ಮಾಡದೆ ಬಿಡುವದಿಲ್ಲ. ಈಗ್ಗೆ ನನ್ನ ರಕ್ಷಣವನ್ನು ನಾನೇ ಮಾಡಿಕೊಳ್ಳಬೇಕು. "ವಿಪದಿ ಧೈರ್ಯಂ,, ಎಂಬ ಉಕ್ತಿಯಂತೆ ವಿಪತ್ತನ್ನು ಧೈರ್ಯದಿಂದ ನೀಗಬೇಕಲ್ಲದೆ, ಎದೆಗುಂದಿ ವಿಚಾರಗೆಡುವದರಲ್ಲಿ ಪ್ರಯೋಜನವಿಲ್ಲ. ಈಗ ನಾನು ಸಂಪೂರ್ಣವಾಗಿ ಸಂಕಟದಲ್ಲಿ ಮುಳುಗಿ ಹೋಗಿರುವದು ನಿಜವು. ಆದರೂ ಕಾಲಗತಿಯು ಒಂದೇ ಸಮನೆ ಇರುವದಿಲ್ಲ. ತೀರ ಕೆಳಗೆ ಹೋದ ಚಕ್ರದ ಭಾಗವು, ಕಾಲಗತಿಯಿಂದ ಮೇಲಕ್ಕೆ ಬರಲೇಬೇಕು. ಅದರಂತೆ ದುಃಖಮಗ್ನಳಾದ ನಾನು, ಕಾಲಾಂತರದಿಂದ ಸುಖವನ್ನು ಹೊಂದೇನು. ಕತ್ತಲೆಯ ಮುಂದೆ ಬೆಳಕು ಇರುವಂತೆ ದುಃಖದ ಮುಂದೆ ಸುಖವು ಇರುವದು. ಒಂದು ವೇಳೆ ನೀಗಲಾರದ ಕಠಿಣ ಪ್ರಸಂಗವೇ ಒದಗಿದರೆ, ನನ್ನ ಜೀವವು ನನ್ನ ಕೈಯಲ್ಲಿಯೇ ಇರುತ್ತದೆ. ಕಪಿಂಜಲ ಗುರುಗಳು, ನಾನು ಸಾರ್ವಭೌಮನ ಹೆಂಡತಿಯೂ, ಸಾರ್ವಭೌಮನ ತಾಯಿಯೂ ಆಗುವೆನೆಂದು ಭವಿಷ್ಯವನ್ನು ಹೇಳಿರುವರು. ಅಂದಬಳಿಕ ಅವರ ಭವಿಷ್ಯ ಕಥನದಂತೆ, ಈಗ ನನಗೆ ಒದಗಿದ ಸಂಕಟಕ್ಕೆ ಅಷ್ಟು ಯಾಕೆ ಮಹತ್ವ ಕೊಡಬೇಕು? ಆಗುವದು ಅಕಸ್ಮಾತ್ತಾಗಿ ಆಗಿ ಹೋಗುತ್ತದೆ; ಹಾಗಾಗಲಿಲ್ಲ—ಹೀಗಾಗಲಿಲ್ಲ, ಹೀಗಾಗಬೇಕಾಗಿತ್ತು—ಹಾಗಾಗಬೇಕಾಗಿತ್ತು, ಏನುಮಾಡಲಿ—ಹೇಗೆ ಮಾಡಲಿ, ಎಂಬ ಚೂಪಾದ ಮುಳ್ಳುಗಳಿಂದ ವ್ಯರ್ಥವಾಗಿ ಹೃದಯಕ್ಕೆ ಯಾಕೆ ಚುಚ್ಚಿಕೊಳ್ಳಬೇಕು? ರಾವಣನಂಥ ಪ್ರತಾಪಶಾಲಿಯನ್ನು ಮಣ್ಣುಗೂಡಿಸಿ, ಸೀತಾದೇವಿಯು ಪಾತಿವ್ರತ್ಯವನ್ನು ಕಾಯ್ದುಕೊಂಡು ಪಾರಾಗಿ ಬರಲಿಲ್ಲವೇನು? ದಮಯಂತಿಯು ದುಷ್ಟ ಕಿರಾತನನ್ನು ಸುಟ್ಟು ಬೂದಿಮಾಡಿ,

ಪಾತಿವ್ರತ್ಯವನ್ನು ಕಾಪುಕೊಂಡು ಪತಿಯನ್ನು ಕೂಡಲಿಲ್ಲವೇನು? ದುರ್ಧರ ಸಂಕಟಗಳೊದಗಿದಾಗಲೂ, ತಮ್ಮ ಪಾತಿವ್ರತ್ಯವನ್ನು ಪ್ರಾಣಕ್ಕಿಂತಲೂ ಹೆಚ್ಚೆಂದು ತಿಳಿದು, ಕಾಪಾಡಿದ್ದರಿಂದಲೇ ಈ ಸತಿಯರ ಕೀರ್ತಿಯು ಜಗತ್ತಿನಲ್ಲಿ ಈವೊತ್ತಿನವರೆಗೆ ಪ್ರಕಾಶಿಸುತ್ತಿರುವದು. ಈಗ ರಾಕ್ಷಸನಿಗೆ ಅನುಕೂಲವಾಗಿ ನಡೆಯುವವರಲ್ಲಿ ಚಾತುರ್ಯವುಂಟು. ಅವರಲ್ಲಿಯೂ ರಾಕ್ಷಸನಿಗೆ ಯಾವ ಸಂಶಯವೂ ಬಾರದಂತೆ, ಇಲ್ಲದ ಚಿಕಿತ್ಸೆಯ ಗೊಡವೆಗೆ ಹೋಗದೆ, ಪ್ರೀತಿ ತೋರಿಸಿ ಬೇಗನೆ ಆತನಿಗೆ ಅನುಕೂಲವಾಗುವವರಲ್ಲಿ, ಹೆಚ್ಚಿನ ಚಾತುರ್ಯವಿರುವದು. ಅಬಲೆಯಾಗಿದ್ದ ನಾನು ಸಬಲೆಯಾಗುವೆನು. ಇನ್ನು ಹೆದರುವದೇಕೆ? ಹದಿನಾರು ವರ್ಷದ ಸುಖಾನುಭವದಿಂದ ಕೋಮಲವಾಗಿದ್ದ ನನ್ನ ಹೃದಯಕ್ಕೆ, ಕೆಲವು ತಾಸುಗಳ ದುರ್ಧರವಾದ ದುಃಖಾನುಭವದಿಂದ ದಡ್ಡು ಬಿದ್ದು, ಅದು ಯಾತಕ್ಕೂ ಹಣಿಯದಂತಾಗಿದೆ! ಆ ದಡ್ಡಿನಿಂದಲೇ ನಾನು ಈಗ ನಿರ್ಭಯಳಾಗಿದ್ದೇನೆ! ಸಂಕಟಪರಂಪರೆಗಳಿಂದ ಮನುಷ್ಯನ ವೃತ್ತಿಯ ಸುಧಾರಣೆಯು, ಬಹುಬೇಗ ಆಗುತ್ತದೆಂಬದನ್ನು ಇಂದು ನಾನು ಮನಗಂಡೆನು! ಆದರಿಂದಲೇ ಸತ್ಪುರುಷರು, ಸಂಕಟಗಳನ್ನು ಈಶ್ವರೀಪ್ರಸಾದಗಳೆಂದು ಭಾವಿಸುತ್ತಿರಬಹುದು!!

ಪದ್ಮನಯನೆಯು ಈ ಪ್ರಕಾರದ ಗಂಭೀರವಿಚಾರದಿಂದ ಗಾಂಭೀರ್ಯವನ್ನು ತಾಳಿ, ಮೇಘನಾದನನ್ನು ಕುರಿತು—ಪ್ರತಾಪಶಾಲಿಯೇ, ವಿಚಾರಮಗ್ನಳಾದ ನಾನು ನಿನ್ನ ಹಂಗು ಇಲ್ಲದೆ ಸುಮ್ಮನೆ ಕುಳಿತು, ನಿನ್ನನ್ನು ಅಪರಾಧಿಯಂತೆ ಇಲ್ಲಿಯವರೆಗೆ ನಿಲ್ಲಿಸಿದ್ದಕ್ಕಾಗಿ ಕ್ಷಮಿಸು. ವಿಚಾರಾಂತದಲ್ಲಿ ನಾನು ಮಹಾಪರಾಧಿಯೆಂದು ನಿರ್ಧರಿಸಿಕೊಂಡಿದ್ದೇನೆ. ನನ್ನ ಇಚ್ಛೆಯ ವಿರುದ್ಧವಾಗಿ ನನ್ನ ತಂದೆಯು, ನಿನ್ನನ್ನು ವಿಶೇಷವಾಗಿ ಆದರಿಸುತ್ತಿದ್ದದ್ದನ್ನು ನೆನಪಿಗೆ ತಂದುಕೊಂಡರೆ, ನಿನ್ನ ಶೌರ್ಯಾತಿಶಯದ ಕಲ್ಪನೆಯು ಯಾರಿಗಾದರೂ ಆಗುವಂತೆ ಇರುವದು. ರಾಜಾಧಿರಾಜನಾದ ನೀನು, ಸರದಾರನಾಗಿ ಬಂದು ನನ್ನಿಂದಾದ ಅಪಮಾನವನ್ನು ಸಹಿಸಿಕೊಂಡು, ಪ್ರೇಮದಲ್ಲಿ ಕೊರತೆಯನ್ನುಂಟುಮಾಡದೆ, ಪರಿಪರಿಯ ಕಷ್ಟಗಳನ್ನು ಅನುಭವಿಸಿ, ನನ್ನ ಸಂಕಟನಿವಾರಣಕ್ಕಾಗಿ ಇಲ್ಲಿಗೆ ಒದಗಿ, ವಿನಯವನ್ನೇ ಪ್ರಕಟಿಸುವದನ್ನು ನೋಡಿದರೆ, ನಿನ್ನ ಜನ್ಮವೂ

ನನ್ನ ಮೇಲಿರುವ ನಿನ್ನ ಅನಿರ್ವಾಚ್ಯವಾದ ಪ್ರೇಮವೂ ಸಹಜವಾಗಿ ವ್ಯಕ್ತವಾಗು ತ್ತವೆ. ನವವಧುವಿಗೆ ಇದಕ್ಕೂ ಹೆಚ್ಚಿನದೇನು ಬೇಕಾಗಿರುವದು? ನಿನ್ನಲ್ಲಿ ಸದ್ಗುಣಗಳಿರುವವು, ಶೌರ್ಯವಿರುವದು, ಐಶ್ವರ್ಯವಿರುವದು, ವೈಭವವಿರು ವದು! ನಾನು ಹೇಗೂ ಅವಿವಾಹಿತಳಾಗಿದ್ದೇನೆ; ಪಶ್ಚಾತ್ತಾಪದಿಂದ ಶುದ್ಧವಾ ಗಿದ್ದ ನನ್ನ ಮನಸ್ಸಿನಲ್ಲಿ, ನಿನ್ನ ವಿಷಯದ ಪವಿತ್ರಪ್ರೇಮವೂ ಉತ್ಪನ್ನವಾಗಿರು ತ್ತದೆ; ಆಯಾಸದಿಂದಲೇ ಆಗಲೊಲ್ಲದೇಕೆ, ಏಕಾಂತಸ್ಥಳವು ತಾನಾಗಿ ಒದಗಿರು ವದು. ಪ್ರಮದೆಯರಿಗೆ ನಿನ್ನಂಥ ಯೋಗ್ಯನಾದ ಪತಿಯ ಹೊರತು, ಹೆಚ್ಚಿನ ಆಪ್ತರು ಯಾರಿರುವರು? ಆದ್ದರಿಂದ ಈ ಭರತಭೂಮಿಯಲ್ಲಿರುವ ಸಮೀಪದ ನಿನ್ನ ಗುಪ್ತವಿಹಾರ ಸ್ಥಾನಕ್ಕೆ ನನ್ನನ್ನು ಕರೆದೊಯ್ಯಬೇಕು, ಎಂದು ಪ್ರಾರ್ಥಿ ಸಿದಳು. ಅಷ್ಟರಲ್ಲಿ ಕುದುರೆಯು ಭುರುಗುಟ್ಟುವದು ಕಿವಿಗೆ ಬೀಳಲು, ಆಕೆಯು ತಿರುಗಿ ನೋಡಿದಳು. ತೀಕ್ಷ್ಣವೇಗವು ಎದ್ದು ನಿಂತು, ಪ್ರೀತಿಯಿಂದ ಪದ್ಮ ನಯನೆಯನ್ನು ನೋಡುತ್ತ, ಬಾಲಕೊಡವಿ ತಲೆಬಾಗಿಸುತ್ತ, ಮುಂಗಾಲು ಕೆದರಿ ಭುರುಗುಟ್ಟುತ್ತ ತನ್ನ ಉತ್ಸಾಹವನ್ನು ವ್ಯಕ್ತಮಾಡುತ್ತಿತ್ತು. ಇದನ್ನು ನೋಡಿ ಪದ್ಮನಯನೆಗೆ ಪರಮಾಶ್ಚರ್ಯವಾಯಿತು. ಯೋಗ್ಯಪ್ರಸಂಗದಲ್ಲಿ ತೀಕ್ಷ್ಣವೇಗನು ಸಹಾಯಕನಾಗಿ ನಿಂತುಕೊಂಡದ್ದನ್ನು ನೋಡಿ, ಆಕೆಗೆ ಆನಂ ದವೂ ಆಯಿತು. ತೀಕ್ಷ್ಣವೇಗವು ಮರಣಹೊಂದಿರದೆ ಮಾರ್ಗಾಯಾಸ ದಿಂದ ಮೈಮರೆತು ಬಿದ್ದಿತ್ತು. ಆ ಅರಣ್ಯದ ಸಂಜೆಯ ತಂಗಾಳಿಯಿಂದ ಅದು ಚೇತರಿಸಿಕೊಂಡು ಎದ್ದು, ಸಮೀಪದ ಜಲಾಶಯದಲ್ಲಿ ನೀರುಕುಡಿದು, ಹುಲ್ಲು ಮೇದು ಹುರುಪುಗೊಂಡಿತ್ತು. ದುಃಖಮಗ್ನಳಾದ ಪದ್ಮನಯನೆಗೆ, ಈ ಯಾವ ಸಂಗತಿಯೂ ಗೊತ್ತಾಗಿದ್ದಿಲ್ಲ. ತನ್ನ ಪ್ರೀತಿಯ ಪಟ್ಟದ ಕುದುರೆಯನ್ನು ನೋಡಿ ಆಕೆಗೆ ಬಹು ಸಮಾಧಾನವಾಯಿತು.

ಮೇಘನಾದನು ರಾಜಪುತ್ರಿಯ ರೂಪಕ್ಕೂ, ನವಿಮಾತಿಗೂ, ಗಾಂಭೀ ರ್ಯಕ್ಕೂ ಮರುಳಾಗಿ—ಸುಂದರೀ, ನಿನ್ನ ಅಪ್ಪಣೆಗೆ ನಾನು ಹೊರಗಾದವನಲ್ಲ. ಬಾ, ನಾವಿಬ್ಬರೂ ಈ ನನ್ನ ಕುದುರೆಯನ್ನು ಏರಿ ವಿಹಾರಸ್ಥಾನಕೆ ಹೋಗೋಣ. ಕಡೆಯತನಕ ನಿನ್ನ ಸೇವೆಯಲ್ಲಿ ಈ ದೇಹವನ್ನು ಸವೆಸುವೆನು. ನನ್ನ ರಾಣೀವಾಸದೊಳಗಿನ ಪ್ರಮದೆಯರೆಲ್ಲರೂ ನಿನ್ನ ದಾಸಿಯರಾಗುವರು.

ನನ್ನ ಪಟ್ಟದ ಮಹಿಷಿಯಾದ ನಿನಗೆ, ಎಣೆಯಿಲ್ಲದ ಐಶ್ವರ್ಯಾಧಿಕಾರಗಳು ಪ್ರಾಪ್ತವಾಗುವವು ಇಂದಿಗೆ ನನ್ನ ಜನ್ಮವು ಸಫಲವಾಯಿತು. ನಿನ್ನ ಅಂಗ ಸ್ಪರ್ಶದಿಂದ ನನಗೆ ಸ್ವರ್ಗಸುಖವು ಪ್ರಾಪ್ತವಾಗುವದರಿಂದ, ಈ ಭೂಲೋಕವೇ ಸ್ವರ್ಗವೆಂದು ನಾನು ಭಾವಿಸುವೆನು. ಅಷ್ಟರಲ್ಲಿ, ಪದ್ಮನಯನೆಯು ಆ ಕಾಮುಕನ ಕಲ್ಪನೆಯನ್ನು ಮನಸ್ಸಿನಲ್ಲಿ ತಿರಸ್ಕರಿಸುತ್ತ ಪ್ರಕಟವಾಗಿ—ರಾಜಾಧಿರಾಜನೇ, ಬಹು ಯೋಗ್ಯಮಾತಾಡಿದೆ. ನಿನ್ನ ಅಪ್ಪಣೆಗೆ ನಾನು ಹೊರಗಾದವಳಲ್ಲ; ಆದರೆ ನಾನೊಂದು ಮಾತಿಗಾಗಿ ಹೇಳಿಕೊಳ್ಳುವೆನು. ಸುಖವನ್ನು ಕಲ್ಪಿಸುವದರಲ್ಲಿರುವಷ್ಟು ಆನಂದವು, ಅನುಭವಿಸುವದರಲ್ಲಿರುವದಿಲ್ಲೆಂದು ನಿನ್ನಂಥ ಪ್ರಾಜ್ಞನಿಗೆ ನಾನು ಹೇಳುವ ಕಾರಣವಿಲ್ಲ. ಅತ್ತು ಅತ್ತು ಅಮಂಗಲವಾಗಿದ್ದ ಮೋರೆಯನ್ನು ಸಹ ನಾನು ತೊಳಕೊಂಡಿಲ್ಲ; ರಕ್ತವೂ, ಧೂಳಿಯೂ ಹತ್ತಿ ಮಲಿನವಾಗಿದ್ದ ವಸ್ತ್ರಗಳನ್ನು ಬಿಟ್ಟಿಲ್ಲ; ಮೇಲಾಗಿ ನಾನು ಪುರುಷವೇಷಧಾರಿಯು; ಸ್ಥಳವು ಘೋರಾರಣ್ಯ. ಇಂಥ ವಿಪನ್ನಸ್ಥಿತಿಯಲ್ಲಿ ನಿನ್ನಂಥ ಭಾಗ್ಯಶಾಲಿಯ ಪಾಣಿಗ್ರಹಣ ಮಾಡುವದು ಯೋಗ್ಯವೆ? ಪಾಣಿಗ್ರಹಣವಾಗುವವರೆಗೆ ಪುರುಷ ಸ್ಪರ್ಶವು ನಿಂದ್ಯವಲ್ಲವೇ? ಹಾಗು ನಿನ್ನ ಪುಣ್ಯದಿಂದ ತೀಕ್ಷ್ಣವೇಗನು ಉತ್ಸಾಹಪೂರ್ಣನಾಗಿ ನಿಂತುಕೊಂಡಿರುತ್ತಾನೆ. ನೀನು ನಿನ್ನ ಕುದುರೆಯನ್ನು ಏರು, ನಾನು ನನ್ನ ಪಟ್ಟದ ಕುದುರೆಯನ್ನು ಹತ್ತುತ್ತೇನೆ. ನಿನ್ನ ಸಮೀಪದ ವಿಹಾರಮಂದಿರಕ್ಕೆ ಹೋದಬಳಿಕ ಮುಂದಿನ ವಿಚಾರವು. ಈಗ ನೀನೂ ದಣಿದಿರುತ್ತೀ. ಇಷ್ಟು ಅವಸರವೇಕೆ? ಅವಿಚಾರದ ಅವಸರದಿಂದ ಮಾಡಿದ ಕಾರ್ಯವು ಕೆಡುವ ಸಂಭವವಿರುತ್ತದೆ.

ಹೀಗೆ ಮನಸ್ಸನ್ನು ಸಂಪೂರ್ಣವಾಗಿ ಆಕರ್ಷಿಸಿದ್ದರಿಂದ, ಪದ್ಮನಯನೆಯ ಪ್ರೇಮಾಲಿಂಗನಕ್ಕೆ ಮೇಘನಾದನು ಆತುರಪಡುತ್ತಿದ್ದರೂ, ಆತನು ಪದ್ಮನಯನೆಯ ಸಮರ್ಪಕವಾದ ಮಾತುಗಳನ್ನು ನಿರಾಕರಿಸಲಿಲ್ಲ. ಪದ್ಮನಯನೆಯನ್ನು ಪ್ರಸನ್ನೀಕರಿಸಿಕೊಳ್ಳುವದು ಆತನ ಕರ್ತವ್ಯವಾಗಿತ್ತು. ಆತನು ಪದ್ಮನಯನೆಯ ಸುವಿಚಾರಕ್ಕಾಗಿ ಆಕೆಯನ್ನು ಹೊಗಳಿ, ಅಲ್ಲಿಂದ ತನ್ನ ವಿಹಾಗಮಂದಿರಕ್ಕೆ ಹೊರಡಲು ಸಿದ್ಧನಾದನು. ಅವರಿಬ್ಬರು ಸಮೀಪದ ಜಲಾಶಯದಲ್ಲಿ ಕೈಕಾಲು ಮೋರೆಗಳನ್ನು ತೊಳಕೊಂಡು ಕುದುರೆಗಳಿಗೆ ನೀರುಕುಡಿಸಿ, ಸ್ವಲ್ಪ ವಿಶ್ರಮಿ

ಸಿದರು. ಚಂದ್ರನು ಮೇಲಕ್ಕೇರಿದನು. ಬೆಳದಿಂಗಳು ಜಲಾಶಯದಲ್ಲಿ ಸ್ಪಷ್ಟ ವಾಗಿ ಬಿದ್ದಿತ್ತು. ಮೇಘನಾದನಂಥ ಶೂರನು ರಕ್ಷಕನಾಗಿದ್ದದ್ದರಿಂದ, ಪದ್ಮನಯನೆಯ ಕ್ಷುದ್ರ ಭಯಗಳು ದೂರವಾಗಿದ್ದವು. ಪದ್ಮನಯನೆಯಂಥ ಲೋಕಸುಂದರಿಯು, ಏಕಾಂತದ ಊತ್ತರರಾತ್ರಿಯಲ್ಲಿ, ಜಲಾಶಯದ ದಂಡೆಯಮೇಲೆ ನಿರಾಶ್ರಿತಳಾಗಿ ತನ್ನ ಕೈಸೇರಿದ್ದರಿಂದ, ಮನೋರಾಜ್ಯದ ಉಚ್ಚಸಿಂಹಾಸನವೇರಿದ ಮೇಘನಾದನಿಗೆ, ಸ್ವರ್ಗವು ಮೂರೇ ಗೇಣು ಉಳಿದಿತ್ತು! ಈ ಸ್ಥಿತಿಯಲ್ಲಿ ಅವರು ಒಂದೆರಡು ತಾಸುಗಳನ್ನು ಸಮಾಧಾನದಿಂದ ಕಳೆದಬಳಿಕ, ಮೇಘನಾದನು ಪದ್ಮನಯನೆಗೆ ಕುದುರೆಯನ್ನು ಹತ್ತಲುಸೂಚಿಸಿದನು. ಪದ್ಮನಯನೆಯು ವಿನಯದಿಂದ ಅದಕ್ಕೆ ಸಮ್ಮತಿಸಿ, ತೀಕ್ಷ್ಣವೇಗವನ್ನು ಚಪ್ಪರಿಸಿ, ಉಲ್ಲಾಸವನ್ನು ಪ್ರಕಟಿಸುತ್ತ ಚಟ್ಟನೆ ಅದನ್ನು ಏರಿ ಕುಳಿತಳು. ಮೇಘನಾದನೂ ತನ್ನ ಕುದುರೆಯನ್ನು ಹತ್ತಿದನು. ಮೇಘನಾದನು ಪದ್ಮನಯನೆಗೆ ಎಷ್ಟು ತಿರಸ್ಕಣೀಯನಾಗಿದ್ದರೂ, ಅವನು ಪರಿಚಯದವನಾಗಿದ್ದನು. ಮುಂದೆ ಮೇಘನಾದನು, ಹಿಂದೆ ಪದ್ಮನಯನೆಯು, ಹೀಗೆ ಅವರು ದಕ್ಷಿಣಾಭಿಮುಖವಾಗಿ ಮಾರ್ಗವನ್ನು ಕ್ರಮಿಸತೊಡಗಿದರು. ಮೇಘನಾದನನ್ನು ಅನುಸರಿಸಿ ಹೋಗುವದು ಪದ್ಮನಯನೆಗೆ ಎಳ್ಳಷ್ಟು ಸೇರದಿದ್ದರೂ, ಗತ್ಯಂತರಕಾಣದೆ ಆ ಧೂರ್ತಳು, ಅವರ ಸುಳುವು ಸಹ ಆ ದೈತ್ಯನಿಗೆ ಹತ್ತಗೊಡಲಿಲ್ಲ. ಅವರ ಕುದುರೆಗಳು ವೇಗದಿಂದ ಸಾಗಿದ್ದವು. ಅವರು ಮರುದಿವಸ ಬೆಳಗಿನ ನಾಲ್ಕು ತಾಸಿಗೆ, ಸಂದಟಿತವಾಗಿ ಬೆಳೆದ ಒಂದು ಗಗನಚುಂಬಿತ ವೃಕ್ಷಗಳ ಗುಂಪಿನ ಎದುರಿಗೆ, ಬಂದು ನಿಂತುಕೊಂಡರು!

ಪದ್ಮನಯನೆಯು ಅಂಥ ಘೋರಾರಣ್ಯವನ್ನು ಎಂದೂ ನೋಡಿದ್ದಿಲ್ಲ. ಅದು ತಾನು ಮೊದಲು ನೋಡಿದ ಅರಣ್ಯದಿಂದ ಬಹಳವಾದರೆ, ಇಪ್ಪತ್ತೈದು ಮೂವತ್ತುಮೈಲಿನ ಮೇಲಿರಬಹುದೆಂದು ಆಕೆಯು ಭಾವಿಸಿದ್ದಳು; ಆದರೆ ಅದು ನಿಜವಾಗಿ ನೂರಾರು ಮೈಲು ದೂರವಾಗಿತ್ತು. ಆ ಪ್ರದೇಶವು ದಂಡಕಾರಣ್ಯದ ಮಧ್ಯವಾಗಿತ್ತೆಂದು ಹೇಳಬಹುದು. ಇಷ್ಟುಮಾರ್ಗವನ್ನು ನಾಲ್ಕಾರು ತಾಸುಗಳಲ್ಲಿ ಕ್ರಮಿಸಿ ಹೋದದ್ದು, ವಾಚಕರಿಗೆ ಆಶ್ಚರ್ಯಕರವಾಗಿ ತೋರಬಹುದು; ಆದರೆ ರಾಕ್ಷಸೀಮಾಯೆಗೆ ಆ ಕೆಲಸವು ದೊಡ್ಡದಲ್ಲ. ಬಹಳವಾದರೆ

ತನ್ನ ತಂದೆಯ ರಾಜಧಾನಿಯಿಂದ ಮೂರೇ ದಿನದ ಹಾದಿಯಲ್ಲಿ ತಾನಿರು ತ್ತೇನೆಂದು ಭಾವಿಸಿ, ರಾಜಪುತ್ರಿಯು ಒಂದುಬಗೆಯ ಸಮಾಧಾನವನ್ನು ತಾಳಿ ದ್ದಳು. ಪಾಪ! ತಾನು ಮೂವತ್ತು ದಿನದ ಹಾದಿಯಮೇಲಿದ್ದೇನೆಂಬುದು, ಆಕೆಗೆ ಹೇಗೆ ಗೊತ್ತಾಗಬೇಕು? ಇರಲಿ. ಮೇಘನಾದನು ಕೆಲವು ಸಾಂಕೇತಿಕ ಶಬ್ದಗಳನ್ನು ಉಚ್ಚರಿಸಿ, ಒಂದು ಬಾಣವನ್ನು ವೃಕ್ಷಗಳ ಗುಂಪಿನಲ್ಲಿ ಬಿಟ್ಟನು. ಕೂಡಲೆ ರಾಜಮಾರ್ಗವು ಉತ್ಪನ್ನವಾಗಲು, ಆತನು ಪದ್ಮನಯನೆಯೊಡನೆ ಮುಂದಕ್ಕೆ ಸಾಗಿದನು. ಈ ವಿಚಿತ್ರವನ್ನು ನೋಡಿ ಪದ್ಮನಯನೆಯು ಬೆದರಿ ದಳು. ಒಂದು ಬಾಣಬಿಟ್ಟಮಾತ್ರದಿಂದ ಸಂವಟಿತವೃಕ್ಷರಾಶಿಯ ಮಧ್ಯದಲ್ಲಿ, ರಾಜಮಾರ್ಗವಾದದ್ದು ಆಕೆಯ ವಿಚಾರಕ್ಕೆ ನಿಲುಕದಾಯಿತು! ಇಂದ್ರಜಿತು-ಘಟೋತ್ಕಚರೇ ಮೊದಲಾದ ರಾಕ್ಷಸರ ಮಾಯಾವ್ಯಾಪಾರಗಳನ್ನು ಕೇಳಿದ ಆ ರಾಜಪುತ್ರಿಯು, ಅಂಥ ವ್ಯಾಪಾರವನ್ನು ಕಣ್ಣುಮುಟ್ಟನೋಡಿ ಭಯ ಭ್ರಾಂತಳಾದಳು. ಮತ್ತೆ ಆಕೆಯ ಚಿಂತೆಗೆ ಆರಂಭವಾಯಿತು. ಅವರು ಸುಮಾರು ಎರಡು ಮೈಲು ನಡೆದು ಹೋದಮೇಲೆ, ಒಂದು ಭವ್ಯವಾದ ಕೋಟೆಯ ಮಹಾದ್ವಾರವನ್ನು ಪ್ರವೇಶಿಸಿದರು. ಪದ್ಮನಯನೆಯು ವಿಚಾರ ಶೂನ್ಯಳಾಗಿ ಕೇವಲ ಮೇಘನಾದನಿಂದ ಎಳೆದೊಯ್ಯಲ್ಪಡುವಂತೆ ಸಾಗಿದ್ದಳು. ಮೇಘನಾದನು ಒಂದು ಸುಂದರವಾದ ವಿಶ್ರಾಂತಿಯ ಮಂದಿರದ ಬಾಗಿಲಲ್ಲಿ ನಿಂತು— ಪದ್ಮನಯನೇ, ಕುದುರೆಯನ್ನು ಇಳಿ; ಇಕೋ, ಇದೇ ನಿನ್ನ ವಿಹಾ ರಮಂದಿರವು; ಒಳಗೆ ಪ್ರವೇಶಿಸು, ಎಂದು ಹೇಳಿದನು.

ಪದ್ಮನಯನೆಯು ಮಂದಿರವನ್ನು ಪ್ರವೇಶಿಸುತ್ತಲೆ, ಸುಂದರಿಯರಾದ ದಾಸಿಯರು ಆಕೆಯನ್ನು ಎದುರ್ಗೊಂಡು ವಿನಯದಿಂದ ಒಳಗೆ ಕರೆದೊಯ್ದರು. ಆ ಮಂದಿರದ ಸೌಂದರ್ಯ-ಸುವ್ಯವಸ್ಥೆಗಳನ್ನು ನೋಡಿ ಪದ್ಮನಯನೆಯು ದಂಗಾದಳು. ಸಾರ್ವಭೌಮನ ಮಗಳನ್ನು ದಂಗುಬಡಿಸುವ ಮಂದಿರವು, ಹೇಗಿ ರಬಹುದೆಂಬದನ್ನು ವಾಚಕರು ತರ್ಕಿಸಬಹುದು. ನಮ್ಮ ಪದ್ಮನಯನೆಯು ಹಸಿ ವೆಯಿಂದ ಕಂಗಾಲಾಗಿರಲು, ಸಧ್ಯಕ್ಕೆ ನಾವು ಆ ಮಂದಿರವನ್ನು ವರ್ಣಿಸುವ ಗೊಡವೆಗೆ ಹೋಗುದಿಲ್ಲ. ಮುಂದೆ ಸ್ವಲ್ಪ ವೇಳೆಯಲ್ಲಿಯೇ ದಾಸಿಯರು ಪಾಕ ವನ್ನು ಸಿದ್ಧಮಾಡಲು, ರಾಜಪುತ್ರಿಯು ಮೈತೊಳೆದು ಶುದ್ಧವಸ್ತ್ರವನ್ನುಟ್ಟು

ಕೊಂಡು ಭೋಜನಮಾಡಿದಳು. ವಿನಯಶೀಲರಾದ ದಾಸಿಯರನ್ನು, ಅದರಲ್ಲಿಯೂ ಸುಮಧ್ಯಮೆಯೆಂಬ ದಾಸಿಯನ್ನು ನೋಡಿ, ಪದ್ಮನಯನೆಗೆ ಬಹಳ ಸಮಾಧಾನವಾಯಿತು. ಅವರ ಸಹವಾಸದಿಂದ ಕೆಲಹೊತ್ತಿನವರೆಗೆ ಆಕೆಗೆ ಮೇಘನಾದನ ವಿಸ್ಮೃತಿಯಾಗಿತ್ತೆಂದು ಹೇಳಬಹುದು. ಆಕೆಯು ದಾಸಿಯರನ್ನು ಹಿಂಬಾಲಿಸಿ, ವಿಹಾರಮಂದಿರದೊಳಗಿನ ಶಯನಗೃಹವನ್ನು ಹೊಕ್ಕಳು. ಮಾರ್ಗಾಯಾಸದಿಂದ ಬಳಲಿದ ನಮ್ಮ ಪದ್ಮನಯನೆಯು, ಅದರ ಸೌಂದರ್ಯಕ್ಕೆ ಲಕ್ಷಗೊಡದೆ, ಮಂಚದಮೇಲೆ ಹಾಸಿದ್ದ ಮೃದುವಾದ ಹಾಸಿಗೆಯ ಮೇಲೆ ವಿಶ್ರಮಿಸಿದಳು. ದಾಸಿಯರು ಆಕೆಯನ್ನು ಸುತ್ತುಗಟ್ಟಿ ಕೌತುಕದಿಂದ ನೋಡುತ್ತಿದ್ದರು. ಪದ್ಮನಯನೆಯು ಅವರನ್ನು ಕುರಿತು—ವಿನಯಶೀಲರೇ, ನೀವು ನನ್ನನ್ನು ಬಹಳವಾಗಿ ಉಪಚರಿಸಿದಿರಿ. ನಿಮ್ಮ ಉಪಚಾರದಿಂದ ನನ್ನ ಶ್ರಮವು ಅಳಿದುಹೋಗಿದೆ. ಕುಳಿತುಕೊಳ್ಳಿರಿ. ನಾನು ಅಪರಿಚಿತಳು, ಯಾರ ಯೋಗ್ಯತೆಯೇನು, ಯಾರ ಗುಣಗಳೇನು ಎಂಬದನ್ನರಿಯೆನು. ನನ್ನಿಂದಾಗುವ ತಪ್ಪುಗಳನ್ನು ಹೊಟ್ಟೆಯಲ್ಲಿ ಹಾಕಿಕೊಳ್ಳಿರಿ. ನನ್ನನ್ನು ನಿಮ್ಮ ಒಡಹುಟ್ಟಿದವಳೆಂದು ತಿಳಿಯಿರಿ. ಈ ಅಪರಿಚಿತವಾದ ಸ್ಥಳದಲ್ಲಿ ನೀವೇ ನನ್ನ ಆಪ್ತರು, ಎಂದು ನುಡಿಯುತ್ತ ಎಲ್ಲರ ಮೋರೆಗಳನ್ನು ಕೃತಜ್ಞತೆಯಿಂದ ನೋಡಿದಳು. ಅವರಲ್ಲಿ ಸುಮಧ್ಯಮೆಯು ಸಂಜ್ಞೆಯಿಂದ ಸುಮ್ಮನಿರೆಂದು ಸೂಚಿಸಿದ್ದರಿಂದ, ಪದ್ಮನಯನೆಯು ಹತ್ತರದಲ್ಲಿದ್ದ ರುದ್ರವೀಣೆಯನ್ನು ತಕ್ಕೊಳ್ಳುವ ನೆವದಿಂದ ಮಾತು ನಿಲ್ಲಿಸಿದಳು. ಬಳಿಕ ಪದ್ಮನಯನೆಯ ವೀಣಾವಾದನಕ್ಕೆ ಆರಂಭವಾಯಿತು; ಆದರೆ ಆಕೆಯ ಮನಸ್ಸು ಅನ್ಯವಿಚಾರದಲ್ಲಿ ತೊಡಗಿತ್ತು! ಇಷ್ಟರಲ್ಲಿ ಮೇಘನಾದನು ದರ್ಶನೋತ್ಕಂಠಿತನಾಗಿ ಬಂದಿರುವನೆಂದು ದಾಸಿಯರು ಆಕೆಗೆ ತಿಳಿಸಿದರು.

ಮೇಘನಾದನು ಬಂದದ್ದನ್ನು ಕೇಳಿ, ರಾಜಪುತ್ರಿಯು ಅಸಮಾಧಾನಪಟ್ಟಳು. ಆದರೂ ಆತನು ಒಳಗೆ ಬಂದಕೂಡಲೆ, ತಾನು ಕುಳಿತಿದ್ದ ಮಂಚದಿಂದ ಚಟ್ಟನೆ ಎದ್ದು, ಮುಗುಳುನಗೆ ನಗುತ್ತ, ತಲೆಯನ್ನು ಬಾಗಿಸಿಕೊಂಡು ದೂರ ನಿಂತಳು. ಅವಳ ಕಟಾಕ್ಷಗಳು ದೈತ್ಯನ ಮನಸ್ಸನ್ನು ಭ್ರಮೆಗೊಳಿಸಿದವು. ಕಾಮಬಾಧೆಯಿಂದ ಅವನ ಸರ್ವಾಂಗದಲ್ಲಿ ಜೆವರೊಡೆಯಿತು. ಕುಲೀನಳೂ,

ಸುಶಿಕ್ಷಿತಳೂ ಆದ ಪದ್ಮನಯನೆಯು, ತನ್ನ ಪ್ರಿಯಪತಿಯ ಸಂಗಡ ನಡೆದು ಕೊಳ್ಳುವಂತೆ, ಕುರೂಪಿಯೂ, ದುಷ್ಟನೂ ಆದ ಆ ರಾಕ್ಷಸನ ಸಂಗಡ ನಡೆ ಕೊಳ್ಳುವಾಗ ಬಹಳ ವ್ಯಸನಪಟ್ಟಳು. ದೈತ್ಯನನ್ನು ರಮಿಸುವದು ಅವಶ್ಯವಾದ ದ್ದರಿಂದ, ಸುವಿಚಾರಿಯಾದ ಆ ಸುಂದರಿಯು, ಬಹಿರಂಗದಲ್ಲಿ ಹಾಗೆ ನಡೆದು ತೋರಿಸದಿದ್ದರೆ, ನಿರ್ವಾಹವಾಗುವಂತೆ ಇದ್ದಿಲ್ಲ. ರಾಜಪುತ್ರಿಯ ಉಪಚಾರವನ್ನು ನೋಡಿ ರಾಕ್ಷಸನು ಪ್ರೇಮದಿಂದ—ಹರಿಣಾಕ್ಷೀ, ನಿನ್ನ ಸೇವಕನಾದ ನನ್ನನ್ನು ನೀನು ಇಷ್ಟು ಮನ್ನಿಸಲವಶ್ಯವಿಲ್ಲ. ನಿನಗಿಂತ ಅಧಿಕಪ್ರಿಯವಾದದ್ದು ನನಗೆ ಮತ್ತೊಂದಿಲ್ಲ. ನನ್ನ ರಾಜ್ಯವೂ, ಐಶ್ವರ್ಯವೂ, ಅಧಿಕಾರವೂ, ನಾನೂ ನಿನ್ನ ಅಧೀನವೆಂದು ತಿಳಿ. ನೀನು ದೂರನಿಂತದ್ದರಿಂದ ನಿನ್ನ ಶರೀರಾವಯವಗಳ ಸ್ಥಿತಿಯು ಹೇಗಾಗಿದೆ ನೋಡಿದೆಯಾ? ಕೋಮಲವಾದ ನಿನ್ನ ಚರಣಗಳು, ಮುಡಿ-ಮೊಲೆ-ತಿಗಗಳ ಭಾರದಿಂದ ರಕ್ತವರ್ಣವನ್ನು ಹೊಂದಿವೆ. ನಿನ್ನ ಸೂಕ್ಷ್ಮವಾದ ಕಟಿಯು ಮುಡಿ-ಮೊಲೆಗಳ ಭಾರವನ್ನೂ ಹೊರಲಾರದೆ ಬಾಗಿದೆ; ನಿನ್ನ ಕೆಳದುಟಿಯು ಹಲ್ಲುಗಳಿಂದ ಆಗುವ ಆಘಾತವನ್ನು ತಡೆಯ ದಾಗಿದೆ. ಇಲ್ಲಿಯವರೆಗೆ ನಿನ್ನನ್ನು ನಿಲ್ಲಗೊಟ್ಟ ಈ ಕ್ರೂರನಾದ ಮೇಘನಾದನು ಮಹಾಪರಾಧಿಯಾಗಿದ್ದಾನೆ. ಬಾ, ನನ್ನ ಪಾರ್ಶ್ವಭಾಗದಲ್ಲಿ ವಿಶ್ರಮಿಸು, ಎಂದು ನುಡಿದು ರಾಕ್ಷಸನು ರಾಜಪುತ್ರಿಯ ಕೈಯನ್ನು ಹಿಡಿಯಹೋಗಲು, ಅವಳು ಗಾಬರಿಯಾದವಳಂತೆ ತೋರಿಸಿ ದೂರಸರಿದು ನುಡಿದಳೇನಂದರೆ—ಪ್ರತಾಪ ಶಾಲಿಯೇ, ಸ್ವಲ್ಪತಾಳು, ಕೈಗೆ ಬಂದ ತುತ್ತು ಬಾಯಿಗೆ ಬರುವದು ತಡವಲ್ಲ. ನನ್ನ ವಿಜ್ಞಾಪನೆಯನ್ನು ಚಿತ್ತಯಿಸು. ನನ್ನ ತಂದೆಯ ಪೂಜ್ಯಗುರುವಾದ ಕಪಿಂಜಲ ಋಷಿಯು, ೧೬ನೆಯ ವರ್ಷದ ವಯಸ್ಸಿನಲ್ಲಿ ನಾನು, ತಾಯಿ-ತಂದೆ ಗಳನ್ನಗಲುವೆನೆಂದು ಭವಿಷ್ಯ ಹೇಳಿದ್ದನ್ನು ಕೇಳಿ, ನನಗೆ ಬಹಳ ಅಸಮಾಧಾನ ವಾಯಿತು. ಆಗ ನಾನು ಸೌಭಾಗ್ಯಾಧಿದೇವತೆಯಾದ ಶ್ರೀ ಗೌರಿಯನ್ನು ಕುರಿತು—ಜಗದಂಬೇ, ದುರ್ದೈವದಿಂದ ನನಗೆ ಒದಗತಕ್ಕದ್ದಾಗಿರುವ ವಿಯೋ ಗದಲ್ಲಿ, ನಿನ್ನ ಕೃಪೆಯಿಂದ ಯೋಗ್ಯಪತಿಯು ದೊರೆತರೆ, ಒಂದು ವರುಷದವರೆಗೆ ವ್ರತಸ್ಥಳಾಗಿ ನಿನ್ನನ್ನು ಆರಾಧಿಸಿ, ಆ ಮೇಲೆ ಪತಿಯ ಪಾಣಿಗ್ರಹಣಮಾಡು ವೆನೆಂದು ಪ್ರಾರ್ಥಿಸಿರುತ್ತೇನೆ. ಆ ಸರ್ವಮಂಗಲೆಯ ಕೃಪೆಯಿಂದ ಕಾರ್ಯವು ಸಾಧಿಸಿರಲು, ಸುಖಕ್ಕೆ ಆತುರಪಟ್ಟು ದೇವಿಯ ಕ್ಷೋಭವನ್ನು ಹೊಂದುವದ

ರಿಂದ ಸುಖವಾಗಬಹುದೋ? ಒಂದು ವೇಳೆ ಈ ಪೃಥ್ವೀಕ್ಷೋಭಕ್ಕೆ ನಿಮ್ಮಂಥ ರಾಕ್ಷಸವೀರರು ಅಂಜಲಿಕ್ಕಿಲ್ಲ; ಆದರೆ ದುರ್ಬಲರಾದ ನಮ್ಮಂಥ ಮನುಷ್ಯರು ಅದಕ್ಕೆ ಹೆದರಬೇಕಾಗುವದು. ದಯಮಾಡಿ ನನ್ನ ವ್ರತವನ್ನು ಪೂರ್ಣ ಮಾಡಬೇಕು. ರಾಕ್ಷಸವೀರಾ, ಇದರ ಮೇಲೆಯೂ ನನ್ನ ವಿನಂತಿಯನ್ನು ಮನ್ನಿಸುವದು ನಿನಗೆ ಸರಿದೋರದಿದ್ದರೆ, ನಿನ್ನ ಅಪ್ಪಣೆಯಂತೆ ನಡಕೊಳ್ಳಲು ಸಿದ್ಧಳಾಗಿದ್ದೇನೆ. ಆದರೆ ಕೈಜೋಡಿಸಿ ಇನ್ನೊಮ್ಮೆ ಬೇಡಿಕೊಳ್ಳುವದೇನಂದರೆ—ನನ್ನ ಸಮಾಗಮ ಸುಖವು ಬಹುದಿವಸ ಒದಗಬೇಕೆಂದು ನೀನು ಬಯಸುತ್ತಿದ್ದರೆ, ದಯಮಾಡಿ ನನ್ನ ಕೋರಿಕೆಯನ್ನು ಕೊನೆಗಾಣಿಸಬೇಕು.

ಪದ್ಮನಯನೆಯ ಈ ಕಾರಣವು ಮೇಘನಾದನಿಗೆ ಸಮರ್ಪಕವಾಗಿ ತೋರುವಂತೆ ಇದ್ದಿಲ್ಲ. ಪದ್ಮನಯನೆಯಾದರೂ ಹಾಗೆ ತೋರೀತೆಂದು ಭಾವಿಸಿದ್ದಿಲ್ಲ. ಆಕೆಯು ಸದ್ಯಕ್ಕೆ ಏನಾದರೊಂದು ನೆವವನ್ನು ಮುಂದೆಮಾಡಿ, ರಾಕ್ಷಸನ ಪಾಣಿಗ್ರಹಣಕ್ಕೆ ಅಸಮ್ಮತಿಯನ್ನು ತೋರಿಸಬೇಕೆಂದು ಹೀಗೆ ಹೇಳಿದಳು. ಆಕೆಯ ತಂದೆಯಾದ ವೀರವರ್ಮನು, ತನ್ನ ಗುರುವಾದ ಕಪಿಂಜಲಋಷಿಯನ್ನು ಕುರಿತು ಒಮ್ಮೆ—ಮಹಾತ್ಮರೇ, ನನ್ನ ಮಗಳು ನನ್ನನ್ನಗಲಿ ಕಷ್ಟಪಡುತ್ತಿರುವಾಗ, ಯಾವನಾದರೂ ದುಷ್ಟನು ಬಲಾತ್ಕರಿಸಿದರೆ ಮಾಡುವದೇನು? ಅಂಥ ಪ್ರಸಂಗದಲ್ಲಿ ಸುಶೀಲೆಯಾದ ಪದ್ಮನಯನೆಯು ಪ್ರಾಣತ್ಯಾಗ ಮಾಡದೆ ಇರಳು. ಕೃಪೆಮಾಡಿ ಇದಕ್ಕೆ ಯಾವದಾದರೊಂದು ಪ್ರತಿಕಾರೋಪಾಯವನ್ನು ಯೋಚಿಸಬೇಕೆಂದು ಪ್ರಾರ್ಥಿಸಿದ್ದನು. ಅದಕ್ಕೆ ಋಷಿವರ್ಯನು, ನೃಪೋತ್ತಮನೇ, ಅದಕ್ಕಾಗಿ ನೀನು ಚಿಂತಿಸಬೇಡ, ನನ್ನ ಶಾಸನದಿಂದ ಯಾವ ಪುರುಷನೂ ಪದ್ಮನಯನೆಯಮೇಲೆ ಬಲಾತ್ಕಾರ ಮಾಡಲು ಸಮರ್ಥನಾಗಲಾರನು. ಆ ನೀಚ ಕೆಲಸಕ್ಕೆ ತೊಡಗಿದವನ ಪ್ರಾಣಹಾನಿಯಾಗದೆ ಇರದು. ಪದ್ಮನಯನೆಯ ಪ್ರೀತಿಗೆ ಪಾತ್ರನಾದವನೇ, ಅವಳ ಪಾಣಿಗ್ರಹಣಕ್ಕೆ ಸಮರ್ಥನಾಗುವನು. ಪದ್ಮನಯನೆಯು, ಹದಿನಾರನೆಯ ವರ್ಷದಿಂದಲೇ ಶ್ರೀ ಗೌರಿಯನ್ನು ಭಕ್ತಿಯಿಂದ ಪೂಜಿಸತೊಡಗಬೇಕು. ತನ್ನನ್ನು ಲಗ್ನವಾಗಬೇಕೆಂದು ಬಯಸುವ ಅಯೋಗ್ಯಪುರುಷನ ಮುಂದೆ, ಅಸಮ್ಮತಿಯನ್ನು ತೋರಿಸುವಾಗ, ಈ ಗೌರಿಯ ವ್ರತವನ್ನೇ ಆಕೆಯು ಮುಂದೆ ಮಾಡಬೇಕು, ಎಂದು ಹೇಳಿದ್ದನು. ಇದನ್ನು

ಪದ್ಮನಯನೆಯು ಕೇಳಿ, ಗುರುವಿನ ಅಪ್ಪಣೆಯಂತೆ ಹದಿನಾರನೆಯ ವರ್ಷದಿಂದಲೇ ವ್ರತಸ್ಥಳಾಗಿ ಗೌರಿಯನ್ನು ಆರಾಧಿಸತೊಡಗಿದ್ದಳು. ಈ ಸಂಗತಿಯು ಮೇಘನಾದನಿಗೂ ಗೊತ್ತಿತ್ತು. ಮೇಘನಾದನು ಎಂಥ ಶೂರನಿದ್ದರೂ, ಎಷ್ಟು ಮಾಯಾವಿಯಿದ್ದರೂ ಮಹಾತ್ಮರ ಶಾಪಭಯವು ಅವನನ್ನು ಬಾಧಿಸದೆಬಿಡಲಿಲ್ಲ. ಕಾಮುಕನಾದರಾವಣನು, ಇಂದ್ರಪುತ್ರನ ಶಾಪಭಯದಿಂದಲೇ, ಲೋಕಸುಂದರಿಯಾದ ಸೀತಾಮಾತೆಯನ್ನು, ಬಲಾತ್ಕರಿಸಲಿಲ್ಲೆಂದು ಆನಂದರಾಮಾಯಣದಲ್ಲಿ ಹೇಳಿದೆ. ಈ ಸಂಗತಿಯನ್ನು ಮೇಘನಾದನು ಅರಿತವನಾಗಿದ್ದನು; ಅದರಿಂದ ಅವನಿಗೆ ಪದ್ಮನಯನೆಯು, ಬಾಯಲ್ಲಿ ಹಾಕಿಕೊಂಡ ಬಿಸಿತುಪ್ಪದಂತೆ ಬಾಧಿಸತೊಡಗಿದಳು. ಆತನು ಮನಸ್ಸಿನಲ್ಲಿ—ಈಗ ನಾನು ಪದ್ಮನಯನೆಯು ಮಾತಿಗೆ ಒಪ್ಪದೆ ಆಕೆಯನ್ನು ಬಲಾತ್ಕರಿಸಿದರೆ, ಋಷಿಯ ಶಾಪವು ತಟ್ಟದೆ ಇರದು. ಹಾಗೆ ಮಾಡುವದು ಜಾಣತನವಲ್ಲ. ಕೈಮೀರುವ ಪ್ರಸಂಗ ಒದಗಿದಲ್ಲಿ, ನಾನು ಈ ಸುಂದರಿಗಾಗಿ ಪ್ರಾಣವನ್ನರ್ಪಿಸಲಿಕ್ಕೂ ಹಿಂದೆ ಮುಂದೆ ನೋಡುವದಾಗಿಲ್ಲ. ಮಾರ್ಗಾಯಾಸದಿಂದಲೂ, ಬಂಧು—ಮಿತ್ರರ ವಿಯೋಗ ದುಃಖದಿಂದಲೂ, ಅಪರಿಚಿತ ಸ್ಥಳದಲ್ಲಿರುವದರಿಂದಲೂ, ಮೊದಲೇ ಹೈರಾಣಾಗಿರುವ ಈ ಕೋಮಲೆಯ ಮನಸ್ಸನ್ನು, ಮತ್ತಿಷ್ಟು ನೋಯಿಸುವದು ಹಿತಕರವಲ್ಲ. ಈಕೆಯನ್ನು ಒಲಿಸಿಕೊಳ್ಳುವದೇ ಸರ್ವಾಂಗ—ಸುಂದರವಾದ ಉಪಾಯವಾಗಿರುವದು.

ಈ ಮೇರೆಗೆ ಯೋಚಿಸಿ ರಾಕ್ಷಸನು, ಪದ್ಮನಯನೆಯನ್ನು ಕುರಿತು—ಸುಂದರೀ, ನಿನ್ನ ಅಪ್ಪಣೆಗೆ ವಿರೋಧವಾಗಿ ನಾನು ಎಂದೂ ವರ್ತಿಸಲಾರೆನು. ನೀನು ದುಃಖದಿಂದ ಕಂಗೆಟ್ಟಿರುವದನ್ನು ನಾನು ಬಲ್ಲೆನು. ನಿನ್ನ ವ್ರತವು ಸಮಾಪ್ತವಾದಮೇಲೆಯೇ ನನ್ನ ಪಾಣಿಗ್ರಹಣ ಮಾಡುವ ಕೃಪೆಮಾಡು. ನಿನ್ನ ಸುಖವೇ ನನ್ನ ಸುಖವು; ನಿನ್ನ ಇಚ್ಛೆಯೇ ನನ್ನ ಇಚ್ಛೆಯು. ಒಂದು ವರ್ಷದ ಮೇಲಾದರೂ ನನ್ನನ್ನು ವರಿಸಲು ನೀನು ಸಮ್ಮತಿಸುವದು ಪರಮಾನುಗ್ರಹವಾಗಿರುವದು. ನಿನ್ನ ವ್ರತಕ್ಕೆ ತೊಂದರೆಯಾಗದಂತೆ ಎಲ್ಲ ಅನಕೂಲತೆಗಳನ್ನು ಒದಗಿಸಿಕೊಡುತ್ತೇನೆ. ನಾನು ಮೇಲೆ ಮೇಲೆ ನಿನ್ನ ಬಳಿಗೆ ಬಂದು ನಿನಗೆ ತೊಂದರೆಯನ್ನು ಕೊಡುವದಿಲ್ಲ. ಶ್ರೀ ಗೌರಿಯ ದರ್ಶನಕ್ಕಾಗಿ ಮಂಗಳವಾರ

ಕ್ಕೊಮ್ಮೆ ನಿನ್ನ ಸನ್ನಿಧಿಗೆ ಬರುವೆನು, ಎಂದು ಹೇಳಿದನು. ಇದನ್ನು ಕೇಳಿ ಪದ್ಮನಯನೆಯು ಆನಂದವನ್ನು ಪ್ರಕಟಿಸುತ್ತ—ದೈತ್ಯರಾಜನೇ, ನಿನ್ನ ಉಪ ಕಾರವನ್ನು ನಾನು ಎಂದೂ ಮರೆಯುವದಿಲ್ಲ. ನಾನು ಸಂಪೂರ್ಣವಾಗಿ ನಿನ್ನ ಕೊರಳಿಗೆ ಬಿದ್ದವಳೆಂದು ತಿಳಿ. ನನ್ನ ಸಂರಕ್ಷಣದ ಭಾರವು ನಿನ್ನನ್ನೇ ಕೂಡಿದೆ. ಅನ್ನಲು, ರಾಕ್ಷಸನು ಭಗ್ನಮನೋರಥನಾದರೂ ಉಪಾಯಗಾಣದೆ ಆನಂದ ವನ್ನು ಪ್ರಕಟಿಸುತ್ತ, ಪದ್ಮನಯನೆಯ ಅನುಮತಿಯನ್ನು ಪಡೆದು, ಶೋಣಿತ ಪುರಕ್ಕೆ ಹೊರಟು ಹೋದನು.

ಪದ್ಮನಯನೆಯು ರಾಕ್ಷಸನಿಂದ ಒಂದು ವರ್ಷದ ಅವಧಿಯನ್ನು ಹೊಂದಿದಾಗ್ಯೂ, ಅವಳ ಮನಸ್ಸು ಶಾಂತವಾಗಲಿಲ್ಲ. ರಾಕ್ಷಸನ ಕಾಟವನ್ನು ತಪ್ಪಿಸಿಕೊಳ್ಳುವದಷ್ಟೇ ಆಕೆಯ ಸುಖದ ಪರಮಾವಧಿಯಾಗಿದ್ದಿಲ್ಲ. ದುರ್ಮಾ ರ್ಗಿಯೂ ಪಾಪಿಷ್ಠನೂ ಆದ ಮೇಘನಾದನು, ಶಾಪಭಯದಿಂದ ತನ್ನವ್ರತಕ್ಕೆ ಈಗ ಸಮ್ಮತಿಸಿದ್ದರೂ, ಆ ತಾಮಸಿಯು ತನ್ನ ಪ್ರಾಣಹಾನಿಯನ್ನು ಲೆಕ್ಕಿಸದೆ, ಎಲ್ಲಿ ದುರ್ಮಾರ್ಗಕ್ಕೆ ಮನಸ್ಸು ಮಾಡುವನೋ, ಎಂದು ಆಕೆಯು ಹೆದರಿದಳು. ಬಾರಿಬಾರಿಗೆ ತಾಯಿ–ತಂದೆಗಳ ಸ್ಮರಣವಾಗಿ ಅವಳಿಗೆ ಬಹಳ ವ್ಯಸನವಾಗು ತ್ತಿತ್ತು. ಚಿಂತೆಯಿಂದ ಅವಳ ಶರೀರವು ಒಣಗಹತ್ತಿ, ಮುಖಕಾಂತಿಯು ಕುಂದುತ್ತ ನಡೆಯಿತು. ಇದನ್ನು ಆಕೆಯ ಪ್ರೀತಿಯ ಗೆಳತಿಯಾದ ಸುಮಧ್ಯ ಮೆಯು ನೋಡಿ—ಅವ್ವಾ, ಪದ್ಮನಯನಾ, ಹೀಗೆ ನೀನು ಶೋಕಮಾಡುತ್ತ ಕುಳಿತುಕೊಳ್ಳುವದರಲ್ಲಿ ಜಾಣತನವಿಲ್ಲ. ಹೇಗೂ ರಾಕ್ಷಸಕ್ರೂರನಿಂದ ಒಂದು ವರ್ಷದ ಅವಧಿಯನ್ನು ಪಡೆದಿರುತ್ತೀ. ಅಲ್ಲಿಯವರೆಗಂತೂ ದೇವರಲ್ಲಿ ವಿಶ್ವಾಸ ವಿಟ್ಟು ಸಮಾಧಾನದಿಂದ ಇರು. ಇದೇ ಕಾಲವು ಕಡೆತನಕ ಇರುತ್ತದೆಂದು ತಿಳಿಯಬೇಡ. ಕ್ಷಣದಲ್ಲಿ ಉಪ್ಪರಿಗೆಯು ತಿಪ್ಪೆಯಾಗುತ್ತದೆ, ತಿಪ್ಪೆಯು ಉಪ್ಪರಿಗೆಯಾಗುತ್ತದೆ. ಈ ಹೊತ್ತಿನವರೆಗೆ ಯಾರಿಗೂ ಪ್ರಾಪ್ತವಾಗದಿರುವ ರಾವಣನ ವೈಭವವನ್ನು, ದೈವೀಸತ್ವವು ಮಂಗಗಳ ಕೈಯಿಂದ ಮಣ್ಣುಗೂಡಿಸಿ ಬಿಟ್ಟಿತು. ದಾರಿದ್ರ್ಯದ ಪ್ರದರ್ಶನವಾದ ಸುದಾಮನ ಮುರುಕು ಗುಡಿಸಲನ್ನು ಅದೇ ದೈವೀಸತ್ವವು ಬಂಗಾರದ ಪಟ್ಟಣದೊಳಗಿನರಾಜಮಂದಿರವಾಗಮಾಡಿತು. ರಂತೆ, ವನವಾಸದ ಕಷ್ಟಗಳನ್ನು ಭೋಗಿಸಿದ ಪಾಂಡವರು ಸಾರ್ವಭೌಮ

ಕಾದರೆ, ಸಾರ್ವಭೌಮಪದವಿಯ ಸುಖವನ್ನನುಭವಿಸಿದ ಕೌರವರು ನಾಶ ಹೊಂದಿದರು! ಈ ಸೃಷ್ಟಿಯಲ್ಲಿ ಹಿಂದೆ ಆಗಿರುವ, ಈಗ ಆಗುತ್ತಿರುವ, ಇಂಥ ಸ್ಥಿತ್ಯಂತರಗಳನ್ನೇ ಹೇಳುತ್ತ ಕುಳಿತರೆ, ಅದೊಂದು ಗ್ರಂಥವೇ ಆಗಬಹುದು. ಇದನ್ನು ನೀನು ಅರಿಯದವಳಲ್ಲ. ಸತ್ಕಾರ್ಯದಲ್ಲಿ ಶರೀರವನ್ನು ಸವಿಸಬೇಕಲ್ಲದೆ, ಹಾಳುಚಿಂತೆಗೆ ಗುರಿಮಾಡಿ ಅದನ್ನು ಸುಟ್ಟು ಬಿಡುವದು ಸರಿಯಲ್ಲ. ರಾಜಪುತ್ರಿ, ಹೊತ್ತುಬಂದಹಾಗೆಕೊಡೆಹಿಡಿಯುವದು ಸತ್ವಶಾಲಿಗಳಿಗೆ ಒಪ್ಪದಿದ್ದರೂ, ಅವರು ಒಮ್ಮೊಮ್ಮೆ ದೂರದರ್ಶಿಗಳಾಗಿ ಹಾಗೆ ಮಾಡಬೇಕಾಗುತ್ತದೆಂಬದನ್ನು ಮರೆಯಬೇಡ. ನಿನ್ನ ವೃತ್ತಾಂತವನ್ನು ನಿನ್ನ ಮುಖದಿಂದಲೇ ಕೇಳಿದ ನನಗೆ ಬಹಳ ವ್ಯಸನವಾಗುತ್ತದೆ. ಅಮ್ಮಾ, ನಮ್ಮನ್ನು ನೋಡು, ನಾವೂ ನಿನ್ನ ಹಾಗೆ ಮನುಷ್ಯರಲ್ಲವೇ? ನಿನ್ನೆ ಹೇಳಿರುವ ನನ್ನ ವೃತ್ತಾಂತವನ್ನು ಕೇಳಿರುವೆಯಷ್ಟೇ? ನಾನೂ ಒಬ್ಬ ಮಾಂಡಲಿಕರಾಜನ ಮಗಳು, ಒಬ್ಬ ಧೀರ-ವೀರ-ರಾಜಪುತ್ರನ ಪಾಣಿಗ್ರಹಣ ಮಾಡಿದ್ದೆನು; ಆದರೆ ಈಗ ಆ ಸೌಭಾಗ್ಯವೆಲ್ಲಿ ಉಳಿದದೆ? ನನ್ನ-ಪಾತಿವ್ರತ್ಯದ ತೇಜಸ್ಸೆಲ್ಲಿ ಮಿನಗುತ್ತಲಿದೆ? ನಮ್ಮಂಥ ಅಬಲೆಯರ ಪಾತಿವ್ರತ್ಯವನ್ನು ಸುಟ್ಟು ಸೂರೆ ಮಾಡಿ, ಗೋಳುಕಟ್ಟಿಕೊಳ್ಳುವ ಚಾಂಡಾಲನಾದ ಮೇಘನಾದನ ವಂಶವು, ಹುರಿದು ಹೋಗದೆ ಇರುವದಿಲ್ಲ. ಪದ್ಮನಯನೇ, ನೀನು ಬಹು ಪುಣ್ಯವಂತಳು ಕಂಡೆಯಾ! ಸತ್ಪುರುಷನ ಪ್ರಸಾದದಿಂದ ಉತ್ಪನ್ನವಾಗಿರುವ ನಿನ್ನ ಪವಿತ್ರ ದೇಹವನ್ನು ಕಲಂಕಿತವಾಗಮಾಡಲು, ಶ್ವಾನಸ್ವರೂಪನಾದ ಮೇಘನಾದನು ಸಮರ್ಥನಾಗಲಾರನು. ಮಹಾತ್ಮನಾದ ಕಪಿಂಜಲನ ಭವಿಷ್ಯವನ್ನು ನೀನು ಸ್ಮರಿಸುತ್ತಿರು! ನೀನು ಸಾರ್ವಭೌಮನ ಪತ್ನಿಯೂ, ಸಾರ್ವಭೌಮನ ತಾಯಿಯೂ ಆಗುವೆಯಲ್ಲವೆ! ಬ್ರಹ್ಮಜ್ಞಾನಿಗಳ ಭವಿಷ್ಯದಲ್ಲಿಯೂ ಸಂಶಯಪಡುವು ಇರುವದೆ? ಬೇಡವ್ವಾ ದುಃಖಿಸಬೇಡ. ಸತ್ವಶೀಲೆಯಾಗು, ಕ್ಷಾತ್ರತೇಜಸ್ಸಿನಿಂದ ಮೆರೆ, ನಿನ್ನ ಉಗ್ರವ್ರತಾಚರಣೆಯಿಂದ,ಹುರಿದುಹೋಗುವ ಮೇಘನಾದನ ವಂಶವನ್ನು ನೋಡಿ ನಾವು ಆನಂದ ಪಡುವಂತೆ ಮಾಡು. ವಿಷಯಾಸಕ್ತನಾದ ಚಾಂಡಾಲ ಮೇಘನಾದನು, ಇಂದು ಪಟ್ಟಮಹಿಷಿಯಾಗ ಮಾಡಿದವಳನ್ನು ನಾಳೆ ದಾಸಿಯಾಗಮಾಡುವನು. ಅವನ ಸವಿನುಡಿಗಳನ್ನು ನಂಬಲಾಗದು ಕಂಡೆಯಾ! ಸಾರ್ವಭೌಮಕುವರೀ, ಬಹು ಜಾಗರೂಕಳಾಗಿರು. ನಮ್ಮನ್ನು ಸಹ ನೀನು ನಂಬತಕ್ಕದ್ದಲ್ಲ. ನಾವು ಅಂತರಂಗದಲ್ಲಿ ಮೇಘ

ನಾದನಿಗೆ ಅನುಕೂಲವಾಗಿದ್ದು, ಬಹಿರಂಗದಲ್ಲಿ ನಿನ್ನ ಜೀವದ ಗೆಳತಿಯರಂತೆ ನಟಿಸಬಹುದು. ಅದೇ ಕಾರಣದಿಂದ ಹೊಸಬಳಾದ ನಿನಗೆ ಮನಬಿಚ್ಚಿ ಮಾತಾಡದೆ ಸುಮ್ಮನಿರಲು ಅಂದು ನಾನು ಸೂಚಿಸಿದೆನು. ಬಹಳ ಹೇಳುವದೇನು? ನಿನ್ನ ಕುಲಕ್ಕೂ, ವಂಶಕ್ಕೂ, ಶೀಲಕ್ಕೂ, ವಿದ್ಯೆಗೂ, ವಯಸ್ಸಿಗೂ, ಪ್ರಸಂಗಕ್ಕೂ ಒಪ್ಪುವಂತೆ ನಡೆಯಂದರಾಯಿತು. ಅದರಿಂದಲೇ ನಿನ್ನ ಕಲ್ಯಾಣವಾಗುವದು! ರಾಜಪುತ್ರೀ, ಮನುಷ್ಯನ ಸಂಸಾರಯಾತ್ರೆಗೆ ಕಟ್ಟಿದ ಬುತ್ತಿಯಾವದು? ಕಾಲ್ಪನಿಕ ಸುಖವಲ್ಲವೇ? ಅಂದಬಳಿಕ ಸುಖವನ್ನು ಕಲ್ಪಿಸುತ್ತ ಆನಂದದಿಂದಿರು.



## ೪ ನೆಯ ಪ್ರಕರಣ.

# ಸದ್ಬೋಧ.



ಸುಮಧ್ಯಮೆಯ "ಈ ಸರ್ವಾಂಗ–ಸುಂದರವಾದ ಸದುಪದೇಶದಿಂದ, ಪದ್ಮನಯನೆಯ ಮನಸ್ಸು ಸಮಾಧಾನಪಟ್ಟಿತು. ಆಕೆಯು ಯಾವಚಿಂತೆಯೂ ಇಲ್ಲದೆ, ಗುರ್ವಾಜ್ಞೆಯಂತೆ ವ್ರತಸ್ಥಳಾಗಿ ಸರ್ವಮಂಗಲೆಯನ್ನು ಪೂಜಿಸುತ್ತ, ಸುಮಧ್ಯಮೆಯ ಸಹವಾಸದಲ್ಲಿ ಸುಖದಿಂದ ಕಾಲಹರಣಮಾಡಹತ್ತಿದಳು. ಮೇಘನಾದನು ಕಳೆದುಹೋಗುತ್ತಿರುವ ದಿವಸಗಳನ್ನು ಬಟ್ಟೆಸಿಂದ ಎಣಿಸುತ್ತ ಪದ್ಮನಯನೆಯಬಳಿಗೆ ಬರುತ್ತಿದ್ದನು, ಹೋಗುತ್ತಿದ್ದನು. ಹಾವುಗಾರನು ಕಣ್ಣುಕಟ್ಟಿನಿಂದ ನೋಟಕರನ್ನು ಮೋಹಿಸುವಂತೆ, ಹುರುಳಿಲ್ಲದ ಸ್ತ್ರೀಚೇಷ್ಟೆಗಳಿಂದ ಪದ್ಮನಯನೆಯು ಆತನನ್ನು ಮೋಹಗೊಳಿಸುತ್ತಿದ್ದಳು. ಆಗಲಿ, ಮೇಘನಾದನ ಎಣಿಕೆಗೂ, ಪದ್ಮನಯನೆಯ ಚೇಷ್ಟೆಗಳಿಗೂ ನಾವು ಯಾಕೆ ವಿಘ್ನಮಾಡಬೇಕು? ಪ್ರಿಯವಾಚಕರೇ, ನಡಿಯಿರಿ, ನಾವು ಕನೋಜಪಟ್ಟಣಕ್ಕೆ ಹೋಗೋಣ. ಪಾಪ! ಬಹುದಿವಸ ಮಕ್ಕಳ–ಮಕ್ಕಳಿಂದು ಹಲುಬಿ,

ಮುಪ್ಪಿನಲ್ಲಿ ಪದ್ಮನಯನೆಯನ್ನು ಪಡೆದು, ಪ್ರಾಣಕ್ಕಿಂತಲೂ ಹೆಚ್ಚೆಂದು ತಿಳಿದು ಆಕೆಯನ್ನು ರಕ್ಷಿಸಿದ ವೃದ್ಧವೀರವರ್ಮನು, ಪದ್ಮನಯನೆಯ ವಿಯೋಗದಿಂದ ನೆಲಕ್ಕೆಬಿದ್ದಿರಬಹುದಲ್ಲವೆ? ಇಂಥ ಪ್ರಸಂಗವಲ್ಲಿಯೇ ಮನುಷ್ಯನ ಪರೀಕ್ಷೆಯಾಗುತ್ತದೆ, ಇಂಥ ಪ್ರಸಂಗವಲ್ಲಿಯೇ ಸತ್ವಮಾಗದಿಂದ ಮನುಷ್ಯನ ವೃತ್ತಿಯಲ್ಲಿ ಆಗಿದ್ದ ಹೆಚ್ಚುಕಡಿಮೆಯು ಒಡೆದು ಕಾಣುತ್ತದೆ. ವೀರವರ್ಮನು ಸಾಮಾನ್ಯನಲ್ಲ, ಒಂದು ತಪಕ್ಕಿಂತ ಹೆಚ್ಚುಕಾಲ ಸತ್ವಮಾಗವು ಮಾಡಿದ ಸಾರ್ವಭೌಮನು!

ವೀರವರ್ಮನು ಕಪಿಂಜಲನ ಶ್ಮಶಾನವಿಧಿಯನ್ನು ತೀರಿಸಿಕೊಂಡು, ಮನೆಗೆ ಬಂದನು. ಆತನಿಗೆ ಪದ್ಮನಯನೆಯು ಇಲ್ಲದಾದ ಸಂಗತಿಯು ಬೇಗನೆ ಗೊತ್ತಾಗಲಿಲ್ಲ. ಅಂಗರಕ್ಷಕರಿಂದ ಸುತ್ತಲ್ಪಟ್ಟ ಪದ್ಮನಯನೆಯ ಸುರಕ್ಷಿತತೆಯ ವಿಷಯವಾಗಿ, ಯಾರಲ್ಲಿಯೂ ಶಂಕೆಯು ಉತ್ಪನ್ನವಾಗುವಂತೆ ಇದ್ದಿಲ್ಲ. ಕುದುರೆಹತ್ತುವಲ್ಲಿ ಪದ್ಮನಯನೆಯು ಪ್ರವೀಣಳೇ ಇದ್ದಳು. ಮೇಲಾಗಿ ಆಕೆಯನ್ನು ಅಂಗರಕ್ಷಕರು ಹಿಂಬಾಲಿಸಿ ಹೋಗಿದ್ದರು. ಅಂದಬಳಿಕ, ಪಟ್ಟದ ಕುದುರೆಯು ಓಡಹತ್ತಿದಷ್ಟಕ್ಕೆ ಪದ್ಮನಯನೆಯು, ಅಡವಿಯ ಪಾಲಾಗುವಳೆಂದು ಯಾರಮನಸ್ಸಿನಲ್ಲಿ ಬರಬೇಕು? ಪದ್ಮನಯನೆಯಿಲ್ಲ– ಅಂಗರಕ್ಷಕರಿಲ್ಲ! ಅವರು ಈಗ–ಬಂದಾರು ಇನ್ನೊಂದು ತಾಸಿಗೆಬಂದಾರು, ಎಂದು ಹಾದಿಯನ್ನು ನೋಡುವವರಲ್ಲಿಯೇ ಸಂಜೆಯಾಯಿತು. ವೀರವರ್ಮನು ಗಾಬರಿಯಾದನು. ಅವನ ಹೃದಯಕ್ಕೆ ಕಪಿಂಜಲನ ಭವಿಷ್ಯರೂಪವಾದ ಬಾಣವು ನಟ್ಟು, ಅವನನ್ನು ಬಳಲಿಸಿತು. ಕಣ್ವರಂಥ ಮಹಾತ್ಮರೂ, ತಮ್ಮ ಸಾಕುಮಗಳಾದ ಶಕುಂತಲೆಯನ್ನು ಗಂಡನ ಮನೆಗೆ ಕಳಿಸುವಾಗ ಕಣ್ಣೀರು ಹಾಕಿರಲು, ಹೊಟ್ಟೆಯ ಮಗಳ ಆಕಸ್ಮಿಕ ವಿಯೋಗಪ್ರಸಂಗವಲ್ಲಿ, ವೀರವರ್ಮನು ದುಃಖದಿಂದ ಕಣ್ಣೀರು ಸುರಿಸಿದ್ದರಲ್ಲಿ ಆಶ್ಚರ್ಯವೇನು? ಆ ವೃದ್ಧನಾದ ಸಾರ್ವಭೌಮನು ಮಗಳ ಗುಣಗಳನ್ನೂ, ವಿದ್ಯೆಯನ್ನೂ, ರೂಪವನ್ನೂ ನೆನಿಸಿ ನೆನಿಸಿ ಬಹಳವಾಗಿ ಹಲುಬಿದನು. ಹಾ ಹಾ ಅನ್ನುವವರೊಳಗೆ ಈ ದುಃಖದ ಸಂಗತಿಯು ಕನೋಜಪಟ್ಟಣದ ತುಂಬ ಹಬ್ಬಿತು. ಪ್ರಜೆಗಳು ಮರಮರನೆ ಮರುಗಿ ದುಃಖದಿಂದ ಕಣ್ಣೀರು ಸುರಿಸಹತ್ತಿದರು. ಅಂತಃಪುರವಲ್ಲಿ ಮನಮೋಹಿನಿಯೇ ಮೊದಲಾದವರು ಶೋಕಸಾಗರದಲ್ಲಿ ಮುಳುಗಿದರು. ಕಪಿಂಜಲನ ಶ್ಮಶಾನಯಾತ್ರೆ

ಯಿಂದ ಮೊದಲೇ ಉದಾಸೀನವಾಗಿದ್ದ ಆ ರಾಜಧಾನಿಯು, ಪದ್ಮನಯನೆಯ ವಿಷಯದ ಈ ದುಷ್ಟವಾರ್ತೆಯನ್ನು ಕೇಳಿ ಕರ್ತವ್ಯಶೂನ್ಯವಾಯಿತು.

ಗುರುವಿನ ಪರಲೋಕಗಮನ, ಮಗಳವಿಯೋಗ ಇವೆರಡು ಒಮ್ಮೆಲೆ ಒದಗಿದ್ದರಿಂದ, ವೀರವರ್ಮನ ಮನಸ್ಸಿನ ಸ್ಥಿತಿಯು ವಿಚಿತ್ರವಾಯಿತು. ಅವನ ಅವಸಾನವು ಅಳಿಯಿತು, ಆಧಾರವು ತಪ್ಪಿತು, ಆಶೆಯು ಹಾಳಾಯಿತು, ಬಾಳು ನೀರಸವಾಯಿತು! ಪದ್ಮನಯನೆಯು ತನ್ನ ಸುಖಸರ್ವಸ್ವವೆಂದೂ, ಕಪಿಂಜಲನು ಶಾಂತಿಯ ಮಂದಿರವೆಂದೂ ಆತನು ಧೃಢವಾಗಿ ನಂಬಿದ್ದನು. ಈ ಸುಖ-ಶಾಂತಿಗಳು ಒಮ್ಮೆಲೆ ಕೈ ಬಿಟ್ಟು ಹೋದಬಳಿಕ ಏನಿದ್ದು ಏನು ಮಾಡಬೇಕು? ವೀರವರ್ಮನಬಾಳು ಮೂಗಿಲ್ಲದ ಮೋರೆಯಂತೆಯೂ, ವಿನಯವಿಲ್ಲದ ವಿದ್ಯೆಯಂತೆಯೂ, ಸದಾಚರಣೆಯಿಲ್ಲದ ವೇದಾಂತಜ್ಞಾನದಂತೆಯೂ ಅಮಂಗಲವಾಯಿತು. ನೋಡಿದತ್ತೆಲ್ಲ ಅವನಿಗೆ ಕಗ್ಗತ್ತಲೆಯೇ ತೋರಹತ್ತಿತು ಇಬ್ಬಗೆಯ ಇರತಗಳಿಂದ ಆ ವೃದ್ಧನು ಜರ್ಜರನಾದನು. ದರ್ಶನಕ್ಕಾಗಿ ಬಂದ ಆಪ್ತೇಷ್ಟರು ಅವನ ಬೇಸರಕ್ಕೆ ಕಾರಣರಾದರು; ಉಪದೇಶಕರ ಉಪದೇಶಗಳು ನೀರಸವಾದವು; ಎಣೆಯಿಲ್ಲದ ಐಶ್ವರ್ಯ-ವೈಭವಗಳು ಅವನಿಗೆ ಅಸಹ್ಯವಾಗಿ ತೋರಹತ್ತಿದವು. ಆ ಗಂಭೀರನು ಪ್ರಸಿದ್ಧವಾಗಿ ಕಣ್ಣೀರು ಸುರಿಸಲಿಕ್ಕೆ ಸಂಕೋಚಪಟ್ಟರೂ, ಮೋಹ-ಭಕ್ತಿಗಳ ಹೆಚ್ಚಳದಿಂದ ಅವು ಕಣ್ಣೊಳಗಿಂದ ತಾವೇ ಹೊರಬಿದ್ದು ಸುರಿಯಹತ್ತಿದವು. ಪ್ರಿಯವಾಚಕರೇ, ಮಗಳ ಗುಣಾತಿಶಯವನ್ನು ನೆನಿಸಿ ನೆನಿಸಿ ದುಃಖಿತನಾದ ಆ ರಾಜನು, ತನ್ನ ಗುರುವಿನ ಅಮಾನುಷಶಕ್ತಿಯನ್ನು ಸ್ಮರಿಸಿ, ಭಕ್ತಿಪೂರ್ವಕವಾಗಿ ಆತನಿಗೆ ಶರಣುಹೋಗಿ ಮೊರೆಯಿಡುವಾಗ, ಸುರಿದ ಆ ಕಣ್ಣೀರುಗಳು ಮೋಹದವೊ-ಭಕ್ತಿಯವೋ, ಎಂದುಯಾರು ಹೇಳಬೇಕು? ನಾವಂತು ಆ ಮೋಹ-ಭಕ್ತಿಗಳ ಆಘಾತದಿಂದುಂಟಾದ ದೈನ್ಯದವೆಂದು ತಿಳಿಯುವೆವು. ಹೀಗೆ ದೈನ್ಯದಿಂದ ವೀರವರ್ಮನ ಕಣ್ಣೊಳಗಿಂದ ನೀರುಗಳು ತಾವಾಗಿ ಹೋಗುತ್ತಿರಲು, ಆಪ್ತೇಷ್ಟರೂ, ಪ್ರಜೆಗಳೂ ಆತನನ್ನು ಸುತ್ತುಗಟ್ಟಿ, ಸುಮ್ಮನೆಕಣ್ಣೀರು ಸುರಿಸುತ್ತ ನಿಂತುಕೊಂಡರು. ಆ ಸಂಕೋಚಮೂಲವಾದ ನಿಃಶಬ್ದ ಶೋಕಪ್ರಸಂಗವು ಬಹು ಹೃದಯಭೇಧಕವಾಗಿತ್ತು. ಇದರಿಂದ ವೀರವರ್ಮನ ದುಃಖವು ಮತ್ತಿಷ್ಟು ಹೆಚ್ಚಿತು. ಅದನ್ನು ಸಹಿಸಲಾರದೆ ಆ ವೃಧ್ಧ ಸಾರ್ವಭೌಮನು ಕಣ್ಣು ತುಂಬ ನೀರು ತಂದು, ಎಲ್ಲರನ್ನು ದೈನ್ಯ

ದಿಂದ ನೋಡುತ್ತ, ಕೃತಜ್ಞತೆಯನ್ನು ಪ್ರಕಟಿಸುತ್ತ ಏಕಾಂತಗೃಹಕ್ಕೆ ಹೋಗಿ ಮನದಣಿಯಾಗಿ ಅಳಹತ್ತಿದನು. ಈ ಅನಿವಾರ ಪ್ರಸಂಗದಲ್ಲಿ ಆತನು ಆಧಾರಕಾಣದೆ, ಅನನ್ಯಗತಿಕನಾಗಿ ಸದ್ಗುರುವನ್ನು ಶರಣು ಹೋಗುತ್ತಿರಲು, ಕಪಿಂಜಲಋಷಿಯ ಪಟ್ಟಶಿಷ್ಯನಾದ ಸುಮತಿಯೆಂಬವನು ಅವನ ಬದಿಯಲ್ಲಿ ಬಂದು ನಿಂತಕೊಂಡನು.

ನಮ್ಮ ವಾಚಕರು ಸುಮತಿಯನ್ನು ಅರಿಯರು, ಆದರಿಂದ ಮೊದಲು ಆತನ ಪರಿಚಯವನ್ನು ಮಾಡಿಕೊಡೋಣ. ಲೋಕದಲ್ಲಿ ಕೋಟ್ಯಂತರ ಗುರುಗಳಿರುವರು, ಒಬ್ಬ ಗುರುವಿಗೆ ಅನೇಕ ಜನ ಶಿಷ್ಯರಿರುವದರಿಂದ, ದಶಕೋಟ್ಯಂತರ ಶಿಷ್ಯರೂ ಇರುವರು. ಆದರೆ ನಿಜವಾದ ಗುರು–ಶಿಷ್ಯರು ದುರ್ಲಭರು. ಅದರಲ್ಲಿ ನಮ್ಮ ಕಪಿಂಜಲಋಷಿಗಳಂಥ ಗುರುಗಳೂ, ಸುಮತಿಯಂಥ ಶಿಷ್ಯರೂ ಪರಮ ದುರ್ಲಭರೆಂದು ಹೇಳಬಹುದು. ಕಪಿಂಜಲ ಗುರುಗಳ ಮುಖ್ಯ ಧರ್ಮವು ಸಮ್ಯದರ್ಶನವು. ಅದರಿಂದಲೇ ಆ ಮಹಾತ್ಮರು ತಟಸ್ಥವೃತ್ತಿಯಿಂದ ಇರಲು ಸಮರ್ಥರಾಗಿದ್ದರು. ಅವರಿಂದ ಕಠಿಣೋಕ್ತಿಗಳು ಎಂದೂ ಹೊರಡುತ್ತಿದ್ದಿಲ್ಲ. "ಲೋಕದೊಳಗವರವರ ತೆರದೆ ನಡೆವವಜಾಣ" ಎಂಬ ನಿಜಲಿಂಗ ಕವಿಗಳ ಉಕ್ತಿಯಂತೆ, ಲೌಕಿಕದಲ್ಲಿ ಅವರ ನಡತೆ ಇರುತ್ತಿತ್ತು; ಭೂತದಯದ ಸತ್ಯಸ್ವರೂಪವು ಅವರಲ್ಲಿಯೇ ವ್ಯಕ್ತವಾಗುತ್ತಿತ್ತು; ಅವರು ಗರ್ವರಹಿತರು; ಸದಾ ಶಾಂತರು; ಲೋಭ–ಕ್ಷೋಭಗಳಿಗೆ ನಿಲುಕದಂಥವರು. ಇಂಥ ಗುರುಗಳ ಬಳಿಯಲ್ಲಿ ಎಂಟು ವರ್ಷದಿಂದಿದ್ದು, ಸೇವೆಮಾಡಿ, ಗುರುಕೃಪೆಯನ್ನು ಪಡೆದ ಸುಮತಿಯ ಮಹಿಮೆಯನ್ನೇನು ವರ್ಣಿಸಬೇಕು? ಆತನಿಗೆ ಈಗ ೧೯ ನೆಯ ವರ್ಷವು ನಡೆಯುತ್ತಿತ್ತು. ಪದ್ಮನಯನೆಯು ಕಪಿಂಜಲ ಋಷಿಗಳ ಬಳಿಯಲ್ಲಿ ವಿದ್ಯಾಭ್ಯಾಸಕ್ಕೆ ಬಂದಾಗ, ಸುಮತಿಯೂ ಅಕಸ್ಮಾತ್ತಾಗಿ ಬಂದನು. ಆ ಪುಣ್ಯಶಾಲಿಯನ್ನು ನೋಡಿದ ಕೂಡಲೆ, ಋಷಿಗಳು ಸಮಾಧಾನಪಟ್ಟು ಆತನನ್ನು ತಮ್ಮ ಬಳಿಯಲ್ಲಿ ಇಟ್ಟುಕೊಂಡರು. ಉಪನಯನವನ್ನು ತಾವೇ ಮಾಡಿದರು. ಅಂದ ಬಳಿಕ ಕೇಳುವದೇನು? ಪಟ್ಟಗಟ್ಟಲೆಯಾಗಿ ಗುರುಕುಲವಾಸಮಾಡಿ, ಕೇವಲ ಗುರುಗಳ ನೆರಳಾಗಿ ನಡೆದ, ಆ ಪುಣ್ಯವಂತನ ಬ್ರಹ್ಮತೇಜಸ್ಸು ಬಾಲಸೂರ್ಯನ ತೇಜಸ್ಸಿನಂತೆ ಹೆಚ್ಚುತ್ತಹೋಯಿತು. ಆತನು ಪದ್ಮನಯನೆಯ ಸಹಾಧ್ಯಾಯಿಯಾಗಿದ್ದನು. ಆ ಮೋಹಕಮೂರ್ತಿಯ ದರ್ಶನಮಾತ್ರದಿಂದ ಪ್ರಾಣಿಮಾತ್ರಗಳ

ಮನಸ್ಸು ಪ್ರಸನ್ನವಾಗುತ್ತಿತ್ತು. ಆತನು ಬ್ರಹ್ಮಚರ್ಯವ್ರತಸ್ಥನು. ಆತನ ಮೈಬಣ್ಣವು ಕಾದಬಂಗಾರದಂತೆ ಇತ್ತು. ಆತನ ನಿಲುವಿಕೆ ಗಿಡ್ಡ, ಆತನಿಗೆ ಬಿಳೇ ಮೀಸೆಗಳು ಬರುತ್ತಿದ್ದವು. ಆತನು ಕೌಪೀನವನ್ನು ಹಾಕಿಕೊಂಡಿದ್ದನು. ಕಪನಿಯಿಂದ ಆತನ ಸರ್ವಾಂಗವು ಮುಚ್ಚಿಹೋಗಿತ್ತು. ಕೊರಳೊಳಗಿನ ರುದ್ರಾಕ್ಷಮಾಲೆ, ತಲೆಯಮೇಲಿನ ಕೆಂಪು ಸಕಲಾತಿಯ ಕಿವಿಟೊಪ್ಪಿಗೆ, ಬಗಲೊಳಗಿನ ಕೃಷ್ಣಾಜಿನದ ಸುರುಳಿ, ಕೈಯೊಳಗಿನ ಜಪಮಾಲೆ, ಕಾಲೊಳಗಿನ ಹಾವುಗೆ ಇವುಗಳಿಂದ ಬ್ರಹ್ಮತೇಜಸ್ಸಿಗೆ ಮತ್ತಿಷ್ಟು ಕಳೆಯೇರಿತ್ತು. ಆತನು ಸರ್ವಾಂಗಕ್ಕೆಲ್ಲ ಭಸ್ಮವನ್ನು ಹಚ್ಚಿಕೊಂಡು, ಹಣೆಗೆ ಅರ್ಧಚಂದ್ರಾಕೃತಿಯ ಮೂರುಗೆರೆಯ ಗಂಧವನ್ನು ಹಚ್ಚಿಕೊಂಡಿದ್ದನು. ಆ ಮಹಾತ್ಮನ ನಗೆಮೊಗದ ಸೊಬಗನ್ನು ವರ್ಣಿಸಲಸಾಧ್ಯವು! ಹೆಚ್ಚಿಗೆ ಹೇಳುವದೇನು? ಕಪಿಂಜಲಋಷಿಗಳು ತಮ್ಮ ಮುಪ್ಪಾದ ದೇಹವನ್ನು ಬಿಟ್ಟು, ತಮ್ಮ ತಪಃಪ್ರಭಾವದಿಂದ ಲೋಕಾನುಗ್ರಹಾರ್ಥವಾಗಿ. ತಾರುಣ್ಯದ ದೇಹವನ್ನು ಧರಿಸಿದಂತೆ ಸುಮತಿಯು ಒಪ್ಪುತ್ತಿದ್ದನು!!

ಇಂಥ ತೇಜೋರಾಶಿಯು ಪಕ್ಕನೆ ಬಂದು ನಿಂತಿದ್ದರಿಂದ, ವೀರವರ್ಮನು ಎದ್ದು ನಿಂತು ಸಾಷ್ಟಾಂಗವಾಗಿ ವಂದಿಸಿ, ಆತನಿಗೆ ಕುಳಿತುಕೊಳ್ಳಲಿಕ್ಕೆ ಆಸನವಿತ್ತನು. ಸುಮತಿಯು ಆಸನದಲ್ಲಿ ಕುಳಿತುಕೊಳ್ಳುತ್ತ ಅರಸನನ್ನು ಕುರಿತು—ನೃಪೋತ್ತಮನೇ, ನೋಡಿದೆಯೇನು ವಿಚಿತ್ರಯೋಗವನ್ನು? ಸದ್ಗುರುನಾಥನು ದೇಹಬಿಟ್ಟ ದಿವಸವೇ, ಪದ್ಮನಯನಾದೇವಿಯೂ ನಮ್ಮೆಲ್ಲರ ಕಣ್ಣುಮರೆಯಾಗಬೇಕೆ? ಪದ್ಮನಯನೆಯು ನನ್ನ ಒಡಹುಟ್ಟಿದ ತಂಗಿಯಂತೆ ನಡಕೊಳ್ಳುತ್ತಿದ್ದಳು. ಇಬ್ಬರೂ ಒಬ್ಬ ಗುರುವಿನ ಬಳಿಯಲ್ಲಿ ಕೂಡಿಕಲಿತೆವು. ಕೂಡಿ ಆಡಿದೆವು. ಇಷ್ಟೇ ಸಂಬಂಧದಿಂದ ನನ್ನ ಮನಸ್ಸು ಆ ರಾಜಪುತ್ರಿಯ ವಿಯೋಗಕ್ಕಾಗಿ ತಲ್ಲಣಿಸಿರಲು, ರಕ್ತಸಂಬಂಧವುಳ್ಳ ನೀನೂ, ಮನಮೋಹಿನೀದೇವಿಯವರೂ ಶೋಕಸಾಗರದಲ್ಲಿ ಮುಳುಗಿರುವದು ಏನು ಆಶ್ಚರ್ಯವು! ದೊರೆಯೇ, ಇಂಥ ಕರುಣಾಸ್ಪದವಾದ ಪ್ರಸಂಗದಲ್ಲಿ, ಯಾರ ಅಂತಃಕರಣವು ಕರಗಿ ನೀರಾಗಿ ಅದು ಕಣ್ಣೀರುಗಳ ದ್ವಾರದಿಂದ ಹೊರಬೀಳಲಿಕ್ಕಿಲ್ಲ! ಸರ್ವಸಂಗಪರಿತ್ಯಾಗಮಾಡಿದ ಮಹಾತ್ಮರು, ಆ ಕರಗಿದ ಅಂತಃಕರಣಕ್ಕೆ ತಮ್ಮ ಆತ್ಮಸಂಯಮನದ ಒಡ್ಡುಹಾಕುವದರಿಂದ, ಆ ಕರುಣಾಜಲವು ಸಂಚಯಹೊಂದಿ ಹೊಂದಿ ವಿಚಿತ್ರಶಕ್ತಿಯನ್ನು ತಾಳಿ, ಅದು ಪರೋಪಕಾರದ ಕೃತಿಗಳನ್ನು

ಮಾಡುವದು! ಇನ್ನು ನೀನು ಸಾಮಾನ್ಯಜನರಂತೆ ಕಣ್ಣೀರು ಸುರಿಸುವದನ್ನು ಬಿಟ್ಟು, ಕಪಿಂಜಲಋಷಿಯ ಶಿಷ್ಯನೆಂಬದನ್ನು ನೆನಪಿಗೆ ತಂದು, ಪದ್ಮನಯನೆಯ ಹಿತದ ಕೆಲಸಗಳನ್ನು ಮಾಡು. ಆಕೆಯ ಕಲ್ಯಾಣಕ್ಕಾಗಿ ಈಶ್ವರಾರಾಧನೆ, ಅತಿಥಿಸೇವೆ, ಸತ್ಪಾತ್ರದಾನ ಮೊದಲಾದವುಗಳು ದೊಡ್ಡ ಪ್ರಮಾಣದಿಂದ ನಡೆಯುಲಿ. ಇಂಥ ಸತ್ಕ್ರಿಯೆಗಳ ಪುಣ್ಯವೇ ರಾಜಪುತ್ರಿಯ ಕಷ್ಟನಿವಾರಣ ಮಾಡುವದು. ಆಕೆಯ ಶೋಧಾರ್ಥವಾಗಿ ನಾಲ್ಕೂ ಕಡೆಗೆ ಸೇವಕರನ್ನು ಕಳಿಸು. ಅರಸೇ, ರಾಜಪುತ್ರಿಯ ವಿಷಯವಾಗಿ ಅನ್ಯಥಾ ಕಲ್ಪನೆಯನ್ನು ಮಾತ್ರ ಸರ್ವಥಾ ಮಾಡಬೇಡ. ಕಂಡೆಯಾ? ಶ್ರೀಸದ್ಗುರುವು ಕೈಹಿಡಿದು ಆಕೆಯ ಸಂರಕ್ಷಣ ಮಾಡುವವಕ್ಕಾಗಿಯೇ, ನಮ್ಮೆಲ್ಲರನ್ನು ಅಗಲಿ ಮೊದಲೇ ಹೋಗಿರುವನೆಂದು ನಿಶ್ಚಯವಾಗಿ ತಿಳಿದಿಕೋ. ಹಾಗಲ್ಲದಿದ್ದರೆ ನಮಗೆ ಇಬ್ಬರ ವಿಯೋಗದುಃಖವು ಒಂದೇ ದಿವಸ ಒದಗುತ್ತಿದ್ದಿಲ್ಲ. ನಾನು ನಿನಗೆ ಆಗ್ರಹದಿಂದ ಹೇಳುತ್ತೇನೆ, ಇನ್ನು ನಿನ್ನ ದುಃಖವನ್ನು ನಿಲ್ಲಿಸು.

ತೇಜೋರಾಶಿಯ ಈ ಮಾತುಗಳನ್ನು ಕೇಳಿ ವೀರವರ್ಮನು—ಸದ್ಗುರುಕೃಪೆಯಿಂದ ಧನ್ಯನಾದ ಸುಮತಿಯೆ, ನೀನು ವಯಸ್ಸಿನಿಂದ ಚಿಕ್ಕವನಾದರೂ ಸದ್ವೃತ್ತಿಯ ಬಲದಿಂದ ಹಿರಿಯನಾಗಿರುತ್ತೀ. ಗುರುವಿನ ತೇಜಸ್ಸು ನಿನ್ನ ಪವಿತ್ರದೇಹವನ್ನು ವ್ಯಾಪಿಸಿರುವವರಿಂದ ನೀನು ನನಗೆ ಗುರುಸ್ವರೂಪನು. ನಿನಗೆ ಅನಂತ ಪ್ರಣಾಮಗಳಿರಲಿ. ನಿನ್ನ ಅಪ್ಪಣೆಯು ನನಗೆ ಮಾನ್ಯವದೆ; ನನ್ನ ದುಃಖವನ್ನು ನಿಲ್ಲಿಸುವೆನು; ಆದರೆ, ನಾನು ಸಾಂಸಾರಿಕನಿದ್ದು ವಿರಕ್ತನಹಾಗೆ ನಟಿಸಲಾರೆನು. ನನ್ನ ಮೋಹವು ಅಳಿದುಹೋಗಿಲ್ಲ. ನನ್ನ ದುಃಖವನ್ನು ನಿನ್ನ ಮುಂದೆ ತೋಡಿಕೊಳ್ಳದೆ ಬಿಡುವದಿಲ್ಲ. ಕೃಪಾಘನಾ, ಗುರುಕೃಪೆಯಿಂದ ಹುಟ್ಟಿದ ಕೂಸು ನನ್ನನ್ನಗಲಿ ಕಷ್ಟ ಪಡುತ್ತಿರಲು, ನಾನು ಸಮಾಧಾನಪಡುವ ಬಗೆಹೇಗೆ? ನನ್ನ ಪ್ರಾಣವಾದ ಪದ್ಮನಯನೆಯ ದುಃಖದ ಬಗೆಬಗೆಯ ಕಲ್ಪನೆಗಳು, ನನ್ನ ಮನಸ್ಸಿನಲ್ಲಿ ಉತ್ಪನ್ನವಾಗಿ ಹೃದಯವು ತಲ್ಲಣಿಸುತ್ತದೆ. ಸದ್ಗುರುವು ನನ್ನ ಕೂಸಿನ ಅಪರಾಧಕ್ಕಾಗಿ ಬೇಕಾದರೆ ನನ್ನನ್ನು ದಂಡಿಸಲಿ, ನನ್ನ ಪುಣ್ಯವಿದ್ದರೆ ಅದನ್ನು ನನ್ನ ಕೂಸಿಗೆ ಕೊಟ್ಟು ಕಾಪಾಡಲಿ. ಗುರುಪುತ್ರಾ, ಸಮರ್ಥನಸೇವಕರಿಗೂ ಇಂಥ ಕಷ್ಟವೆ? ಹರಮುನಿದರೆ ಗುರುಕಾಯ್ವನೆಂದು ದೊಡ್ಡವರು ಹೇಳುವರಲ್ಲ! ಮಾರ್ಕಂಡೆಯಋಷಿಗೆ ಪ್ರಾರಬ್ಧವಶದಿಂದ ಹದಿ

ನಾಲ್ಕನೆಯ ವರುಷ ಮೃತ್ಯುವು ಒದಗಿರಲು, ಹರನು ಯಮನನ್ನು ದಂಡಿಸಿ, ಮಾರ್ಕಂಡೇಯನಿಗೆ ಉದ್ದಂಡವಾದ ಆಯುಷ್ಯವನ್ನು ಕೊಟ್ಟನು. ಈಗ ನಮ್ಮ ಸದ್ಗುರುವಿನಿಂದ ಮಾತ್ರ ನನ್ನ ಕೂಸಿನ ಪ್ರಾರಬ್ಧವು ನಾಶವಾಗಬಾರದೇ? ಸದ್ಗುರುವು ತನ್ನನ್ನು ಅನನ್ಯಭಾವದಿಂದ ಶರಣುಹೋದಧನ್ಯರನ್ನು ಉದ್ಧರಿಸುವ ದರಿಂದ, ಆತನ ಪತಿತಪಾವನತೆಯು ವ್ಯಕ್ತವಾಗುವದು; ಅದಕ್ಕಾಗಿ ಆತನು ನಮ್ಮಂಥ ಮೋಹವಶಪತಿತರನ್ನು ಉದ್ಧರಿಸಬೇಕಾಗುವದು. ದುಷ್ಟಶಾಸನ-ಶಿಷ್ಟಪರಿಪಾಲನಗನಳ ಯೋಗದಿಂದ ದೇವರಲ್ಲಿ ವೈಷಮ್ಯಭಾವವಿರುತ್ತದೆಂದು ತೋರುವದು; ಆತನು ಭಕ್ತಾಭಿಮಾನಿಯಂತೆ; ಸ್ತೋತ್ರಪ್ರಿಯನಂತೆ; ಆದರೆ ಸದ್ಗುರುವಿನಲ್ಲಿ ಈ ಯಾವ ಗೊಂದಲಗಳೂ ಇರುವದಿಲ್ಲ. ಆತನ ಕೃಪಾದೃಷ್ಟಿಗೆ ಒಳಗಾದವರೆಲ್ಲ ಧನ್ಯರಾಗುವರು! ಇದಕ್ಕೆ ಹಲವು ಪ್ರಮಾಣಗಳುಂಟು. ಯಾವಾಗಲೂ ಹಾದಿಯನ್ನು ಬಡಿಯುತ್ತಿದ್ದ ವಾಲ್ಮೀಕಿಯು ಯಾವ ಪುಣ್ಯ ಮಾಡಿದ್ದನು? ಐದುವರ್ಷದ ಕೂಸಾದ ಧ್ರುವನು ಗುರುಸ್ತವನವನ್ನು ಎಷ್ಟರ ಮಟ್ಟಿಗೆ ಮಾಡಿದ್ದನು? ಶಬರಿಯು ಜಾತಿಯಿಂದ ಅನುಗ್ರಹಕ್ಕೆ ಎಷ್ಟರಮಟ್ಟಿಗೆ ಪಾತ್ರಳಿದ್ದಳು? ಇವರೆಲ್ಲರಿಗೆ ಗುರುಕೃಪೆಯಿಂದ ಈಶ್ವರ ದರ್ಶನವಾಗಲಿಲ್ಲವೇ? ಸೂರ್ಯಪ್ರಕಾಶದಂತೆ, ಶಿಷ್ಟರಮೇಲೆ-ದುಷ್ಟರಮೇಲೆ, ಜ್ಞಾನಿಗಳಮೇಲೆ-ಅಜ್ಞಾನಿಗಳಮೇಲೆ ಸರಿಯಾಗಿ ಕೃಪೆಮಾಡಲು ಸದ್ಗುರುವೇ ಮುಂದಾದವನು. ಅಂತೇ ಸದ್ಗುರುವಿಗೆ ಶರಣುಹೋದಸದಾಚಾರಿಯೂ-ದುರಾಚಾರಿಯೂ ಸಮಾನಸ್ಕಂದರಾಗುವರೆಂದು ಜ್ಞಾನಿಗಳು ಹೇಳುತ್ತಾರೆ. ಇನ್ನುಸಾಕು. ಗುರುಪುತ್ರಾ, ನಾನು ಇನ್ನು ಸುಮ್ಮನಾಗುತ್ತೇನೆ. ಶೋಕಾಗ್ನಿಯು ನನ್ನನ್ನು ದಹಿಸಲೊಲ್ಲದೇಕೆ? ಅಥವಾ ಸದ್ಗುರು ಕೃಪಾಜಲಧಿಯು ಪದ್ಮನಯನೆಯನ್ನು ನನ್ನೆದುರಿಗೆತಂದು ನಿಲ್ಲಿಸಿ, ಆ ಶೋಕಾಗ್ನಿಯನ್ನು ಶಾಂತಗೊಳಿಸಲೊಲ್ಲದೇಕೆ!

ಇದಕ್ಕೆ ಸುಮತಿಯು-ಸಾರ್ವಭೌಮನೇ, ನಿನ್ನಂಥ ಪ್ರಾಜ್ಞನ ಶೋಕವು, ಲೋಕೋದ್ಧಾರಕ್ಕೆ ಕಾರಣವಾಗುವದರಲ್ಲಿಸಂಶಯವಿಲ್ಲ. ಪದ್ಮನಯನೆಯಲ್ಲಿಯ ಅನಿರ್ವಾಚ್ಯವಾದ ನಿನ್ನ ಮೋಹ, ಸದ್ಗುರುವಿನ ಸಾಮರ್ಥ್ಯದಲ್ಲಿರುವ ನಿನ್ನ ನಂಬಿಗೆ, ಈಶ್ವರನ ಯಥಾರ್ಥವಾದ ನಿನ್ನ ಗುಣಾನುವಾದ ಇವುಗಳನ್ನು ಕೇಳಿ, ನನಗೆ ಬಹಳಸಮಾಧಾನವಾಯಿತು. ನಿನ್ನಂಥ ನಿರ್ಮಲಾಂತಃಕರಣದ ಶಿಷ್ಯನ ಮೊರೆಯನ್ನು ಸದ್ಗುರುನಾಥನು ಹೆಗೆ ಕೇಳದೆ ಇದ್ದಾನು! ಬಾಹ್ಯಾಡಂಬ

ರಕ್ಕೆ ಮೆಚ್ಚದೆಇದ್ದ ಕಪಿಂಜಲಋಷಿವರ್ಯನು, ನಿನ್ನಲ್ಲಿ ತುಂಬಾ ವಾತ್ಸಲ್ಯವುಳ್ಳವನಾಗಿ, ನಿನ್ನನ್ನು ಸಮಾಧಾನಗೊಳಿಸುವದಕ್ಕಾಗಿ ನಿನ್ನೆ ಸ್ವಪ್ನದಲ್ಲಿ ನನ್ನನ್ನು ಆಜ್ಞಾಪಿಸಿರುವನು. ಆತನ ಆಜ್ಞೆಯಂತೆ ನಾನು ನಾಲ್ಕು ಮಾತುಗಳನ್ನು ನಿನಗೆ ಹೇಳುವೆನು. ಅವು ಸದ್ಗುರುವಚನಗಳೆಂತಲೇ ಭಾವಿಸು. ಆತನೇ ನನ್ನಲ್ಲಿ ನೆಲಿಸಿ ಮಾತಾಡಿಸುವನೆಂದು ತಿಳಿ. ರಾಜಾ, ಮೋಹವನ್ನು ಬಿಡುವದು ಸುಲಭವಲ್ಲ. ನಿಜವಾದ ಮೋಹವುಳ್ಳವರೇ ವಿರಳವೆಂದುತಿಳಿ. ಮೋಹ ಬಿಡಬೇಕೆನ್ನುವವರು ಮೊದಲು ನಿಜವಾದ ಮೋಹವನ್ನು ಸಂಪಾದಿಸಿಕೊಳ್ಳಬೇಕು. ಧನವಿಲ್ಲದವನಿಗೆ ಧನದಾಶೆಯನ್ನು ಬಿಡೆಂದು ಬೋಧಿಸುವದೂ, ಪುರುಷತ್ವವಿಲ್ಲದವನಿಗೆ ಸ್ತ್ರೀಯಅಭಿಲಾಷೆಯನ್ನು ಬಿಡೆಂದು ಬೋಧಿಸುವದೂ ವ್ಯರ್ಥವೇ ಸರಿ, ಯಾಕಂದರೆ, ಅವರಲ್ಲಿ ಅವುಗಳ ಮೋಹವಿದ್ದರೆ ಬಿಡಬೇಕಷ್ಟೇ? ಸ್ವಾರ್ಥತ್ಯಾಗಿಯಲ್ಲಲ್ಲದೆ ಅನ್ಯರಲ್ಲಿ ನಿಜವಾದ ಮೋಹವು ಇರಲಾರದು, ಜಗತ್ತಿನ ಜನರು ಹೆಂಡಿರು—ಮಕ್ಕಳಮೇಲೆ ಮಾಡುವ ಮೋಹವು ನಿಜವಾದ ಮೋಹವಲ್ಲ. ಅದು ಸ್ವಾರ್ಥಮೂಲವಾದ ಮೋಸಗಾರಿಕೆಯು, ತಮಗೆ ಅನುಕೂಲವಾಗಿರುವವರೆಗೆ, ಅಥವಾ ತಮಗೆ ಗರಜು ಇರುವವರೆಗೆ ಅವರು ಹೆಂಡಿರು –ಮಕ್ಕಳ ಮೇಲೆ ಮೋಹತೋರಿಸುತ್ತಾರೆ; ತಮಗೆ ವಿರುದ್ಧವಾಗಿ ನಡೆದಾಗ, ಇಲ್ಲವೆ ತಮಗೆ ಬೇಡಾದಾಗ ಹೆಂಡಿರು—ಮಕ್ಕಳನ್ನು ಅವರು ದ್ವೇಷಿಸುತ್ತಾರೆ. ಹೆಂಡತಿಯಮೇಲಿನ ನಿಜವಾದ ಮೋಹವುಳ್ಳ ತುಳಸೀದಾಸರು, ಹೆಂಡತಿಯ ಯೋಗದಿಂದಲೇ ಮೋಹವನ್ನು ಬಿಟ್ಟರು. ದುಡ್ಡಿನ ಮೇಲೆ ನಿಜವಾದ ಮೋಹವುಳ್ಳ ಪುರಂದರದಾಸರು, ದುಡ್ಡಿನ ಯೋಗದಿಂದಲೇ ಮೋಹವನ್ನು ಬಿಟ್ಟರು; ಅಂದರೆ ಆ ದಾಸರಿಬ್ಬರು, ಕ್ರಮವಾಗಿ ಹೆಂಡತಿಯ ಹಾಗು ದುಡ್ಡಿನ ಮೇಲೆ ಇದ್ದ ತಮ್ಮ ಅಕೃತ್ರಿಮ ಮೋಹವನ್ನು, ಈಶ್ವರನಲ್ಲಿಟ್ಟು ಕೃತಾರ್ಥರಾದರು. ಪದ್ಮನಯನೆಯ ಹಿತಕ್ಕಾಗಿ ಈಗ ನೀನು ನಿನ್ನ ಪುಣ್ಯವನ್ನು ಅರ್ಪಿಸಿದ್ದಲ್ಲದೆ, ನರಕದಲ್ಲೂಬೀಳುವದಕ್ಕೆ ಒಪ್ಪಿಕೊಳ್ಳುವದರಿಂದ, ನೀನು ಮಗಳಲ್ಲಿ ನಿಜವಾದ ಮೋಹವುಳ್ಳವನಿರುವೆಂಬೆಂದು ತಿಳಿಯುವೆನು; ನೀನು ಮೋಹಬಿಡಲಿಕ್ಕೆ ತಕ್ಕವನಾಗಿರುತ್ತೀ. ಆದ್ದರಿಂದ ವಿಚಾರದಿಂದ ಮೋಹವನ್ನು ಬಿಡು. ಕಪಿಂಜಲಸದ್ಗುರುವು ಮೋಹವನ್ನು ಬಿಟ್ಟಾತನು, ನೀನು ಮೋಹವನ್ನು ಬಿಡದವನು; ಅಂದಬಳಿಕ ನಿಮ್ಮಿಬ್ಬರ ಗತ್ತು ಹೇಗೆ ಒಂದಾಗ

ಬೇಕು? ಅದೇ, ತಂದೆಮಕ್ಕಳಿಬ್ಬರೂ ನೀವು ಮೋಹಬಿಡದವರಾದ್ದರಿಂದ ನೀವು ಸಮಾನಧರ್ಮಿಗಳು. ಕಳ್ಳನ ಕಡೆಗೆ ಕಳ್ಳನಮನಸ್ಸು ಹರಿಯುವಂತೆ, ನಿನ್ನ ಮನಸ್ಸು ಮಗಳ ಕಡೆಗೆ ಹರಿಯುವದು ಆಶ್ಚರ್ಯವಲ್ಲ. ಅರಸಾ, ತಿಳಿದು ನೋಡು. ಪದ್ಮನಯನೆಗಿಂತ ಕಪಿಂಜಲಗುರುಗಳ ಯೋಗ್ಯತೆಯು ಹೆಚ್ಚೆಂದು ನೀನು ತಿಳಿದಿದ್ದರೂ, ಅವರಿಬ್ಬರ ವಿಯೋಗವು ಒದಗಿರುವಾಗ ನೀನು, ಗುರುವಿನ ಉಪದೇಶದಂತೆ ಸಮಾಧಾನಪಡದೆ, ಮಗಳವಿಯೋಗಕ್ಕಾಗಿ ದುಃಖಪಡುತ್ತೀ. ಈಗ ಸದ್ಗುರುವಿನ ವಿಯೋಗಕ್ಕಿಂತ ಮಗಳ ವಿಯೋಗವು ನಿನಗೆ ಹೆಚ್ಚು ತಾಪದಾಯಕವಾಗಿರುತ್ತದೆ. ಅಂದಬಳಿಕ ನಿನ್ನ ಮೋಹವು ಮಗಳಲ್ಲಿರುವದೋ ಗುರುವಿನಲ್ಲಿರುವದೋ ವಿಚಾರಮಾಡು. ಆತ್ಯಂತಿಕ ಮೋಹವು ಒಂದೇ ವಸ್ತುವಿನಲ್ಲಿರುತ್ತದೆ, ಅನೇಕ ವಸ್ತುಗಳಲ್ಲಿರುವದಿಲ್ಲ. ಮಗಳ ಮೇಲಿನ ನಿನ್ನ ಆತ್ಯಂತಿಕಮೋಹವು ಗುರುವಿನಲ್ಲಿ ಕೂತರೆ, ನಿನ್ನ ವ್ಯರ್ಥವಾದ ಮಗಳ ವಿಯೋಗದುಃಖವು ತಾನೇ ಹೋಗುವದು. ರಾಜಾ, ವಿಚಾರಮಾಡು. ಮಗಳ ಮೇಲಿನ ಮೋಹಕ್ಕಾಗಿ ನಿನ್ನನ್ನು ನಾನು ನಿರಾಕರಿಸುತ್ತೇನೆಂದು ತಿಳಿಯಬೇಡ. ಇರುವವರೆಗೆ ತನ್ನ ಸುಖಕ್ಕೆ ಲಕ್ಷ್ಯಗೊಡದೆ ಮಕ್ಕಳಸಂರಕ್ಷಣವನ್ನು ಮಾಡಬೇಕು. ಮಕ್ಕಳು ತನ್ನನ್ನಗಲಿ ಹೋದಬಳಿಕ, ಏನುಮಾಡಿದರೆ ಅವರಿಗೆ ಸುಖವಾದೀತೆಂಬದನ್ನು ವಿಚಾರದಿಂದ ಗೊತ್ತುಮಾಡಿಕೊಂಡು ನಡೆಯಬೇಕು. ಹಾಗೆ ಮಾಡದೆ ತಿಳಗೇಡಿತನದಿಂದ ದುಃಖಿಸಿದರೆ, ಸ್ವಾರ್ಥಪರಾಯಣತೆಯ ದೋಷವು ಬರುವದಿಲ್ಲವೆ? "ಸಮರ್ಥನ ಸೇವಕರಿಗೂ ಕಷ್ಟವೇ" ಎಂದು ನೀನು ಕೇಳುತ್ತೀಯಲ್ಲ? ಸಮರ್ಥನ ಸೇವಕರು ಕ್ಷುದ್ರವಾದ ಪ್ರಾರಬ್ಧಭೋಗಕ್ಕೆ ಹೆದರಬೇಕೇ, ನೀನೇ ಹೇಳು? ಪ್ರಾರಬ್ಧದಹಂಗೇನು? ಸಮರ್ಥರ ಶಿಷ್ಯರು ಅದನ್ನು ಸಹಜವಾಗಿ ಉಂಡು ತೀರಿಸತಕ್ಕದ್ದು. ಮೇಲಾಗಿ ಸಮರ್ಥರ ಕೃಪೆಯಿಂದ ಕೊನೆಗೆ ಸುಖಸಾಮ್ರಾಜ್ಯವೇ ಒದಗುವದೆಂಬದು ನಿನಗೆ ಗೊತ್ತಿದೆ. ರಾಜಾ, ಇಷ್ಟಿದ್ದು ನೀನು ದುಃಖಿಸುವೆಯಲ್ಲ! ಗುರುಕೃಪೆಗೆ ನೀನು ಒಳಗಾಗಿರುವದರಿಂದ ನೀನು ಮುಕ್ತನೇ ಆಗಿರುತ್ತೀ, ಇದರಲ್ಲಿ ಸಂಶಯವಿಲ್ಲ; ಆದರೆ ಅಳುಬುರುಕರು ಯಾವಾಗಲೂ ಅಳುತ್ತಲೇ ಇರಬೇಕೆನ್ನುವಂತೆ ನಿನ್ನ ಗತಿಯಾಗಿದೆ. ತಮ್ಮ ಮನಸ್ಸಿನಂತೆ ಆಗದೆಇದ್ದಾಗ ಅಳುತ್ತಕೂಡ್ರುವದು ಸಾಂಸಾರಿಕ ಹುಟ್ಟಗುಣವಾಗಿರುವದು. ಹುಟ್ಟುಗುಣವು ಹುಗಿದರೂ ಹೋಗು

ವದಿಲ್ಲವಂತೆ! ಹನುಮಂತನು ಎಷ್ಟು ದೊಡ್ಡ ದೇವರಾದರೂ ಮರ ಮರ ಹಾರುವದನ್ನು ಬಿಡಲಿಲ್ಲ; ನಾರದರು ಎಷ್ಟು ದೊಡ್ಡ ಋಷಿಗಳಾದರೂ ಚಾಡೀ ಹೇಳುವದನ್ನು ಬಿಡಲಿಲ್ಲ. ಸದ್ಗುರುವನ್ನು ಶರಣುಹೋದ ಬಳಿಕ ಮೋಕ್ಷಕ್ಕಾಗಿ ಚಿಂತೆಯೇ? ಇಂದಿಲ್ಲನಾಳೆ, ಈ ಜನ್ಮದಲ್ಲಿಲ್ಲ ಮುಂದಿನ ಜನ್ಮದಲ್ಲಿ ಮೋಕ್ಷವು ಆಗೇಆಗುವದು! ವಿಚಾರಮಾಡು, ಧೈರ್ಯತಾಳು, ಸದ್ಗುರುವಿನಲ್ಲಿ ನಂಬಿಗೆಯನ್ನಿಡು. ಇದಗಮೇಲಿಯೂ ಮಗಳ ವಿಯೋಗದುಃಖವು ಪೀಡಿಸಿದರೆ ಪೀಡಿಸಲಿ, ಅದಕ್ಕೆ ನೀನೇನುಮಾಡುವೆ—ನಾನೇನು ಮಾಡುವೆನು? ಮಾಡಿದರೆ ಸದ್ಗುರುವಿನ ಈ ಸದ್ಬೋಧವೇ ನಿನ್ನ ಸ್ಥಿತ್ಯಂತರವನ್ನುಮಾಡೀತು?



## ೫ ನೆಯ ಪ್ರಕರಣ.

# ಉತ್ಕಟಪುಣ್ಯ.

ಈ ಮೇರೆಗೆ ಉಪದೇಶಿಸಿ ಸುಮತಿಯು ತನ್ನ ಮಠಕ್ಕೆ ಬಂದನು. ವೀರವರ್ಮನೂ ಆತನ ಸದುಪದೇಶದಿಂದ ಬಹುಮಟ್ಟಿಗೆ ಸಮಾಧಾನಹೊಂದಿದನು. ಆಗಾಗ್ಗೆ ಸುಮತಿಯು ಸದ್ಬೋಧಗಳಿಂದ ಅರಸನ ಮನಸ್ಸನ್ನು ಸಮಾಧಾನಪಡಿಸುತ್ತಲೇ ಇದ್ದನು. ಹೀಗೆ ಕೆಲದಿನಗಳು ಕಳೆಯಲು, ಕಪಿಂಜಲನು ಸುಮತಿಯ ಕನಸಿನಲ್ಲಿ ಬಂದು, ಪದ್ಮನಯನೆಯ ಶೋಧಕ್ಕಾಗಿ ಹೊರಡಬೇಕೆಂದು ಆತನನ್ನು ಆಜ್ಞಾಪಿಸಿದನು. ಆಗ ಸುಮತಿಯು ವೀರವರ್ಮನ ಬಳಿಗೆ ಹೋಗಿ— ನೃಪೋತ್ತಮನೇ, ಸದ್ಗುರುವು ನಿನ್ನೆ ರಾತ್ರಿ ನನ್ನ ಸ್ವಪ್ನದಲ್ಲಿ ನುಡಿದದ್ದನ್ನು ಹೇಳುತ್ತೇನೆ ಕೇಳು. ನಾನು ಪದ್ಮನಯನೆಯ ವಿಯೋಗದಿಂದ ಅಸಮಾಧಾನಪಟ್ಟು, ಆಕೆಯ ಶೋಧವು ಹ್ಯಾಗಾದೀತೆಂದು ಚಿಂತಿಸುತ್ತ ಮಲಗಿರಲು, ಉತ್ತರ ರಾತ್ರಿಯಲ್ಲಿ ಸ್ವಲ್ಪ ನಿದ್ದೆಬಂದಂತಾಯಿತು. ಆಗ ಕಪಿಂಜಲ ಗುರುವರ್ಯರು ಸ್ವಪ್ನದಲ್ಲಿ ಬಂದು—ಸುಮತೀ, ನೀನು ವೀರವರ್ಮನ ಆಶ್ರಯದಲ್ಲಿದ್ದು, ಅವನಿಗೊದಗಿದ ದುಃಖವನ್ನು ಕಣ್ಣಿನಿಂದ ನೋಡುತ್ತ ಕುಳಿತುಕೊಳ್ಳುವದು ಯೋಗ್ಯವೇ? ಏಳು, ಪದ್ಮನಯನೆಯ ಶೋಧಕ್ಕಾಗಿ ಉದ್ಯೋಗಿಸು, ಎಂದು ಹೇಳಿದರು. ಆಗ ನಾನು ಸ್ವಪ್ನದಲ್ಲಿಯೇ

ಗುರುವಿಗೆ ಸಾಷ್ಟಾಂಗವಾಗಿ ವಂದಿಸಿ—ಮಹಾತ್ಮನೇ, ನನ್ನಂಥ ಕ್ಷುದ್ರನ ಉದ್ಯೋಗದಿಂದ ಆಗುವದೇನು? ನೀನು ಮಾರ್ಗದರ್ಶಕನಾದರೆ, ನಾನು ರಾಜಪುತ್ರಿಯ ಶೋಧಕ್ಕಾಗಿ ಹೊರಡುವೆನು, ಎಂದು ಹೇಳಲು, ಋಷಿವರ್ಯನು—ಬಾಲಕಾ, ಈಸ್ತ್ರೀಯ ಮಾತಿನ ಸಲುವಾಗಿ ಸುಮ್ಮನೆ ವಿಚಾರಮಾಡುತ್ತ ಕುಳಿತುಕೊಳ್ಳಬೇಡ. ನೀನು ನಾಳೆ ಅರಸನ ಬಳಿಗೆ ಹೋಗಿ ಸ್ವಪ್ನದ ಸಂಗತಿಯನ್ನು ತಿಳಿಸಿ, ನಾಲ್ಕು ಸಮಾಧಾನದ ಮಾತುಗಳನ್ನು ಹೇಳಿ ರಾಜಪುತ್ರಿಯ ಶೋಧಕ್ಕಾಗಿ ಹೊರಡು. ನೀನು ದಕ್ಷಿಣಾಭಿಮುಖವಾಗಿ ಕೆಲವು ದಿನ ಮಾರ್ಗಕ್ರಮಣ ಮಾಡಲು, ನಿನಗೆ ಒಂದು ಶಿವಾಲಯವು ಹತ್ತುವದು. ಅಲ್ಲಿ ಶೂರನೂ, ಸುಂದರನೂ ಆದ ಒಬ್ಬ ರಾಜಪುತ್ರನು ನಿನ್ನ ಹಾದಿಯನ್ನು ನೋಡುತ್ತ ಕುಳಿತುಕೊಂಡಿರುವನು. ಅವನೇ ಪದ್ಮನಯನೆಯ ಪತಿಯು. ಆತನು ನಿನ್ನ ಶೋಧಕ್ಕೆ ಸಹಾಯಮಾಡುವನು, ಎಂದು ಹೇಳಿದನು; ಆದ್ದರಿಂದ ಪ್ರಭುವೇ, ನಾನು ಪದ್ಮನಯನೆಯ ಶೋಧಕ್ಕಾಗಿ ಇಂದೇ ಹೊರಡುವೆನು. ನನ್ನ ಒಡಹುಟ್ಟಿದವಳಂತೆ ಇದ್ದ ಪದ್ಮನಯನಾದೇವಿಯ ಶೋಧಮಾಡಿದ ಹೊರತು ನಾನು ಯಾವ ಸುಖೋಪಭೋಗಗಳನ್ನೂ ಹೊಂದುವದಿಲ್ಲ. ಫಲಮೂಲಗಳನ್ನು ಭಕ್ಷಿಸಿ, ಕೇವಲ ವ್ರತಸ್ಥನಾಗಿರುವೆನು, ನೀನು ಇನ್ನು ಮನಸ್ಸಿನ ಚಿಂತೆಯನ್ನು ಬಿಡು. ಪದ್ಮನಯನೆಯ ಶೋಧವಾಯಿತೆಂದು ತಿಳಿ. ಸ್ವಲ್ಪ ದಿನಗಳಲ್ಲಿ ಪದ್ಮನಯನೆಯು ಪತಿಪುತ್ರರೊಡನೆ ಶ್ರೀಗುರುಕೃಪೆಯಿಂದ ನಿನ್ನನ್ನು ಹೊಂದುವಳು!

ಈ ಮೇರೆಗೆ ನಿರ್ಧಾರದಿಂದ ಆಡಿದ ಸುಮತಿಯ ಮಾತುಗಳನ್ನು ಕೇಳಿ ಅರಸನಿಗೆ ಬಹಳ ಸಮಾಧಾನವಾಯಿತು. ಆತನು ಸುಮತಿಗೆ—ತಪಸ್ಸಿದ್ಧನಾದ ಸುಮತಿಯೇ, ನಿನ್ನಂಥ ಮಹಾಪುರುಷನು ಶ್ರೀಗುರುಪ್ರೇರಣೆಯಿಂದ ಆರಂಭಿಸಿದ ಕೆಲಸವು ಕಡೆಗಾಣುವದು ಆಶ್ಚರ್ಯವಲ್ಲ. ನೀನು ನನ್ನ ಸಲುವಾಗಿಯೂ ಶ್ರಮಪಡಲಿಕ್ಕೆ ಸಿದ್ಧನಾದ್ದರಿಂದ ನಮ್ಮ ಅಭ್ಯುದಯಕಾಲವು ಸಮೀಪಿಸಿತೆಂದು ತಿಳಿಯುವೆನು. ಪರಹಿತ-ತತ್ಪರರಾದ ನಿಮ್ಮಂಥ ಮಹಾತ್ಮರ ಉಪಕಾರವನ್ನು ನನ್ನಂಥ ಕ್ಷುದ್ರನು ಏನು ತಿಳಿಯುವೆನು? ಇನ್ನು ನಾನು ನಿಶ್ಚಿಂತನಾದೆನು. ಪದ್ಮನಯನೆಯ ಹಿತಚಿಂತನೆಯಲ್ಲಿ ಸದ್ಗುರುವು ಸದಾಜಾಗರೂಕನಾಗಿರುವನೆಂಬದರ ಅನುಭವವು ನನಗೆ ಬಂದಿತು. ಆ

ಮಹಾತ್ಮನು ನಿನ್ನೆ ರಾತ್ರಿ ನನಗೂ ಸ್ವಪ್ನದಲ್ಲಿ ದರ್ಶನಕೊಟ್ಟು "ಪದ್ಮನಯನೆಯ ಶೋಧಕ್ಕಾಗಿ ಸುಮತಿಯನ್ನು ನಾಳೆಗೆ ಕಳಿಸು" ಎಂದು ಆಜ್ಞಾಪಿಸಿದನು. ತೇಜೋರಾಶಿಯೇ, ನಿನ್ನನ್ನು ಆಜ್ಞಾಪಿಸುವದು ನನ್ನ ಯೋಗ್ಯತೆಯೇ? ಪತಿತನಾದ ನನ್ನನ್ನು ಉದ್ಧರಿಸಬೇಕೆಂದು ಪ್ರಾರ್ಥಿಸುವೆನುಮಾತ್ರ!

ಸುಮತಿಯು ಅರಸನ ಈ ಮಾತುಗಳನ್ನು ಕೇಳಿ ಆತನ ವಿನಯಕ್ಕಾಗಿ ಸಮಾಧಾನಪಟ್ಟು, ಆತನ ಅನುಮತಿಯಿಂದ ಪದ್ಮನಯನೆಯ ಶೋಧಕ್ಕಾಗಿ ಹೊರಟನು. ಆತನು ಗುರುವಿನ ಅಪ್ಪಣೆಯಂತೆ ದಕ್ಷಿಣಾಭಿಮುಖವಾಗಿಸಾಗಿ, ಮಾರ್ಗದಲ್ಲಿ ದೊಡ್ಡ ದೊಡ್ಡ ಗುಡ್ಡಗಳನ್ನೂ, ಹೊಳೆಗಳನ್ನೂ, ಅರಣ್ಯ ಪ್ರದೇಶಗಳನ್ನೂ ದಾಟಿ ದಾಟಿ ದಣಿದನು. ಈ ಪ್ರಕಾರ ಬಹಳ ಕಷ್ಟಪಡುತ್ತ ಅಖಂಡ ಇಪ್ಪತ್ತು ದಿವಸಗಳ ವರೆಗೆ ನಡೆದು ಹೋದಬಳಿಕ ಒಂದು ವಿಸ್ತಾರವಾದ ಬಯಲಲ್ಲಿ ಒಂದು ದೇವಾಲಯವು ಅವನ ಕಣ್ಣಿಗೆ ಬಿತ್ತು. ಅದರ ಸುತ್ತಲೂ ಮನೋಹರವಾದ ತೋಟವು ಒಪ್ಪುತ್ತಿತ್ತು. ಆ ತೋಟದಲ್ಲಿಯ ಗಿಡಬಳ್ಳಿಗಳು ಹೂ ಕಾಯಿಗಳಿಂದ ಜಗ್ಗುತ್ತಿದ್ದವು. ಅಲ್ಲಿ ಸಂಪಗೆ, ಸೇವಂತಿಗೆ, ಮಲ್ಲಿಗೆ, ಬಕುಳ ಮೊದಲಾದ ಸುಗಂಧದ ಪುಷ್ಪಗಳು ಸುವಾಸನೆಯನ್ನು ಬೀರುತ್ತಿದ್ದವು. ಮಾವು. ಹಲಸು, ಬಾಳೆ. ತೆಂಗು, ನೇರಲು ಮುಂತಾದ ಫಲಗಳು ಜನರ ಕ್ಷುಧಾಶಾಂತಿಯನ್ನು ಮಾಡುತ್ತಿದ್ದವು. ಆ ತೋಟದಲ್ಲಿದ್ದ ಸರೋವರವು ಸ್ವಚ್ಛವಾದ ಉದಕದಿಂದಲೂ, ಸುಂದರವಾದ ಕಟ್ಟಡದಿಂದಲೂ ನೋಡುವವರ ಮನಸ್ಸನ್ನು ರಮಿಸುತ್ತಿತ್ತು. ಸುಮತಿಯು ಆ ತೋಟವನ್ನು ದಾಟಿದೇವಾಲಯದ ಒಳಗೆ ಹೋಗಲು. ಅದರ ಭವ್ಯಸ್ವರೂಪವು ಅವನ ಕಣ್ಣಿಗೆ ಬಿತ್ತು. ಅವನು ಅಂಥ ಸುಂದರವಾದ ದೇವಾಲಯವನ್ನು ಎಂದೂ ನೋಡಿದ್ದಿಲ್ಲ. ಆ ದೇವಾಲಯದ ರಚನೆಯಲ್ಲಿ ತೋರುವ ಕಲಾಕೌಶಲ್ಯವೂ, ಸಾಹಸವೂ ಪ್ರೇಕ್ಷಕರಲ್ಲಿ ಆನಂದಾಶ್ಚರ್ಯಗಳನ್ನುಂಟು ಮಾಡುತ್ತಿದ್ದವು. ಸುಮತಿಯು ಆ ಭವ್ಯವಾದ ದೇವನಿಕೇತನವನ್ನು ಪ್ರವೇಶಿಸಲು, ಒಬ್ಬ ದಿವ್ಯ ಪುರುಷನು ಅವನ ಕಣ್ಣಿಗೆ ಬಿದ್ದನು. ಅವನು ಸುಮತಿಯು ಬರವನ್ನು ನೋಡಿ ಎದ್ದುನಿಂತು ಸಾಷ್ಟಾಂಗವಾಗಿ ವಂದಿಸಿ, ಆಸನಾದಿಗಳಿಂದ ಉಪಚರಿಸಿದ ಮೇಲೆ—ವಿಪ್ರೋತ್ತಮನೇ, ನಿನ್ನ ಬರುವಿಕೆಯಿಂದ ನಾನು ಕೃತಾರ್ಥನಾದೆನು. ನಿನ್ನ ದರ್ಶನದಿಂದ ವಿಚಿತ್ರವಾದ ಆನಂದವು ನನಗಾಗಿದೆ. ಒಬ್ಬ ಋಷಿಶ್ರೇಷ್ಠನು ಈಗ ನಾಲ್ಕಾರು ದಿನಗಳ ಹಿಂದೆ ಸ್ವಪ್ನದಲ್ಲಿ

ಸೂಚಿಸಿದ ಸಂಗತಿಯು ನಿಜವಾಯಿತೆಂದು ನನಗೆ ತೋರುತ್ತದೆ, ಎಂದನು.

ಆ ದಿವ್ಯ ಪುರುಷನ ವಯಸ್ಸು ಇಪ್ಪತ್ತೈದರ ಒಳಗೆ ಇರಬಹುದು. ಆ ಪ್ರಾಯಸ್ಥನ ಮುಖವು ಸುಂದರ—ಅಲೌಕಿಕವಾದ ರಾಜತೇಜಸ್ಸಿನಿಂದ ಒಪ್ಪುವಂಥಾದ್ದು; ಮೈಕಟ್ಟು ಕಸುವಿನದು—ಗರಡಿಯ ಸಾಧಕಗಳಿಂದ ಅದು ತಿದ್ದಿ ಮಾಡಿದಂತೆ ಇತ್ತು. ಆತನ ಶರೀರಕಾಂತಿಯ ಸೊಬಗನ್ನಂತು ವರ್ಣಿಸಲಾಸಲ್ಲ. ಇಂಥ ಸುಂದರಾಕಾರದ ಗಂಭೀರಪುರುಷನನ್ನು ನೋಡಿ ಸುಮತಿಯು ಮೊದಲೇ ಬೆರಗಾಗಿದ್ದನು. ಆ ತರುಣನಲ್ಲಿಯ ವಿನಯವನ್ನು ನೋಡಿದ ಬಳಿಕಂತು ಆ ವಿಪ್ರಶ್ರೇಷ್ಠನ ಮನಸ್ಸು ಸುಪ್ರಸನ್ನವಾಯಿತು. ಇವನೇ ಪದ್ಮನಯನೆಯ ಪತಿಯಾಗಿದ್ದರೆ, ಬಹು ಯೋಗ್ಯವೆಂದು ಆತನು ನೆನಸಿದನು. ತೇಜಸ್ವಿಗಳಾದ ಆ ಇಬ್ಬರು ತರುಣರಿಂದ ಆ ಶಿವಾಲಯಕ್ಕೆ ಒಂದು ಬಗೆಯ ಕಳೆಯೇರಿತ್ತು. ಸುಮತಿಯು ಆ ಪ್ರಾಯಸ್ಥನನ್ನು ಕುರಿತು—ಸುಜ್ಞನೇ, ನಿನ್ನ ಆದರದಿಂದ ನನ್ನ ಮನಸ್ಸು ಬಹಳ ಸಮಾಧಾನವನ್ನು ಹೊಂದಿದೆ. ಪ್ರಾಯದಲ್ಲಿ ಈ ಪರಿಯ ವಿನಯವಿರುವದು ಹಿರಿಯರ ಪುಣ್ಯವೇ ಸರಿ. ಪರಮೇಶ್ವರನು ನಿನ್ನ ಕಲ್ಯಾಣಮಾಡುವನು; ಆದರೆ ನೀನು ಯಾರು? ನಿನ್ನ ವೃತ್ತಾಂತವೇನು? ಋಷಿಯು ಹೇಳಿದ ಭವಿಷ್ಯವು ಯಾವದು? ಇವನ್ನೆಲ್ಲ ದಯಮಾಡಿ ಹೇಳು, ಅನ್ನಲು, ರಾಜಪುತ್ರನು ತನ್ನ ವೃತ್ತಾಂತನ್ನು ಈ ಪ್ರಕಾರ ಹೇಳಿದನು.

ಮಹಾತ್ಮನೇ, ವಿಂಧ್ಯಾದ್ರಿಯ ಉತ್ತರಕ್ಕೆ, ಅಂದರೆ ಕನೋಜರಾಜ್ಯದ ದಕ್ಷಿಣಕ್ಕೆ ಮಾಳವಾ ಎಂಬದೊಂದು ರಾಜ್ಯವಿರುವದು. ಉಜ್ಜಯಿನೀ ಪಟ್ಟಣವೇ ಆ ರಾಜ್ಯದ ರಾಜಧಾನಿಯು. ಬಹುಜನ ಕ್ಷತ್ರಿಯ ಅರಸರು ಆ ರಾಜ್ಯವನ್ನು ಆಳಿದ ಬಳಿಕ ಸುಲೋಚನನೆಂಬ ಅತಿ ವಿಖ್ಯಾತನಾದ ಅರಸನು ಈಗ ಅದನ್ನು ಆಳುತ್ತಿರುವನು. ಅವನ ಕೈಕೆಳಗೆ ಎಷ್ಟೋಜನ ಮಾಂಡಲಿಕರಾಜರು ಇರುವರು. ಸುಲೋಚನನಿಗೆ ಮುಪ್ಪಿನ ಕಾಲಕ್ಕೆ ನಾನೊಬ್ಬನೇ ಮಗನು ಹುಟ್ಟಲು, ಅವನು ನನಗೆ ಕಮಲಾಕ್ಷನೆಂದು ಹೆಸರನ್ನಿಟ್ಟು, ಬಹು ಕಕ್ಕುಲತೆಯಿಂದ ನನ್ನ ರಕ್ಷಣಮಾಡಿ, ನನಗೆ ಸಕಲ ವಿದ್ಯೆಗಳನ್ನು ಕಲಿಸಿದನು. ತಾಯಿ—ತಂದೆಗಳ ಅಚ್ಛೆಯಿಂದ ಉದ್ಧಟತನವು ನನ್ನಲ್ಲಿ ಸೇರಿತು. ಮನಸ್ಸಿಗೆ ಬಂದಂತೆ ನಡೆಯಲಿಕ್ಕೆ ನಾನು ಮೆಚ್ಚಿದವನಾದೆನು. ಅನುರೂಪಳಾದ ಹೆಂಡತಿಯು ಸಿಕ್ಕಹೊರತು ಲಗ್ನವಾಗಲಿಕ್ಕಿಲ್ಲೆಂದು ನಾನು ನಿಶ್ಚಯ ಮಾಡಿದ್ದೆನು.

ಅರಸನು ಬಹುಜನ ರಾಜಪುತ್ರಿಯರ ಭಾವಪಟಗಳನ್ನು ನನಗೆ ತೋರಿಸಿ ದರೂ, ನಾನು ಅವನ್ನೆಲ್ಲ ಧಿಕ್ಕರಿಸಿ, ಕಡೆಗೆ ನಾನು ಲಗ್ನವನ್ನೇ ಮಾಡಿಕೊಳ್ಳು ವದಿಲ್ಲವೆಂದು ಖಂಡಿತವಾಗಿ ಹೇಳಿದೆನು. ಏನು ಮಾಡಿದರೂ ನನ್ನ ಹಟ ವನ್ನು ಬಿಡದಾದೆನು. ಆಗ ನಾನು ಎಣಿಕೆಗೆ ಬರಬೇಕೆಂದು ಅರಸನು ನನ್ನ ನ್ನು ಪ್ರತಿಬಂಧದೊಳಗಿರಿಸಿದನು. ಪ್ರತಿಬಂಧದೊಳಗಿದ್ದರೂ ನನಗೆ ಯಾವ ವೈಭವಕ್ಕೂ ಕೊರತೆಯಿದ್ದಿಲ್ಲ. ಸ್ವಾತಂತ್ರ್ಯವೊಂದು ಇಲ್ಲದ್ದರಿಂದ ನನ್ನ ವೈಭ ವವು ನಿಸ್ಸಾರವಾಗಿ, ನಾನು ಕಾರಾಗೃಹದಿಂದ ಪಾರಾಗುವ ಹಂಚಿಕೆಯನ್ನು ಹುಡುಕಹತ್ತಿದೆನು. ಕಡೆಗೂ ನನ್ನ ಮೇಲೆ ತಂದೆಯ ಪ್ರೇಮವು ಬಹಳ. ಸಿಟ್ಟಿನಿಂದ ನನ್ನನ್ನು ಪ್ರತಿಬಂಧದೊಳಗಿರಿಸಿದ್ದು ಆತನ ಪಶ್ಚಾತ್ತಾಪಕ್ಕೆ ಕಾರಣ ವಾಯಿತು. ಕಡೆಗೆ ಆತನು ಮಮತೆಯಿಂದ ನನ್ನನ್ನು ಕಾರಾಗೃಹದಿಂದ ಮುಕ್ತನಾಗಮಾಡಿದನು.

ಬ್ರಾಹ್ಮಣಶ್ರೇಷ್ಠಾ, ನನ್ನ ತಂದೆಯ ಈ ದಯಾಲುತ್ವವು, ನನ್ನ ಅವಿ ಚಾರದ ಮೂಲಕ ನನ್ನ ದುಃಖಕ್ಕೆ ಕಾರಣವಾಯಿತು. ತಂದೆಯು ನನ್ನನ್ನು ಕಾರಾಗೃಹದಲ್ಲಿಟ್ಟು ಅವಮಾನಗೊಳಿಸಿದನೆಂಬ ಸಿಟ್ಟಿನಿಂದ, ಆತನ ಮನಸ್ಸನ್ನು ನೋಯಿಸುವದಕ್ಕಾಗಿ, ದೇಶಾಂತರಕ್ಕೆ ಹೋಗಬೇಕೆಂದು ನಾನು ನಿಶ್ಚಯಿಸಿ ದೆನು. ಒಂದುದಿನ ಬೇಟೆಯನೆವದಿಂದ ಕುದುರೆಯನ್ನೇರಿ, ಅರಮನೆಯಿಂದ ಹೊರಬಿದ್ದವನು ತಿರುಗಿ ಮನೆಗೇ ಹೋಗಲಿಲ್ಲ. ದಕ್ಷಿಣದಿಕ್ಕನ್ನು ಹಿಡಿದು ಒಂದೇಸವನೆ ಮಾರ್ಗಕ್ರಮಣಮಾಡಿದೆನು. ದುರಭಿಮಾನ-ಮೇಲೆ ಪ್ರಾಯ ದಸೊಕ್ಕು, ಕೇಳುವದೇನು? ಹೊತ್ತು ಮುಳುಗಿದಲ್ಲಿ ಇಳಕೊಳ್ಳುತ್ತ, ಇದ್ದದ್ದನ್ನು ಮಾರಿ ಹೊಟ್ಟೆಹೊರಕೊಳ್ಳುತ್ತ, ನಾನು ಇಪ್ಪತ್ತೈದು ದಿನ ಹಾದಿಯನ್ನು ನಡೆ ದು, ಹಲವು ದೇಶಗಳನ್ನೂ, ಅರಣ್ಯಗಳನ್ನೂ ದಾಟಿದೆನು. ಆಗ ಒಂದು ಭಯಂಕರವಾದ ಅರಣ್ಯವು ನನಗೆ ಹತ್ತಿತು. ಕೆಲವು ಅಂತರವನ್ನು ಕ್ರಮಿಸಿ ಹೋದಬಳಿಕ ಆ ಅಪರಿಚಿತವಾದ ಅರಣ್ಯದಲ್ಲಿ ಒಂಟಿಗನಾಗಿ ಹೋಗುವಾಗ ಅಲ್ಪಸ್ವಲ್ಪ ಭಯವು ನನ್ನನ್ನು ಬಾಧಿಸಹತ್ತಿತು. ಭಯನೆಂದರೇನೆಂಬದರ ಅನುಭವವಾದದ್ದು ಇದೇ ಮೊದಲೆಂದು ಹೇಳಬಹುದು. ಒಂದು ದಿನ ಆ ಅರಣ್ಯದಲ್ಲಿಯೇ ಮಲಗಿ, ಎರಡನೆಯದಿನ ಸಂಜೆಯವರೆಗೆ ಹಾದಿಯನ್ನು ನಡೆ ದರೂ ಅರಣ್ಯವು ತೀರಲಿಲ್ಲ. ದ್ವಿಜೋತ್ತಮಾ, ಕಷ್ಟದ ಸುದ್ದಿಯಿಲ್ಲದೆ ಇಷ್ಟ

ತ್ತೆರಡು ವರ್ಷ ಕಬ್ಬಿನಹಾಗೆ ಬೆಳೆದ ನನಗೆ ಇಪ್ಪತ್ತೈದು ದಿನಗಳ ಮಾರ್ಗಾಯಾಸವು ತ್ರಾಸದಾಯಕವಾಯಿತು. ಅರಮನೆಯೊಳಗೆ ಇಪ್ಪತ್ತೆರಡು ವರ್ಷಗಳಲ್ಲಿ ಬಾರದಿದ್ದ ಮಹತ್ವದ ಅನುಭವಗಳು ಪ್ರವಾಸದ ಈ ಇಪ್ಪತ್ತೈದು ದಿನಗಳಲ್ಲಿ ಬಂದು ನಾನು ಮೆತ್ತಗಾದೆನು. ತಾಯಿ-ತಂದೆಗಳ ಹಾಗು ಗುರು-ಹಿರಿಯರ ಹಿತೋಪದೇಶದ ಮಹತ್ವ, ಅರಸೊತ್ತಿಗೆಯ ಗೌರವ, ಅಪಕ್ವದೆಸೆಯಲ್ಲಿಯ ಸ್ವಾತಂತ್ರ್ಯಾಭಿಲಾಷೆಯ ದುಷ್ಟತನ ಇವು ಮನಸ್ಸಿನಲ್ಲಿ ಬಂದು, ಪಶ್ಚಾತ್ತಾಪದಿಂದ ಮನಸ್ಸಿಗೆಬರೆಕೊಟ್ಟಂತಾಯಿತು. ರಾತ್ರಿಯು ಬಹಳವಾದದ್ದರಿಂದ ಒಂದು ವಿಶಾಲವಾದ ವೃಕ್ಷದಬುಡದಲ್ಲಿ ನಾನು ಕುದುರೆಯನ್ನು ಕಟ್ಟಿ ಅಡ್ಡಾದೆನು. ಆದರೆ ಎರಡುದಿನ ಅನ್ನವಿಲ್ಲದ್ದರಿಂದ ನಿದ್ದೆಬರಲಿಲ್ಲ. ಆರುತಾಸು ರಾತ್ರಿಯಾಯಿತು, ಒಂಬತ್ತು ತಾಸು ಮೀರಿತು, ಕಣ್ಣಿಗೆಕಣ್ಣು ಹತ್ತಲಿಲ್ಲ. ಆದರೆ ಯಾವಾಗ ನಿದ್ದೆಹತ್ತಿತೋ ತಿಳಿಯದು, ಬೆಳಗಾಗಿ ಎರಡು ತಾಸು ಹೊತ್ತು ಏರಿದಮೇಲೆ ಎದ್ದು ನೋಡುತ್ತೇನೆ, ಕುದುರೆಯಿಲ್ಲ, ಧನುರ್ಬಾಣಗಳಿಲ್ಲ, ವಸ್ತ್ರಾಭರಣಗಳಿಲ್ಲ; ಉಟ್ಟವಸ್ತ್ರವಲ್ಲದೆ ಉಳಿದದ್ದೇನೂ ನನ್ನ ಕಣ್ಣಿಗೆ ಬೀಳಲಿಲ್ಲ!

ದ್ವಿಜೋತ್ತಮಾ, ಆಗಿನ ನನ್ನ ಮನಸ್ಸಿನ ಸ್ಥಿತಿಯನ್ನು ಏನು ವರ್ಣಿಸಲಿ! ಈ ಮೊದಲೆ ನನ್ನ ಆ ನಿರಂಕುಶಪ್ರಭುತ್ವದ ಮನಸ್ಸಿಗೆ ಕೊಟ್ಟಿದ್ದ ಬರೆಗೆ, ಈಗ ಹುಣ್ಣು ಆದಂತಾಗಿ ಅದರ ನೋವು ಹೆಚ್ಚಿತು. ಕ್ಷುಧೆಯ ಉಪದ್ರವದಿಂದಲೂ, ಮಾರ್ಗಾಯಾಸದಿಂದ ಇಂದ್ರಿಯಗಳ ವ್ಯಾಪಾರಗಳು ನಾಗದ ಹಾಗಾದ್ದರಿಂದಲೂ, ಸಹಾಯಕಾರಿಗಳಾದ ಧನುರ್ಬಾಣಾಸ್ತ್ರಗಳು ಅದೃಶ್ಯವಾದದ್ದರಿಂದಲೂ ಮನಸ್ಸು ನಿರಾಶೆಯನ್ನು ಹೊಂದಿ, ಜೀವವು ತಳಮಳಿಸಹತ್ತಿ ನಾನು ವಿಚಾರಶೂನ್ಯನಾದೆನು. ಕೂಡಲೆ ನನಗೆ ತಾಯಿ-ತಂದೆಗಳ ನೆನಪಾಗಿ ಕಣ್ಣೀರುಗಳು ಉದುರಿದವು. ಕ್ರೂರಮೃಗಗಳ ಭಯಂಕರವಾದ ಶಬ್ದಗಳು ಕಿವಿಗೆ ಬೀಳಲು, ಧನುರ್ಬಾಣಗಳು ಅದೃಶ್ಯವಾದದ್ದರ ಸ್ಮರಣವಾಗಿ, ನಾನು ಭಯದಿಂದ ಹೌಹಾರಿ ಕುಳಿತುಕೊಂಡೆನು. ಹಣ್ಣುಗಳನ್ನಾದರೂ ತಿಂದು ಕ್ಷುಧೆಯನ್ನು ಶಾಂತಮಾಡಿಕೊಳ್ಳಬೇಕೆಂಬ ವಿಚಾರವು ಒಮ್ಮೊಮ್ಮೆ ಮನಸ್ಸಿನಲ್ಲಿ ಬರುವದು; ಆದರೆ ಮಾಡಲೇನು? ನಾನು ಕುಳಿತುಕೊಂಡಿದ್ದ ಅರಣ್ಯಪ್ರದೇಶವು ಉಷ್ಣಕಟಿಬಂಧದಲ್ಲಿದ್ದಮೂಲಕ, ಅಲ್ಲಿಯ ಫಲಯುಕ್ತ ವೃಕ್ಷಗಳು ಮುಗಿಲಿಗೆ ಮುಟ್ಟಿದ್ದವು.

ಅವುಗಳನ್ನು ಏರುವ ಸಾಮರ್ಥ್ಯವೂ, ರೂಢಿಯೂ ನನಗಿದ್ದಿಲ್ಲ. ಯುಕ್ತಾಯುಕ್ತಗಳ ವಿಚಾರಮಾಡದೆ, ಯಾವದೊಂದು ಕೆಲಸಕ್ಕೆ ಕೈಹಾಕುವ ಅಪ್ರಬುದ್ಧನ ಸ್ಥಿತಿಯು, ಹೇಗಾಗುವದೆಂಬದರ ಅನುಭವವನ್ನು ಪ್ರಾರಬ್ಧವು, ಯೋಗ್ಯ ವಯಸ್ಸಿನಲ್ಲಿ ನನಗೆ ಒದಗಿಸಿಕೊಟ್ಟಿತು. ಈ ಪ್ರಕಾರನಾನು ಹಸಿವೆ-ಬಾಯಾರಿಕೆಗಳಿಂದಲೂ, ಹಾದಿಯ ಕಷ್ಟದಿಂದಲೂ, ಆಪ್ತೇಷ್ಟರವಿಯೋಗದುಃಖದಿಂದಲೂ ಬಳಲಿದವನಾಗಿ, ಚಿಂತೆಮಾಡುತ್ತ ಮುಂದಿನ ಭೂಪ್ರದೇಶದಲ್ಲಿ ನಿರ್ಹೇತುಕನಾಗಿ ದೃಷ್ಟಿಯನ್ನಿಟ್ಟು ಎವೆಯಿಕ್ಕದೆ ನೋಡುತ್ತಿರಲು, ನೆಲಕ್ಕೆಹೊಂದಿ ಕಲ್ಲಿನ ಒಂದು ಸಣ್ಣ ಬಾಗಿಲು ನನಗೆ ಕಾಣಿಸಹತ್ತಿತು. ಅದರ ಸುತ್ತಲೂ ಗಿಡಗಂಟಿಗಳು ದಟ್ಟವಾಗಿ ಬೆಳೆದದ್ದರಿಂದ, ನೋಡುವವರ ಕಣ್ಣಿಗೆ ಅದು ಬೇಗನೆ ಕಾಣುವದಾಗಿದ್ದಿಲ್ಲ. ನಾನು ಕುಳಿತ ಸ್ಥಳವನ್ನು ಬಿಟ್ಟು ಆ ಬಾಗಿಲ ಹತ್ತರ ಹೋಗಿ ಪರೀಕ್ಷಿಸಿದೆನು. ಅದರ ಗರ್ಭವು ಒಬ್ಬ ಮನುಷ್ಯನು ಪ್ರಯಾಸದಿಂದ ಒಳಗೆ ಹೋಗುವಷ್ಟು ವಿಸ್ತಾರವಾಗಿತ್ತು. ಮನುಷ್ಯನಿಗೆ ಕಷ್ಟವು ದುಸ್ಸಹವಾಯಿತೆಂದರೆ, ಜೀವವು ಬೇಸರವಾಗುತ್ತದೆ. ಅದರಂತೆ ನಾನಾದರೂ ಜೀವಕ್ಕೆ ಬೇಸತ್ತು ಅಪರಿಚಿತವೂ, ಭಯಂಕರವೂ ಆದ ಗುಹೆಯನ್ನು ಹೋಗುವದಕ್ಕೆ ಯತ್ನಿಸಿದೆನು; ಆದರೂ "ಜೀವವು ಬೆಲ್ಲಕ್ಕಿಂತ ಸವಿ" ಎಂಬ ನುಡಿಯಂತೆ ನನ್ನ ಮನಸ್ಸು ಈ ಘೋರಕೃತ್ಯಕ್ಕೆ ತೊಡಗುವದಕ್ಕಾಗಿ ಒಮ್ಮೊಮ್ಮೆ ಹಿಂಜರಿಯುತ್ತಿತ್ತು. ಕಡೆಗೆ ಅದನ್ನು ದೃಢಪಡಿಸಿ ಗುಹೆಯಲ್ಲಿ ಹಾರಿಕೊಳ್ಳುವದನ್ನು ನಿಶ್ಚಯಿಸಿದೆನು.

ವಿಪ್ರವರ್ಯಾ, ಆ ಕಾಲದಲ್ಲಿ ನನ್ನ ಸ್ಥಿತಿಯು ಹೇಗಾಗಿರಬಹುದೆಂಬದರ ಕಲ್ಪನೆಯನ್ನು ನೀನೇ ಮಾಡು. ನನ್ನ ಮಾತಾ-ಪಿತೃಗಳೂ, ಬಂಧು-ಮಿತ್ರರೂ, ರಾಜೈಶ್ವರ್ಯಗಳೂ ಕಣ್ಣಮುಂದೆ ಕಟ್ಟಿದಂತಾಗಿ ದುಃಖದಿಂದ ನನ್ನ ಕುತ್ತಿಗೆಯ ಶಿರಗಳು ಉಬ್ಬಿದ್ದವು. ನೇತ್ರಗಳಿಂದ ಅಶ್ರುಗಳು ಹೊರಚಲ್ಲಹತ್ತಿದವು. ಆದರೂ ನಾನು ದೃಢನಿಶ್ಚಯದಿಂದ ಗಂಡುಗಚ್ಚೆಯನ್ನು ಹಾಕಿಕೊಂಡು, ಮೊದಲು ಗುಹೆಯಲ್ಲಿ ಹಣಿಕಿ ನೋಡಿದೆನು. ಅಲ್ಲಿ ಕತ್ತಲು ವಿಶೇಷವಾಗಿದ್ದದ್ದರಿಂದ ನನಗೆ ಏನೂ ಕಾಣಿಸಲಿಲ್ಲ. ಕಡೆಗೆ ಜೀವದ ಹಂಗುದೊರೆದು, ತಾಯಿ-ತಂದೆಗಳನ್ನು ಕಡೆಯಸಾರೆ ನೆನಿಸಿ, ಜಗದ್ರಕ್ಷಕನಾದ ಪರಮೇಶ್ವರನ ಮೇಲೆ ನಂಬಿಗೆಯನ್ನಿಟ್ಟು, ಗವಿಯಲ್ಲಿ ಹಾರಿದೆನು; ಆದರೆ ತಳವು ಬಹಳ ತಗ್ಗು ಇಲ್ಲದ್ದರಿಂದ ನನಗೇನು ಅಷ್ಟು

ಪೆಟ್ಟು ಹತ್ತಲಿಲ್ಲ. ಪೂಜ್ಯನೆ, ಇಂಥ ಸಾಹಸಕೃತ್ಯವನ್ನು ಮಾಡಲಿಕ್ಕೆಕಾರಣ ವೇನೆಂಬವನ್ನು ಈಗ ನಾನು ಹೇಳಲಾರೆನು. ಮುಂದಿನ ಸಂಗತಿಯನ್ನು ಕೇಳಿದ ಬಳಿಕ, ಕರ್ಮ-ಧರ್ಮಸಂಯೋಗದಿಂದಲೇ ಇಂಥ ಸಾಹಸಕೃತ್ಯವನ್ನು ಮಾಡ ಲಿಕ್ಕೆ ಮನಸ್ಸು ಹರಿಯಿತೆಂದು ನಿನಗೇ ತಿಳಿಯಬಹುದು. ಮುಂದೆ ಗವಿಯಲ್ಲಿ ನಾಲ್ಕೂ ಕಡೆಗೆ ದಿಟ್ಟಿಸಿ ನೋಡುತ್ತಿರಲು, ಈಶಾನ್ಯಮೂಲೆಯಲ್ಲಿ ಒಂದುಬಾಗಿಲು ಇದ್ದಂತೆ ನನಗೆ ತೋರಿತು. ಆ ಮೇಲೆ ಆ ಬಾಗಿಲೊಳಗಿಂದ ಸುಮಾರು ೫೦೦ ಮೊಳ ಹೋದ ಮೇಲೆ ನನಗೆ ಮತ್ತೊಂದು ಸುಂದರವೂ, ಭವ್ಯವೂ ಆದ ಬಾಗಿಲೂ, ಅದನ್ನು ದಾಟಿಹೋದಮೇಲೆ ವಿಸ್ತಾರವೂ, ಮನೋಹರವೂ ಆದ ತೋಟವೂ ನನಗೆ ತೋರಿದವು. ಗುಹೆಯೊಳಗೆ ಹಾರಿದಾಗಿನಿಂದ ಕಡೆಯ ಬಾಗಿಲಿಗೆ ಹೋಗುವವರೆಗೆ ಪ್ರಕಾಶವೇ ಇದ್ದಿಲ್ಲೆಂದು ಹೇಳಬಹುದು. ಇಂಥ ಕತ್ತಲೆಯಲ್ಲಿ ಒಂಬೈನೂರು ಮೊಳ ಹಾದಿಯನ್ನು ಹೇಗೆ ಹೋಗಿರಬಹುದೆಂಬ ದರ ಆಶ್ಚರ್ಯವು ನನಗೇ ಆಗುತ್ತದೆ. ದುರ್ನಿವಾರವಾದ ಪ್ರಾಣಸಂಕಟವು ಒದ ಗಿದ್ದರಿಂದ, ನಾನು ತಲೆಮಾಸಿ ಕುಳಿತುಕೊಂಡಂತೆ ಆಗಿತ್ತು. ಇರಲಿ. ನಾನು ತೋಟದೊಳಗೆ ಹೋಗಲು, ಸೂರ್ಯನು ಮಧ್ಯಾಕಾಶಕ್ಕೆ ಏರಿದ್ದರಿಂದ, ಅವನ ಪ್ರಚಂಡ ಕಿರಣಗಳು ಕಣ್ಣುಗಳನ್ನು ಕುಕ್ಕಿದವು; ನನಗೆ ವಿಚಿತ್ರವಾದ ಆನಂ ದವಾಯಿತು. ನಾನು ನಿರ್ಭಯದಿಂದ ತೋಟವನ್ನು ಹೊಕ್ಕೆನು.

ವಿಪ್ರವರ್ಯಾ, ಆ ಸ್ಥಾನದ ಮಾಹಾತ್ಮ್ಯವನ್ನು ಏನುಹೇಳಲಿ? ಗುಹೆಯ ಭಯಂಕರತೆ, ತೋಟದ ರಮಣೀಯತ್ವ ಇವನ್ನು ಮನಸ್ಸಿನಲ್ಲಿ ತಂದರೆ, ಈ ಎಲ್ಲ ಕೃತಿಯು ಅಮಾನುಷವೆಂದು ನಿಶ್ಚಯವಾಗುವದು. ಆ ಸ್ಥಾನವು ಹೊರ ಗಿನಿಂದ ನೋಡುವವರಿಗೆ ಎಂದೂ ಕಾಣುವಹಾಗಿದ್ದಿಲ್ಲ. ಅದು ಒಂದು ಭಯಂಕರ ವಾದ ಕಂದರದಲ್ಲಿ ನಿರ್ಮಿಸಿದ್ದಾಗಿದ್ದು, ಅದನ್ನು ಪ್ರವೇಶಿಸುವ ಮಾರ್ಗವು ಮೇಲೆ ಹೇಳಿದಂತೆ ಭಯಂಕರವಾಗಿತ್ತು. ಸುತ್ತು ಮುತ್ತು ಅಭೇದ್ಯವಾದ ಅರ ಣ್ಯವಿತ್ತು. ನನ್ನ ಪ್ರವೇಶವಾದರೂ ಅಲ್ಲಿ ಹ್ಯಾಗಾಯಿತೆಂಬದರ ಗೂಢವೇ ತಿಳಿ ಯುವ ಹಾಗಿಲ್ಲ. ದೈವವಶಾತ್ತಾಗಿ ಆ ಸ್ಥಾನವನ್ನು ಪ್ರವೇಶಿಸಿದ ನಾನು ತೋಟದ ರಮಣೀಯತ್ವಕ್ಕಾಗಿ ದಂಗುಬಡೆದು ನಿಂತುಕೊಂಡೆನು. ಆ ತೋಟದಲ್ಲಿ ಓಡಾ ಡುವದಕ್ಕಾಗಿ ಮಾರ್ಗಗಳನ್ನು ಬಿಳೇ ಸಂಗಮುರವರೀ ಕಲ್ಲುಗಳಿಂದ ಮಾಡಿದ್ದರು. ವಿಚಿತ್ರವಾದ ಸೌಂದರ್ಯವುಳ್ಳ ಸಣ್ಣ ಸಣ್ಣ ಗಿಡಗಳು ಸಮಾಂತರದಿಂದ ವ್ಯವ

ಸ್ಥಿತವಾಗಿ ಹಚ್ಚಲ್ಪಟ್ಟಿದ್ದವು. ಆ ಗಿಡಗಳಿಗೆ ಮಡಿಗಳನ್ನು ಕೆಂಪು, ಹಳದಿ, ಹಸರು ಮೊದಲಾದ ಬಗೆಬಗೆಯ ಬಣ್ಣಗಳ ಕಲ್ಲುಗಳಿಂದ ಬಹು ಮನೋಹರವಾಗಿ ಮಾಡಿದ್ದರು. ನಡನಡುವೆ ಮಧುರವಾದ ಫಲಗಳ ದೊಡ್ಡ ದೊಡ್ಡ ಗಿಡಗಳು ಮುಗಿಲಿಗೆ ಮುಟ್ಟಿ ಬೆಳೆದಿದ್ದವು. ದ್ರಾಕ್ಷ, ಸೂಜಿಮಲ್ಲಿಗೆ, ದುಂಡುಮಲ್ಲಿಗೆ, ಜಾಜಿ ಮಲ್ಲಿಗೆ ಮುಂತಾದ ಲತೆಗಳ ಮಂಟಪಗಳು ಬಹು ಮನೋಹರವಾಗಿ ಕಂಗೊಳಿಸುತ್ತಿದ್ದವು. ಹಣ್ಣಾದ ಎಲೆಗಳನ್ನೂ, ಒಣಗಿದ ಟೊಂಗೆಗಳನ್ನೂ, ಹಸಿಯಿಲ್ಲದ ಮಡಿಗಳನ್ನೂ ಆ ತೋಟದಲ್ಲಿ ಕಾಣುವದು ದುರ್ಲಭವು. ಮಧ್ಯದಲ್ಲಿ ಅಲ್ಲಲ್ಲ ಹಾರುತ್ತಿರುವ ಕಾರಂಜಿಗಳ ತುಂತುರ್ವನಿಗಳಿಂದ ವ್ಯಕ್ತವಾಗುವ ಇಂದ್ರಧನುಷ್ಯ ಗಳು ನೋಡುವವರ ಮನಸ್ಸನ್ನು ಬಹಳವಾಗಿ ರಮಿಸುವವು. ಬಂಡುಂಬುವದಕ್ಕಾಗಿ ಭ್ರಮರಗಳು ಅಲ್ಲಿ ತಂಡತಂಡವಾಗಿ ಸಂಚರಿಸುವವು. ವಿಚಿತ್ರವಾದ ವರ್ಣಗಳುಳ್ಳ ಸುಂದರ ಪಕ್ಷಿಗಳು ಮಧುರ ಶಬ್ದಮಾಡುತ್ತಿದ್ದವು. ಅಲ್ಲಲ್ಲಿ ಕುಳಿತುಕೊಳ್ಳುವದಕ್ಕಾಗಿ ವಿಚಿತ್ರಾಕಾರದ ಆಸನಗಳೂ, ಪೀಠಗಳೂ ನಿರ್ಮಿಸಲ್ಪಟ್ಟಿದ್ದವು. ಎಲ್ಲ ಕಡೆಗೆ ಪುಷ್ಪಗಳ ಸುಗಂಧವು ಇಡಗಿತ್ತು. ಗಾಳಿಯು ಆ ಸುಗಂಧದ ಭಾರದಿಂದ ದಣಿದು ಹೋಗಿರುವಂತೆ ಮೆಲ್ಲನೆ ಸುಳಿಯುತ್ತಿತ್ತು. ದುಃಖದಿಂದ ಸಂತಪ್ತನಾಗಿದ್ದ ನಾನು ಹಸಿವೆ ನೀರಡಿಕೆಗಳನ್ನು ಮರೆತು ಚಕಿತನಾಗಿ ಆ ವನದ ಸೊಬಗನ್ನು ನೋಡಹತ್ತಿದೆನು.

ದ್ವಿಜೋತ್ತಮಾ, ಆ ತೋಟವನ್ನು ಎಷ್ಟು ನೋಡಿದರೂ ನನ್ನ ಮನಸ್ಸು ದಣಿಯಲೊಲ್ಲದು. ಕಡೆಗೆ ಬಹು ಪ್ರಯಾಸದಿಂದ ಮುಂದಕ್ಕೆ ಸಾಗಿ, ಸ್ವಲ್ಪ ದೂರ ಹೋದ ಕೂಡಲೆ ಒಂದು ರಮ್ಯವಾದ ಸರೋವರವು ನನ್ನ ಕಣ್ಣಿಗೆ ಬಿತ್ತು. ಅದರ ದಂಡೆಗಳು ಶುಭ್ರವಾದ ಉಸುಬಿನ ದಿನ್ನೆಗಳಿಂದ ಮನೋಹರವಾಗಿದ್ದು, ಆ ದಿನ್ನೆಗಳ ಮೇಲೆ ಹಂಸಪಕ್ಷಿಗಳ ಹೆಜ್ಜೆಗಳು ಸಾಲ್ಗೊಂಡು ಮೂಡಿದ್ದವು. ಆ ಸರೋವರದೊಳಗಿನ ನೀರು ಬಹು ನಿರ್ಮಲವಾಗಿದ್ದದ್ದರಿಂದ, ಅದರ ತಳದೊಳಗಿನ ಉಸುಬು-ಹರಳುಗಳು ಸ್ಪಷ್ಟವಾಗಿ ಕಾಣುತ್ತಿದ್ದವು. ಸೂರ್ಯನು ನೆತ್ತಿಯ ಮೇಲೆ ಬಂದಿದ್ದಾನೆ; ಆತನ ತಾಪಕ್ಕೆ ಪಕ್ಷಿಗಳು ತಮ್ಮ ಕಲಕಲಾಟವನ್ನು ನಿಲ್ಲಿಸಿ, ದಟ್ಟವಾದ ಎಲೆಗಳುಳ್ಳ ಟೊಂಗೆಗಳ ಮಧ್ಯದಲ್ಲಿ ಕುಳಿತುಕೊಳ್ಳತೊಡಗಿವೆ; ಪಾರಿವಾಳ ಮೊದಲಾದ ಕೆಲವು ಪಕ್ಷಿಗಳು ನೀರಲ್ಲಿ ಮೈ ತೋಯಿಸಿಕೊಡವಿ ಬಿಸಿಲು ಕಾಸಿಕೊಳ್ಳಹತ್ತಿವೆ; ದೂರ ಅತ್ತ ಕಡೆಯಲ್ಲಿ ಚಿಗರೆ, ಸಾರಂಗ

ಮೊದಲಾದವು ನೀರು ಕುಡಿಯತೊಡಗಿವೆ; ಹಂಸ, ಬೆಳ್ಳಕ್ಕಿ, ನೀರಗೋಳಿ ಮೊದಲಾದವುಗಳ ಜಲಕ್ರೀಡೆಗಳು ನಡೆದವೆ; ಸರೋವರದ ದಂಡೆಗುಂಟ ಗಿಡಗಳ ಕಿರಿನೆರಳು ಬಿದ್ದವೆ; ಇಂಥ ಮನೋಹರವಾದ ನೋಟದಿಂದ ಸಂತುಷ್ಟನಾದನಾನು, ಆತುರದಿಂದ ಸರೋವರದಲ್ಲಿ ಕಾಲಿಟ್ಟೆನು. ಮಧ್ಯಾಹ್ನದಲ್ಲಿಯೂ ಅದರ ನೀರು ತಂಪಾಗಿದ್ದವು. ಸ್ಫಟಿಕದಂತೆ ನಿರ್ಮಲವಾದ ಆ ಸರೋವರದ ನೀರಿನ ಸವಿಯನ್ನು ವರ್ಣಿಸಲಾರೆನು. ನಾನು ಆ ಸರೋವರದಲ್ಲಿ ಸ್ನಾನಮಾಡಿ ಉಟ್ಟಿದ್ದೊಂದು ವಸ್ತ್ರವನ್ನು ಹೇಗೋ ನಿರ್ಮಲವಾಗಿ ಒಗೆದು ಒಣಗಿಸಿ ಉಟ್ಟುಕೊಂಡು ಅಲ್ಲೇ ಸಮೀಪದಲ್ಲಿ ಕೈಗೆ ಸಿಲುಕುವಂತೆ ಇದ್ದ, ಕೆಲವು ಹಣ್ಣುಗಳನ್ನು ತಿಂದು ಕ್ಷುಧಾಶಾಂತಿಯನ್ನು ಮಾಡಿಕೊಂಡೆನು. ಆ ತೋಟದಲ್ಲಿ ಹೊಕ್ಕು ನಾಲ್ಕಯ್ದು ತಾಸುಗಳಾದರೂ, ಮನುಷ್ಯ ಸಂಚಾರವಿಲ್ಲದ್ದನ್ನು ನೋಡಿ, ನನಗೆ ಪರಮಾಶ್ಚರ್ಯವಾಯಿತು. ಕ್ಷುಧಾಶಾಂತಿಯಾದ್ದರಿಂದಲೂ, ಮೂರು ನಾಲ್ಕು ದಿನಗಳಿಂದ ಕಣ್ಣುತುಂಬ ನಿದ್ದೆಯಿಲ್ಲದ್ದರಿಂದಲೂ, ಮನಸ್ಸಿನ ಸಂತಾಪವು ಕೆಲಮಟ್ಟಿಗೆ ಕಡಿಮೆಯಾದದ್ದರಿಂದಲೂ, ಕಷ್ಟಗಳ ಪರಂಪರೆಯಿಂದ ಎದೆಯು ಕೆಚ್ಚುಗಟ್ಟಿದ್ದರಿಂದಲೂ ನನಗೆ ತೂಕಡಿಕೆ ಬರಹತ್ತಿತು. ಹಾಸಿಕೊಳ್ಳಲಿಲ್ಲ, ಹೊದ್ದುಕೊಳ್ಳಲಿಲ್ಲ! ನಾನು ಅಲ್ಲಿಯೇ ಸರೋವರದ ದಂಡೆಯ ಮೇಲಿರುವ ಒಂದು ಸುಂದರವಾದ ಶಿಲಾಮಂಟಪಕ್ಕೆ ಹೋಗಿ, ಅದರ ತಂಪಾದ ಹಾಸುಗಲ್ಲ ಮೇಲೆ ಸುಖವಾಗಿ ಮಲಗಿದೆನು. ಮುಂದೆ ಸ್ವಲ್ಪ ಹೊತ್ತಿನಲ್ಲಿಯೇ ನನಗೆ ಗಾಢನಿದ್ರೆಯು ಹತ್ತಿತು!

“ ಮೆತ್ತಗೆ ಮಾಡಿ ಮಲಗು ” ಎಂಬ ಮಾತಿನ ನಿಜವಾದ ಅರ್ಥದ ಅನುಭವವು ನನಗೆ ಆಗಿದ್ದಿಲ್ಲ. ದಣಿದ ಮನುಷ್ಯನಿಗೆ ಗಡದ್ದು ನಿದ್ದೆ ಹತ್ತುತ್ತದೆಂಬದನ್ನು ನಾನು ಅಂದು ಮನಗಂಡೆನು. ಮಲಗಿದ್ದೊಂದೇ ಎಚ್ಚರವು; ಮುಂದೆ ಸುಮಾರು ನಾಲ್ಕೈದು ತಾಸುಗಳಾದ ಬಳಿಕ ಎಚ್ಚತ್ತು ನೋಡಲು, ನನಗೆ ಶಿಲಾಮಂಟಪವೂ, ಸರೋವರವೂ, ತೋಟವೂ ಒಂದೂ ಕಾಣಿಸಲಿಲ್ಲ. ಆಗ ನಾನು ಚನ್ನಾಗಿ ಕಣ್ಣುಗಳನ್ನು ತೆರೆದು ನಾಲ್ಕೂ ಕಡೆಗೆ ದಿಟ್ಟಿಸಿ ನೋಡಿ, ನಾನೊಂದು ಭವ್ಯವಾದ ಮಂದಿರದಲ್ಲಿ ಮಲಗಿರುವೆನೆಂದು ಮನಗಂಡೆನು! ಬ್ರಾಹ್ಮಣಶ್ರೇಷ್ಠಾ, ನನಗೆ ಹುಚ್ಚು ಹಿಡಿದುಹೋಯಿತು. ಆಗ ಸಂಧ್ಯಾಕಾಲವಿದ್ದದ್ದರಿಂದ ಆ ಮಂದಿರದಲ್ಲಿ ವಿದ್ಯುಜ್ಜ್ಯೋತಿಗಳು ಅಲ್ಲಲ್ಲಿ ಉರಿಯುತ್ತಿದ್ದವು. ನಾನು ಮಲಗಿಕೊಂಡಿದ್ದ ಮಂಚಕ್ಕೆ ಚಿನ್ನದ ತಗಡು ಕೂಡ್ರಿಸಿ, ನಡನಡುವೆ

ಬೆಲೆಯುಳ್ಳ ರತ್ನಗಳನ್ನು ಕೆಚ್ಚಿದ್ದರು. ಮಂದಿರದ ಮಾಳಿಗೆಯ ಒಳಮುಗ್ಗಲಲ್ಲಿ ಸುವರ್ಣದ ಚಿತ್ರ-ವಿಚಿತ್ರವಾದ ಬಳ್ಳಿಗಳು, ಎಲೆ-ಹೂ-ಕಾಯಿಗಳಿಂದ ಮನೋಹರವಾಗಿ ಒಪ್ಪುತ್ತಿದ್ದವು. ಗೋಡೆಗಳು ಬಗೆಬಗೆಯ ಸುಂದರ ಚಿತ್ರಗಳಿಂದ ರಮ್ಯವಾಗಿ ತೋರುತ್ತಿದ್ದವು. ನೆಲಕ್ಕೆ ಚಿತ್ರ ವಿಚಿತ್ರವಾದ ರತ್ನಗಂಬಳಿಯನ್ನು ಹಾಸಿ, ಕೂಡ್ರುವದಕ್ಕಾಗಿ ಅಲ್ಲಲ್ಲಿ ರತ್ನಕೆಚ್ಚಿದ ಸುಂದರವಾದ ಆಸನಗಳನ್ನು ವ್ಯವಸ್ಥೆಯಿಂದ ಇಟ್ಟಿದ್ದರು. ವಿಪ್ರವರ್ಯ, ಆ ಮಂದಿರದ ವರ್ಣನೆಯನ್ನು ಎಷ್ಟು ಮಾಡಿದರೂ ಸ್ವಲ್ಪವೇ ಅದೆ. ಇಂದ್ರಭವನಕ್ಕೆ ಸರಿಯಾದ ಮಂದಿರದಲ್ಲಿ, ಇದೇನು ವಿಚಿತ್ರವೆಂದು ವಿಚಾರಶೂನ್ಯನಾಗಿ ದಂಗುಬಡೆದು ನಾನು ಕುಳಿತಿದ್ದೆನು, ಎದುರಿಗೆ ನನ್ನ ಧನಸ್ಸು ಕಣ್ಣಿಗೆ ಬಿತ್ತು. ಅದರ ಬಳಿಯಲ್ಲಿಯೇ ಬಾಣಗಳಿಂದ ತುಂಬಿದ ನನ್ನ ಬತ್ತಳಿಕೆಯು ಇಟ್ಟಿತ್ತು. ನನ್ನ ಎಲ್ಲ ಉಡಿಗೆ-ತೊಡಿಗೆಗಳು, ಆಭರಣಗಳು ಅಲ್ಲಿ ಇದ್ದವು! ಆಹಾ! ನಾನು ಮೃದುವಾದ ಹಾಸಿಗೆಯ ಮೇಲೆ ಕುಳಿತಿದ್ದೇನೆ, ಸ್ವಚ್ಛವಾದ ಪ್ರಕಾಶವು ಬಿದ್ದದೆ, ನೋಡಿದತ್ತೆಲ್ಲ ರತ್ನಗಳು ಲಕಲಕನೆ ಹೊಳೆದು ಕಣ್ಣು ಕುಕ್ಕುತ್ತವೆ, ಅಡವಿಯಲ್ಲಿ ಕಳೆದು ಹೋಗಿದ್ದ ನನ್ನ ಧನುರ್ಬಾಣಗಳೂ, ವಸ್ತ್ರಾಭರಣಗಳೂ ಎದುರಿಗೆ ಇಟ್ಟವೆ, ಇಷ್ಟೆಲ್ಲ ಇದ್ದರೂ ಜನರ ಸುಳುವೇ ಇಲ್ಲ! ಒಮ್ಮಿಂದೊಮ್ಮೆ ಮಂದಿರದಲ್ಲಿ ನನ್ನ ಪ್ರವೇಶವು ಹೇಗಾಯಿತೆಂಬದು ನನಗೆ ತಿಳಿಯಲೊಲ್ಲದು; ಅರಣ್ಯದಲ್ಲಿ ಕಳೆದು ಹೋಗಿದ್ದ ನನ್ನ ಪದಾರ್ಥಗಳು ತಾವಾಗಿ ಹೇಗೆ ಬಂದವೆಂಬದು ಗೊತ್ತಾಗಲೊಲ್ಲದು; ಅಂದ ಬಳಿಕ ಮನುಷ್ಯನು ಭ್ರಮಿಷ್ಟನಾಗಲಿಕ್ಕೆ ಇದಕ್ಕೂ ಹೆಚ್ಚಿಗೆ ಏನು ಬೇಕು? ಆಗ ನಾನು ಹುಚ್ಚನಂತೆ ನನ್ನ ಕಿವಿಯನ್ನು ನಾನೇ ಹಿಂಡಿಕೊಂಡೆನು. ಮಂಚದ ಮೇಲೆ ಕುಳಿತವನು ದಿಗ್ಗನೆ ಎದ್ದು ಭ್ರಮಿಷ್ಟನಂತೆ ತಿರುಗಾಡಿದೆನು. ಎದುರಿಗೆ ಇಟ್ಟಿದ್ದ ನನ್ನ ಧನುಸ್ಸನ್ನು ತಕ್ಕೊಂಡು, ಅದಕ್ಕೆ ಬಾಣಗಳನ್ನು ಹೂಡಿ ಕಿವಿಯವರೆಗೆ ಜಗ್ಗಿ, ಯಾವ ಉದ್ದೇಶವೂ ಇಲ್ಲದೆ ಕಿಡಿಕಿಯೊಳಗಿಂದ ಬೈಲಿಗೆ ಹೊಡೆಯಹತ್ತಿದೆನು. ಇದೇನು ಭೂತಚೇಷ್ಟೆಯೋ, ಸ್ವಪ್ನವೋ, ನನಗೆ ಹುಚ್ಚು ಹಿಡಿಯಿತೋ, ನಿಜವಾಗಿಯೇ ಇಂಥ ವೈಭವವು ನನಗೆ ಪ್ರಾಪ್ತವಾಯಿತೋ ಇವೇ ಮೊದಲಾದ ವಿಚಾರಗಳ ಗಲಿಬಿಲಿಯಿಂದ, ಏನೂ ತಿಳಿಯದೆ ನಾನು ಮೂಢನಾಗಿ ಸುಮ್ಮನೆ ಕುಳಿತುಬಿಟ್ಟೆನು; ಆದರೆ ಆ ಮಂದಿರದಲ್ಲಿಯ ಸುವ್ಯವಸ್ಥೆ, ಸ್ವಚ್ಛತೆ, ಪದಾರ್ಥಗಳ ಉತ್ತಮವಾದ ರಚನೆ ಇವುಗಳನ್ನು ಮನಸ್ಸಿನಲ್ಲಿ ತಂದರೆ,

ಇದೇ ಈಗ ಇಲ್ಲಿ ಮನುಷ್ಯರು ಇದ್ದರೆಂಬಂತೆ ನನಗೆ ತೋರುತ್ತಿತ್ತು.

ಈ ಪ್ರಕಾರ ನಾನು ವಿಚಾರಮಗ್ನನಾಗಿರಲು, ಅಕಸ್ಮಾತ್ತಾಗಿ ಒಬ್ಬ ಸ್ತ್ರೀಯು ಅಲ್ಲಿಗೆ ಬಂದಳು. ಕೂಡಲೆ ನನ್ನ ಮೈ ಜುಮ್ಮೆಂದು ಕೂದಲು ಗಳು ನೆಟ್ಟಗಾದವು. ಭಯದಿಂದ ನಾನು ಕಣ್ಣುಗಳನ್ನು ಮುಚ್ಚಿದೆನು. ಅಷ್ಟರಲ್ಲಿ ನನ್ನ ಮನಸ್ಸು ಸ್ವಲ್ಪ ಸ್ಥಿರವಾಗಲು, ನಾನು ಧೈರ್ಯತಾಳಿ ಕಣ್ಣು ತೆರೆದು ಮಂಚದಮೇಲೆ ಸುಮ್ಮನೆ ಕುಳಿತುಕೊಂಡೆನು. ನನ್ನನ್ನು ನೋಡಿ, ಆ ಸ್ತ್ರೀಯೂ ಬೆರಗಾಗಿರುವಳೆಂಬದನ್ನು ಅವಳ ಮುಖಚರ್ಯವು ಹೇಳುತ್ತಿತ್ತು. ನಮ್ಮಿಬ್ಬರ ಏಕದೃಷ್ಟಿಯಾಗಲು, ಅವಳು ಮುಂದುಗಾಣದೆ ಸುಮ್ಮನೆ ನಿಂತುಕೊಂಡಳು. ಆಗ ನಾನು ಆ ಸ್ತ್ರೀಯನ್ನು ಕುರಿತು—ಅಮ್ಮಾ, ನೀವು ಯಾರು? ಈ ಮಂದಿರವು ಯಾರದು? ಇಲ್ಲಿಗೆ ನಾನು ಹೇಗೆ ಬಂದೆನು? ಎಂದು ಪ್ರಶ್ನಮಾಡಲು, ಆ ಸ್ತ್ರೀಯು—ಯಕ್ಷ-ಗಂಧರ್ವಾದಿಗಳು ಈ ಮಂದಿರ ವನ್ನು ಪ್ರವೇಶಿಸಲಿಕ್ಕೆ ಅಯೋಗ್ಯರೂ, ಅಶಕ್ತರೂ ಆಗಿರಲು, ದುರ್ಬಲರಾದ ಮನುಷ್ಯರ ಪ್ರವೇಶವಾದದ್ದನ್ನು ನೋಡಿ ನನಗೆ ಆಶ್ಚರ್ಯವಾಗುತ್ತದೆ! ಸಾಂಪ್ರತದ ಸ್ಥಿತಿಯು ಸಮಾಧಾನಕರವಿದ್ದರೂ, ಇನ್ನು ಸ್ವಲ್ಪ ವೇಳೆಯಲ್ಲಿಯೇ ಭಯವುಂಟಾಗುವದೆಂಬದನ್ನು ಮರೆಯಲಾಗದು. ಸ್ವಂತ ಸಾಮರ್ಥ್ಯದಿಂದ ಈ ಮಂದಿರದಲ್ಲಿ ಪ್ರವೇಶಮಾಡುವ ಯೋಗ್ಯತೆಯು, ಮನುಷ್ಯಮಾತ್ರರಲ್ಲಿ ಇಲ್ಲೆಂಬದನ್ನು ಈ ಮೊದಲೇ ನಾನು ನಿಶ್ಚಯಿಸಿದ್ದೇನೆ. ಈಗಾಗಿದ್ದ ಮನು ಷ್ಯಪ್ರವೇಶವು ನರಮಾಂಸಪ್ರಿಯನೂ, ನನ್ನ ಹಾಗು ಈ ಮಂದಿರದ ಒಡೆ ಯನೂ ಆದ, ಮೇಘನಾದನೆಂಬ ರಾಕ್ಷಸರಾಜನ ಮೋಸದಿಂದ ಆಗಿರಬಹುದು. ಮುಂದೆ ನಿಶ್ಚಯವಾಗಿ ಒದಗತಕ್ಕ ಸ್ವಜಾತೀಯ ಪ್ರಾಣಿಯ ಕೊಲೆಗಾಗಿ ನಾನು ಮರಗುತ್ತೇನೆ. ಪತಂಗಹುಳವು ತನ್ನ ಮರಣಕ್ಕೆ ಕಾರಣವಾದ ದೀಪವನ್ನು ನೋಡಿ ಹಿಗ್ಗುವಂತೆ, ಈ ಮಂದಿರದ ಶೋಭೆಯನ್ನು ನೋಡಿ ಆನಂದಪಡುವದರಲ್ಲಿ ಏನು ಅರ್ಥವದೆ? ಎಂದು ನುಡಿದಳು.

ದ್ವಿಜೋತ್ತಮಾ, ಈ ಪ್ರಕಾರ ಆ ಸ್ತ್ರೀಯು ಆಡಿದ ಮಾತುಗಳನ್ನು ಕೇಳಿದಬಳಿಕಂತು, ನನ್ನ ಕೈಕಾಲುಗಳು ತಣ್ಣಗಾದವು. ಆ ಮಂದಿರದಲ್ಲಿ ನನ್ನ ಪ್ರವೇಶವು ಹೇಗಾಯಿತೆಂಬದು ನನಗೆ ತಿಳಿಯದ್ದರಿಂದ, ಇದೇನು ಭೂತ ಚೇಷ್ಟೆಯೋ, ರಾಕ್ಷಸಮಾಯೆಯೋ ಎಂದು ನಾನು ಮೊದಲೇ ಶಂಕಿಸುತ್ತಿ

ಷ್ಟೆನು. ಆ ಶಂಕೆಯನ್ನು ಸ್ತ್ರೀಯಾಡಿದ ಮಾತುಗಳು ನಿಜವಾಗಮಾಡಿದ್ದರಿಂದ, ನನ್ನ ಸ್ಥಿತಿಯು ಹೇಗಾಗಿರಬಹುದೆಂಬದರ ಕಲ್ಪನೆಯನ್ನು ನೀನೇ ಮಾಡು. ಕೆಲಹೊತ್ತಿನವರೆಗೆ ಭಯದಿಂದ ಹೌಹಾರಿ ನಾನು ಸುಮ್ಮನೆ ಕುಳಿತುಕೊಂಡೆನು. ಈ ಸ್ಥಳದಿಂದ ಜೀವ ಉಳಿಸಿಕೊಂಡು ಪಾರಾಗಬೇಕಾದರೆ, ಏನು ಉಪಾಯ ಮಾಡಬೇಕೆಂಬ ವಿಚಾರದಲ್ಲಿ ನನ್ನ ಮನಸ್ಸು ತೊಡಗಿತು. ಒಮ್ಮೆ ನಾನು ಈಗಲೇ ಈ ಸ್ಥಳದಿಂದ ಓಡಿಹೋಗಬೇಕೆಂದು ನಿಶ್ಚಯಿಸಿದೆನು; ಆದರೆ ನಾನು ಆ ಮಂದಿರಕ್ಕೆ ಹೇಗೆ ಯಾವ ಮಾರ್ಗದಿಂದ ಬಂದೆನೆಂಬದೇ ನನಗೆ ಗೊತ್ತಿಲ್ಲದ್ದರಿಂದ ನನ್ನ ಆ ವಿಚಾರವು ತಾನೇ ನಿಷ್ಫಲವಾಯಿತು. ಮತ್ತೊಮ್ಮೆ ನಾನು, ಪ್ರಾಣವನ್ನು ರಕ್ಷಿಸಿಕೊಳ್ಳುವದಕ್ಕಾಗಿ ಆ ಸ್ತ್ರೀಯನ್ನೇ ಪ್ರಾರ್ಥಿಸಬೇಕೆಂದು ನಿಶ್ಚಯಿಸಿದೆನು; ಆದರೆ ಪರಾಧೀನಳಾದ ಆ ಅಬಲೆಯಿಂದ ಇಂಥ ಸಾಹಸಕೃತ್ಯವು ಆಗಲಾರದೆಂದು ನನಗೆ ತೋರಿದ್ದರಿಂದ, ನಾನು ಆ ಹವ್ಯಾಸಕ್ಕೆ ಹೋಗಲಿಲ್ಲ. ಈಪ್ರಕಾರ ಭಯದಿಂದ ವಿಚಾರಗೆಟ್ಟು ಕಂಗಾಲಾಗಿ ಅಸಂಭವ ಕಲ್ಪನೆಗಳನ್ನು ಮಾಡುತ್ತ ಕುಳಿತಿರಲು, ಸ್ವಾಭಾವಿಕವಾಗಿ ನನ್ನ ಮೇಲೆ ಭಯದ ಅಧಿಕಾರವು ಕೆಲಮಟ್ಟಿಗೆ ಕಡಿಮೆಯಾಯಿತು; ಅನ್ಯರ ಸಹಾಯದಿಂದ ಪಾರಾಗುವ ಆಶೆಯು ಉಳಿಯಲಿಲ್ಲ; ನನ್ನಿಂದ ಮಾಡಲ್ಪಟ್ಟ ಧನುರ್ವಿದ್ಯೆಯ ಅಭ್ಯಾಸದ ಅಭಿಮಾನವು ನನ್ನಲ್ಲಿ ತಲೆದೋರಿತು. ಆಗ ನಾನು ಆತ್ಯಾವೇಶದಿಂದ ಆ ಸ್ತ್ರೀಯನ್ನು ಕುರಿತು ನುಡಿದೆನೇನಂದರೆ—ತಂಗೀ, ನನ್ನ ಹಿತವನ್ನು ಚಿಂತಿಸಿದ್ದಕ್ಕಾಗಿ ನಾನು ನಿನ್ನ ಉಪಕಾರವೆಣಿಸುವೆನು; ಆದರೆ ನನ್ನ ಸಲುವಾಗಿ ನೀನು ಚಿಂತಿಸಬೇಡ. ಯಕ್ಷ—ಗಂಧರ್ವಾದಿಗಳಿಂದಾಗದ ಕೆಲಸಗಳನ್ನು ಮನುಷ್ಯರು ಮಾಡಿದ ಹಲವು ಉದಾಹರಣಗಳನ್ನು ಕೇಳಿಲ್ಲವೆ? ತನ್ನನ್ನು ಪ್ರಾಣಸಂಕಟದಲ್ಲಿ ಕೆಡವಿಕೊಳ್ಳಬೇಕೆಂಬ ಇಚ್ಛೆಯು ಯಾರಿಗಾದರೂ ಇರಬಹುದೋ? ನನ್ನ ಸಾಮರ್ಥ್ಯದಿಂದ ನಾನು ಈ ಮಂದಿರವನ್ನು ಪ್ರವೇಶಿಸಿರುವದಿಲ್ಲೆಂಬದು ನಿಜವು; ಆದರೆ ಮೋಸವು ಮೇಘನಾದದೈತ್ಯನಿಂದಲೇ ಆಗಿರಲಿ, ಮತ್ತೆ ಯಾರಿಂದಲೇ ಆಗಿರಲಿ, ಈ ಧನುಸ್ಸು ನನ್ನ ಕೈಯಲ್ಲಿರುವವರೆಗೆ ಅದಾವನು ನನಗೆ ಕೇಡು ಬಗೆಯುವನು? ಏನೂ ಚಿಂತೆಯಿಲ್ಲ, ಹೊತ್ತು ಬಂದಾಗ್ಗೆ ನೋಡಲಿಕ್ಕೆ ಬಂದೀತು. ಪತಂಗದ ಹುಳದಂತೆ ವೈರಿಯತಾಪಕ್ಕೆ ಗುರಿಯಾಗಿ ಪ್ರಾಣಕೊಡಲಿಕ್ಕೆ ನಾನು ಕ್ಷುದ್ರ ಕೀಟಕವಲ್ಲ!

ಈ ಪ್ರಕಾರ ಆವೇಶದಿಂದ ನುಡಿದು ನಾನು ಧನುಸ್ಸನ್ನು ಮೇಲಕ್ಕೆತ್ತಿ ಮಂಚದಿಂದೇಳಲು, ಆ ಸ್ತ್ರೀಯು ಗಡಗಡನೆ ನಡುಗಿದಳು. ಆ ಅಬಲೆಗೆ ಹೀಗೆ ಭಯವನ್ನುಂಟುಮಾಡಬೇಕೆಂದು ನಾನು ಇಚ್ಛಿಸಿದವನಲ್ಲ; ಆದರೆ ಆವೇಶದ ಭರದಲ್ಲಿ ಸೌಜನ್ಯಕ್ಕೆ ಒಪ್ಪದ ಈ ಕೆಲಸವು ನನ್ನಿಂದಾಯಿತು! ಆ ಸ್ತ್ರೀಯು ಇನ್ನೂ ಆ ಮಂದಿರದಿಂದ ಹೋಗತಕ್ಕವಳು, ಅಷ್ಟರಲ್ಲಿ ಅಧಿಕಲಾವಣ್ಯಯುಕ್ತಳಾದ ಮತ್ತೊಬ್ಬ ಸ್ತ್ರೀಯು, ತಾರಾಗಣದನಡುವಿನ ಚಂದ್ರನಂತೆ ಅಧಿಕಮೋಹಕಳಾಗಿ ದಾಸಿಯರೊಡನೆ ಅಲ್ಲಿಗೆ ಬಂದಳು. ನಾನು ಬಹುಜನ ರಾಜಪುತ್ರಿಯರನ್ನು ನಿರಾಕರಿಸಿದವನಾಗಿದ್ದರೂ, ಆ ಭುವನಸುಂದರಿಯ ರೂಪವೂ, ಸೌಮ್ಯಮುದ್ರೆಯೂ ನನ್ನ ಮನಸ್ಸನ್ನು ಎಳೆಕೊಳ್ಳದೆಬಿಡಲಿಲ್ಲ! ಆ ಮೋಹಕ ಮೂರ್ತಿಯಲ್ಲಿ ನಟ್ಟ ನನ್ನ ದೃಷ್ಟಿಗಳನ್ನು ತಕ್ಕೊಳ್ಳುವದಕ್ಕೆ, ವಿಶ್ವಪ್ರಯತ್ನ ಮಾಡಿದರೂ ಅವು ನನ್ನಅಧೀನವಾಗಲಿಲ್ಲ. ಅವಳ ಸುಂದರವಾದ ಅವಯವಗಳೂ, ಸೂಕ್ಷ್ಮತನವೂ, ಮೈಸೊಬಗೂ, ಮುಖದ ಕಾಂತಿಯೂ ನನ್ನಲ್ಲಿ ಕಾಮವಿಕಾರವನ್ನುಂಟುಮಾಡಿದವು! ಇಲ್ಲಿಯವರೆಗೆ ನನಗೆ ಈ ಮೋಹವಿಕಾರದ ಅನುಭವವಿದ್ದಿಲ್ಲ. ಮೋಹಪಾಶದಲ್ಲಿ ಬೀಳಬಾರದೆಂದು ನಾನು ಬಹಳ ಯತ್ನಿಸಿದರೂ, ಅದೆಲ್ಲ ನಿಷ್ಫಲವಾಗಿ, ಕಡೆಯಲ್ಲಿ ಮನ್ಮಥನು ತನ್ನ ಸಾಮರ್ಥ್ಯವನ್ನು ನನ್ನಮೇಲೆ ಪೂರ್ಣವಾಗಿ ನಡಿಸಿದನು. ಆಗ ನಾನು ಮನಸ್ಸಿನಲ್ಲಿ—ಏನು ಅದ್ಭುತಸೌಂದರ್ಯವಿದು! ಈ ಮೂರ್ತಿಯ ರಚನೆಯಲ್ಲಿ ಸೃಷ್ಟಿಕರ್ತನ ಚಾತುರ್ಯವು, ಯೋಗ್ಯವಾಗಿ ವೆಚ್ಚಮಾಡಲ್ಪಟ್ಟಿರುವದೆಂದು ಹೇಳಬಹುದು. ಆಹಾ! ನಾಸಿಕದ ಸರಳತ್ವವನ್ನೂ, ನೇತ್ರಗಳ ವಿಸ್ತಾರವನ್ನೂ, ಮುಖದ ಸೌಂದರ್ಯವನ್ನೂ, ಉಳಿದ ಶರೀರಾವಯವಗಳ ಯಥಾಯೋಗ್ಯರಚನೆಯನ್ನೂ ಎಷ್ಟೆಂತ ವರ್ಣಿಸಲಿ! ಈ ಸೌಂದರ್ಯರಾಶಿಯು ಯಾವ ಪುಣ್ಯಪುರುಷನಿಂದ ಸುಲಿದುಸೂರೆಗೊಳ್ಳುವದೋ, ಅವನೇ ಧನ್ಯನು, ಅವನೇ ಭಾಗ್ಯಶಾಲಿಯು; ಅವನೇ ಕೃತಾರ್ಥನು. ಅವನ ಉತ್ಕಟಪುಣ್ಯವನ್ನು ಎಣಿಸುವ ಯೋಗ್ಯತೆಯು ಯಾರಿಗಿರುವದು?



## ೬ ನೆಯ ಪ್ರಕರಣ.

# ಪಾಣಿಗ್ರಹಣ.



ಈ ಮೇರೆಗೆ ನಾನು ಆ ಸುಂದರಿಯ ಸೌಂದರ್ಯಾತಿಶಯಕ್ಕೆ ಬೆರಗಾಗಿರಲು, ಆಕೆಯು ನನ್ನ ಹತ್ತರ ನಿಂತಿದ್ದ ಸ್ತ್ರೀಯನ್ನು ಕುರಿತು—“ ಏನು, ಸುಮಧ್ಯಮೇ, ಇದೇನು ಆಟವನ್ನು ಹೂಡಿರುತ್ತೀ? ನಿನ್ನ ಸಂಗಡ ಮಾತಾಡುತ್ತಿದ್ದ ಈ ಪರಪುರುಷನು ಯಾರು? ಯಾವ ಧೈರ್ಯದಿಂದ ಆತನನ್ನು ಇಲ್ಲಿ ಬರಮಾಡಿದೆ? ಮೂರ್ಖಳೇ, ಇಂಥ ಹುಡುಗಾಟಿಕೆಯು ನನಗೆ ಸೇರುವದಿಲ್ಲೆಂಬದನ್ನು ನೀನು ಅರಿಯೆಯಾ? ಈ ತರದ ಅಸಹ್ಯ ಕೃತ್ಯಗಳಿಂದ ಯಾರ ಮಾನಭಂಗ ಮಾಡಬೇಕೆಂದು ಎಣಿಸಿರುತ್ತೀ? ಇರಲಿ, ನಿನ್ನ ಅಪರಾಧಕ್ಕೆ ಸರಿಯಾದ ಶಿಕ್ಷೆಯನ್ನು ಮಾಡಿಸದೆ ಬಿಡುವದಿಲ್ಲ. ಯಾವ ರಾಕ್ಷಸರಾಜನ ಶಾಸನವು ಸಕಲ ಪ್ರಾಣಿಗಳಿಗೂ ಭಯಪ್ರದವಾಗಿರುವದೋ, ಅಂಥವನನ್ನು ನೀನು ಗಣನೆಗೆ ಕೂಡ ತರಲಿಲ್ಲವಲ್ಲ! ನಾಚಿಕಿಯಿಲ್ಲದವಳೇ, ಹೋಗು, ನನ್ನೆದುರಿಗೆ ನಿಲ್ಲಬೇಡ. ನಿನ್ನ ಮುಖಾವಲೋಕನದಿಂದ ನನ್ನ ಕ್ರೋಧಾಗ್ನಿಯು ಪ್ರಜ್ವಲಿಸುತ್ತದೆ.”

ಹೀಗಾ ಸುಂದರಿಯು ಸಿಟ್ಟಿನಿಂದ ಮಾತಾಡಲು, ಸುಮಧ್ಯಮೆಯು ನಡಗುತ್ತ ಕೈಜೋಡಿಸಿನಿಂತು—ಮಹಾತ್ಮಳೇ, ನಿನ್ನ ಪುಣ್ಯದಿಂದ ನಮ್ಮ ಕಷ್ಟಗಳು ಹಿಂಗಿರಲು, ನಿನಗೆ ವಿರುದ್ಧವಾದ ಕೆಲಸವನ್ನು ಮಾಡುವದು ನನ್ನಿಂದಾಗಬಹುದೆ? ದಿನದಂತೆ ನಾನು ಮಂದಿರಕ್ಕೆ ಬಂದಾಗ, ಈ ಪುರುಷನು ಆನಂದದಿಂದ ಮಂಚದಮೇಲೆ ಕುಳಿತಿದ್ದನು. ಆತನೊಡನೆ ನಾನು ಹೆಚ್ಚಿಗೆ ಮಾತುಗಳನ್ನು ಸಹ ಆಡಿಲ್ಲ. ಇದರಲ್ಲಿ ನನ್ನ ಅಪರಾಧವಿದ್ದರೆ, ದಯವಿಟ್ಟು ಕ್ಷಮಿಸಬೇಕೆಂದು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ. ಯಾವಾಗಲೂ ನಿನ್ನ ಸೇವೆಯಲ್ಲಿ ತೊಡಗಿರುವ ನನಗೆ, ಇಂಥ ಘೋರಕರ್ಮವನ್ನು ಮಾಡಲಿಕ್ಕೆ ಅವಕಾಶವಾದರೂ ಹೇಗೆ ದೊರೆಯಬೇಕು?

ದಾಸಿಯ ಈ ಮಾತುಗಳನ್ನು ಕೇಳಿ ಆಸುಂದರಿಯು ತನ್ನ ಮನೋಹರವಾದಕಟಾಕ್ಷಗಳನ್ನು ನನ್ನ ಮೇಲೆ ಕೆಡವಿದಳು. ಅವಳ ಸಿಟ್ಟಿನಮಾತುಗಳನ್ನು ಕೇಳಿ ನಾನುಅಸಮಾಧಾನಪಟ್ಟಿದ್ದರೂ, ಆಸುಂದರ ಕಟಾಕ್ಷಗಳು ನನ್ನನ್ನು ಆನಂದಗೊಳಿಸದೆಇರಲಿಲ್ಲ. ದ್ವಿಜೋತ್ತಮಾ, ಆಗಿನ ನನ್ನಸ್ಥಿತಿಯನ್ನು ಏನು ಹೇಳಲಿ? ಬೀಳ ಭೂಮಿಯಲ್ಲಿ ಧಾನ್ಯದ ಬೆಳೆಯು ಭರದಿಂದ ಬರುವಂತೆ, ಇಲ್ಲಿಯ ವರೆಗೆ ಕಾಮವಿಕಾರದ ಉತ್ಪತ್ತಿಗೆ ಆಸ್ಪದಕೊಡದ ನನ್ನ ಮನಸ್ಸಿನಲ್ಲಿ, ಆ ವಿಕಾರವು ಕಸುವಿನಿಂದ ಬೆಳೆಯಿತು. ಅದರ ಬೆಳವಣಿಗೆಯ ಅಬ್ಬರಕ್ಕೆ ನನ್ನ ವಿಚಾರಶಕ್ತಿಯು ಕುಂಠಿತವಾಯಿತು; ನನ್ನ ಮೈ ಮೇಲಿನ ಕೂದಲುಗಳು ನೆಟ್ಟಗಾದವು; ಮೈ ಬೆವರೊಡೆಯಿತು; ದನಿಯು ನಡುಗಹತ್ತಿತು; ಶ್ವಾಸೋಚ್ಛ್ವಾಸದ ವ್ಯಾಪಾರವು ನನ್ನ ಇಚ್ಛೆಗೆ ವಿರುದ್ಧವಾಗಿ ಒತ್ತರದಿಂದ ಸಾಗಹತ್ತಿತು; ನಾನು ನಿರ್ಲಜ್ಜನಾಗಿ ಆ ಮೋಹಕ ಮೂರ್ತಿಯನ್ನು ಎವೆಯಿಕ್ಕದೆ ನೋಡಹತ್ತಿದೆನು. ಇದು ಸೌಜನ್ಯಕ್ಕೆ ಒಪ್ಪುವ ಮಾತಲ್ಲೆಂಬ ಸುವಿಚಾರವು, ಆಗಾಗ್ಗೆ ನನ್ನ ಮನಸ್ಸಿನಲ್ಲಿ ಬರುತ್ತಿದ್ದರೂ, ಮೋಹದ ಪರವಶತೆಯಿಂದ ಅದು ಕೂಡಲೆ ಕುಗ್ಗುತ್ತಿತ್ತು; ಕಡೆಗೆ ಪ್ರಯಾಸದಿಂದ ನನ್ನ ಮನಸ್ಸನ್ನು ಸಮಾಧಾನಗೊಳಿಸಿ, ನನ್ನ ದೃಷ್ಟಿಗಳನ್ನು ಒತ್ತಾಯದಿಂದ ಬೇರೇ ಕಡೆಗೆ ತಿರುಗಿಸಿದೆನು. ಆ ವಿಶಾಲಾಕ್ಷಿಯ ಪ್ರಥಮ ದರ್ಶನವಾದಾಗಲೇ ಅವಳ ಗಾಂಭೀರ್ಯ—ಸೌಂದರ್ಯ—ಕುಲೀನತೆಗಳು ನನ್ನನ್ನು ಪ್ರತ್ಯುತ್ಥಾನಗೊಳಿಸಿದ್ದವು. ಈ ಪ್ರಕಾರ ತಪ್ಪುಗಾರನಂತೆ ಎದ್ದು ನಿಂತಿದ್ದ ನನ್ನನ್ನು ಉದ್ದೇಶಿಸಿ ಆ ಸುಂದರಿಯು ನುಡಿದಳೆಂನಂದರೆ—ಪುರುಷಶ್ರೇಷ್ಠನೇ, ನಿನ್ನ ಮುಖಚರ್ಯದಿಂದ ಕುಲೀನತೆ, ಶೌರ್ಯ, ಸರಳವರ್ತನ ಇವು ವ್ಯಕ್ತವಾಗುತ್ತವೆ. ಇಂಥ ನೀನು ಪರರಮನೆಯಲ್ಲಿ ನಿಶ್ಯಂಕೆಯಿಂದ ವರ್ತಿಸುವದನ್ನು ನೋಡಿ ಆಶ್ಚರ್ಯವಾಗುತ್ತದೆ. ಮನುಷ್ಯಸಂಚಾರಕ್ಕೆ ಯೋಗ್ಯವಲ್ಲದ ಈ ಸ್ಥಳದಲ್ಲಿ ನಿನ್ನ ಪ್ರವೇಶವಾದದ್ದು ಹೇಗೋ ತಿಳಿಯದು. ಇದು ಮೇಘನಾದರಾಕ್ಷಸನ ವಾಸಸ್ಥಳವು. ನೀನು ಇಲ್ಲಿಂದ ಸುರಕ್ಷಿತವಾಗಿ ಪಾರಾಗಲಾರೆ; ಆದರೂ ನನ್ನಿಂದಾದಷ್ಟು ಯತ್ನಮಾಡಿ ನಿನ್ನನ್ನು ಇಲ್ಲಿಂದ ಪಾರಮಾಡುವೆನು. ಬೇಗನೆ ಏಳು, ನನ್ನ ಬೆನ್ನುಹತ್ತಿ ಬಾ. ನಿನಗೆ ಅಪಾಯ ಒದಗಿದಲ್ಲಿ ಒಬ್ಬ ಸುಂದರಿಯ ಸುಖವು ಮಣ್ಣುಗೂಡಬಹುದು. ಜನ್ಮಾಂತರದ ಪಾಪದಿಂದ ನಾನು ದುರ್ನಿವಾರವಾದ ಕಷ್ಟಕ್ಕೆ ಒಳಗಾಗಿದ್ದರೂ, ಎರಡನೆಯ

ವರ ಕಷ್ಟನಿವಾರಣಮಾಡಲು ಯತ್ನಿಸುವದು ನನ್ನ ಕರ್ತವ್ಯವಾಗಿರುತ್ತದೆ.

ಹೀಗೆ ಆ ಸುಂದರಿಯು ಸರಳತನವನ್ನು ಮುಂದೆಮಾಡಿ ಮಾತಾಡುತ್ತಿದ್ದರೂ, ಆಕೆಯ ಮನಸ್ಸು ಸರಳವಾಗಿದ್ದಿಲ್ಲೆಂಬದನ್ನು ಕೆಲವು ಲಕ್ಷಣಗಳಿಂದ ನಾನು ಗೊತ್ತುಹಿಡಿದೆನು. ನನ್ನಂತೆ ಅವಳಾದರೂ ಕೆಲಮಟ್ಟಿಗೆ ವಿಕಾರವಶಳಾಗಿದ್ದಳು; ಅವಳ ಕಣ್ಣುಗಳು ದ್ರವವೊಡೆದವು, ಮುಖದಲ್ಲಿ ಬೆವರ ಹನಿಗಳು ಮಿನುಗಹತ್ತಿದವು, ದನಿಯು ಕುಗ್ಗಹತ್ತಿತು, ಎವೆಗಳ ಕಾರ್ಯವು ಮಂದವಾಯಿತು, ಮೇಲಿಂದಮೇಲೆ ಆಕೆಯು ನಿಟ್ಟುಸುರುಗಳನ್ನು ಬಿಡಹತ್ತಿದಳು, ಈ ಪ್ರೇಮದ ಲಕ್ಷಣಗಳನ್ನು ನೋಡಿ ಆಶಾಬದ್ಧನಾಗಿ ನಾನು ಉತ್ಸಾಹದಿಂದ ನುಡಿದೆನೇನಂದರೆ—ನಾನು ಪರಕೀಯನು, ಮೇಲಾಗಿ ಅಪರಿಚಿತನು; ನಿಮ್ಮ ಸಂಗಡ ಹೇಗೆ ಮಾತಾಡಬೇಕೆಂಬದು ತಿಳಿಯಲೊಲ್ಲದು. ಪರಸ್ತ್ರೀಯರ ಸಂಗಡವಂತು ಇರಲಿ, ಸ್ತ್ರೀಯರ ಸಂಗಡವೇ ಮಾತಾಡಿ ನನಗೆ ಗೊತ್ತಿಲ್ಲ. ಹುಟ್ಟಿ ಇಲ್ಲಿಯ ವರೆಗೆ ಸ್ವೇಚ್ಛೆಯಿಂದ ಬೆಳೆದಿದ್ದೇನೆ. ಅದ್ದರಿಂದ ನನ್ನ ಮಾತಿನಲ್ಲಿ ಏನಾದರೂ ಹೆಚ್ಚುಕಡಿಮೆಯಾದರೆ ಕ್ಷಮಿಸಬೇಕೆಂದು ಬೇಡಿಕೊಳ್ಳುವೆನು. ಸರೋವರದ ದಂಡೆಯ ಮೇಲಿದ್ದ ಶಿಲಾಮಂಟಪದಲ್ಲಿ ಮಲಗಿದ್ದ ನಾನು, ಇಲ್ಲಿ ಹೇಗೆ ಮಲಗಿಕೊಂಡೆನೆಂಬದು ಗೊತ್ತಾಗದ್ದರಿಂದ ಭ್ರಮಿಷ್ಟನಂತೆ ಆಗಿದ್ದೆನು. ಅಷ್ಟರಲ್ಲಿ ನಿಮ್ಮ ಸುಮಧ್ಯಮೆಯು ಬಂದು ನನ್ನನ್ನು ಆವೇಶಕ್ಕೆ ಗುರಿಮಾಡಿದಳು. ಹುಚ್ಚೊಂದು, ಆವೇಶವೊಂದು ಕೂಡಿ ನಾನು ಪೇಚಾಡುತ್ತಿರಲು, ಅಕಸ್ಮಾತ್ತಾಗಿ ನೀವು ಇಲ್ಲಿಗೆ ಬಂದಿರಿ. ನಿಮ್ಮ ಮಾತುಗಳನ್ನು ಕೇಳಿ ನನ್ನ ಹುಚ್ಚೂ, ಆವೇಶವೂ ಅಳಿದು ಹೋಗಿ, ನಿಚ್ಚಳವಾಗಿ ನನ್ನ ಕಣ್ಣುಗಳು ತೆರೆದವು. ಇದು ಮೇಘನಾದ ದೈತ್ಯನ ಸ್ಥಾನವೇ ಆಗಿರಲಿ ಬೇರೆ ಯಾರೊಬ್ಬರ ಸ್ಥಾನವೇ ಆಗಿರಲಿ, ಕ್ಷತ್ರಿಯವೀರರು ಅದಕ್ಕೆ ಸೊಪ್ಪು ಹಾಕುವಹಾಗಿಲ್ಲ; ಯಾಕಂದರೆ, ಅವರಿಗೆ ಜೀವವು ಹುಲ್ಲಗಿಂತ ಕಡೆಯಾಗಿರುವದು. ನೀವು ನನ್ನ ಹಿತವನ್ನು ಚಿಂತಿಸಿ ನನ್ನನ್ನು ಕಷ್ಟದಿಂದ ಪಾರಮಾಡಲು ಯತ್ನಿಸುವೆನೆಂದು ನುಡಿಯುತ್ತಿರುವದನ್ನು ಕೇಳಿ ನನಗೆ ಬಹಳ ಸಮಾಧಾನವಾಗುತ್ತದೆ. ನನ್ನ ಕೇಡಿಗಾಗಿ ನನ್ನ ಹಿಂದೆ ದುಃಖಿಸುವವರು, ನನ್ನ ಮುಪ್ಪಿನ ತಾಯಿತಂದೆಗಳ ಹೊರತು ಬೇರೆ ಯಾರೂ ಇರುವದಿಲ್ಲ. ಸ್ತ್ರೀಯರು ಸಂಕಟದಲ್ಲಿ ಬಿದ್ದಿರುವದನ್ನು ಕಣ್ಣಿನಿಂದ

ನೋಡುವದು ಕ್ಷತ್ರಿಯರ ಶೀಲವಲ್ಲ. ತಮ್ಮ ಪ್ರಾಣವನ್ನು ಅರ್ಪಿಸಿಯಾದರೂ ಅವರು ಅಬಲೆಯರ ಸಂಕಟವನ್ನು ದೂರಮಾಡುವರು. ಅಬಲಾಮಣಿಯೇ, ನಿನಗೊದಗಿರುವ ದುರ್ನಿವಾರವಾದ ಸಂಕಟವಾವುದು ಹೇಳಬೇಕು, ಅದನ್ನು ದೂರಮಾಡದೆ ನಾನು ಇಲ್ಲಿಂದ ಉಲಕುವದಿಲ್ಲ.

ನನ್ನ ಮಾತುಗಳನ್ನು ಕೇಳಿ ಆ ಸುಂದರಿಯು ಬಹು ಸಮಾಧಾನಪಟ್ಟು ಕೃತಜ್ಞತೆಯಿಂದ– ಕ್ಷತ್ರಿಯವೀರನೇ, ನನ್ನ ಸಂಕಟವನ್ನು ದೂರಮಾಡಲು ಸಿದ್ಧನಾಗಿರುವದರಿಂದ ನೀನು ನನಗೆ ಆಪ್ತನಾಗಬೇಕಾಯಿತು. ನಮ್ಮಂಥ ಅನಾಥರ ಪಕ್ಷವನ್ನು ನಿನ್ನಂಥ ಉದಾರಚರಿತನಲ್ಲದೆ ಮತ್ತಾರು ಹಿಡಿಯಲು ಸಮರ್ಥರು? ನನ್ನ ದಾಸಿಯರ ಹೊರತು ನನ್ನವರೆನ್ನುವವರು ಇಲ್ಲಿ ಯಾರೂ ಇರುವದಿಲ್ಲ. ನೀರಿನಲ್ಲಿ ಮುಳುಗುತ್ತಿರುವವರನ್ನು ಕೈಕೊಟ್ಟು ಕರಕೊಳ್ಳಲಿಕ್ಕೆ ಬಂದಂತೆ ನೀನು ಬಂದಿರುತ್ತೀ; ಅಂದ ಬಳಿಕ ದುಃಖದಿಂದ ನನ್ನನ್ನು ಪಾರಮಾಡೆಂದು ನಾನು ನಿನ್ನ ಕೊರಳಿಗೆ ಬೀಳದೆ ಯಾಕೆ ಬಿಡಲಿ? ನಾನು ಅಬಲೆಯಾಗಿದ್ದರೂ ಕೇವಲ ಅಸಮರ್ಥಳೆಂದು ತಿಳಿಯಬೇಡ. ಮೇಘನಾದನಿಂದ ನಿನ್ನ ಕೂದಲು ಕೊಂಕದಂತೆ ನಾನು ನೋಡಿಕೊಳ್ಳುತ್ತೇನೆ. ಇರಇರುತ್ತ ಎಷ್ಟೋ ಸಂಗತಿಗಳು ನಿನಗೆ ತಿಳಿಯುವವು. ನೀನು ನನ್ನ ಆಪ್ತನೂ, ಮಿತ್ರನೂ ಆಗಿರುತ್ತೀ. ಸದ್ಯಕ್ಕೆ ನೀನು ದಣಿದಿರುವದರಿಂದ ಊಟಮಾಡಿ ಸ್ವಸ್ಥವಾಗಿ ಮಲಗಿಕೋ. ಸ್ವಪರಭೇದವಿಲ್ಲದೆ ಇಲ್ಲಿಯ ವರೆಗೆ ನಾನು ಪುರುಷರೊಡನೆ ಸರಳಮನಸ್ಸಿನಿಂದ ಮಾತಾಡುತ್ತ ಬಂದಂತೆ, ಈಗಾದರೂ ನಿನ್ನ ಸಂಗಡ ಮಾತಾಡುತ್ತೇನೆ. ಅದರಲ್ಲಿ ಎಟ್ಟಿತನವೇನಾದರೂ ಇದ್ದರೆ ಅದನ್ನು ಮನಸ್ಸಿನಲ್ಲಿ ತರದೆ ಕ್ಷಮಿಸು. ಎಂದು ಹೇಳಿ ಆಕೆಯು ತನ್ನ ದಾಸಿಯರ ಮೋರೆಯನ್ನು ನೋಡಿದಳು. ಕೂಡಲೆ ಅವರು ತಮ್ಮ ಒಡತಿಯು ಮೊದಲೇ ಆಜ್ಞಾಪಿಸಿದ್ದಂತೆ, ರಾಜಭೋಗಾರ್ಹವಾದ ಪದಾರ್ಥಗಳನ್ನು ತಕ್ಕೊಂಡು ಬಂದರು. ಅದರಲ್ಲಿ ಒಬ್ಬಳು ನನ್ನ ಜಡೆಗಟ್ಟಿದ ಕೂದಲುಗಳಿಗೆ ತರತರದ ಸುಗಂಧದ ಎಣ್ಣೆಗಳನ್ನು ಹಚ್ಚಿ ತೊಡಕು ಬಿಡಿಸಿದಳು; ಮತ್ತೊಬ್ಬಳು ನನ್ನ ಸ್ನಾನಕ್ಕಾಗಿ ಬಿಸಿನೀರುಗಳನ್ನು ತೋಡಿ ಇಟ್ಟಳು; ಇನ್ನೊಬ್ಬಳು ವಸ್ತ್ರಗಳ ಸಿದ್ಧತೆಯ ಕಡೆಗೆ ತೊಡಗಿದಳು. ಈ ಮೇರೆಗೆ ಒಬ್ಬೊಬ್ಬರು ಒಂದೊಂದು ಕೆಲಸವನ್ನು ಮಾಡಹತ್ತಿದ್ದರಿಂದ, ಮುಂದೆ ಸ್ವಲ್ಪಹೊತ್ತಿನಲ್ಲಿಯೇ

ತರತರದ ಪಕ್ವಾನ್ನಗಳಿಂದ ತುಂಬಿದ ಚಿನ್ನದ ಪಾತ್ರೆಯು ನನ್ನ ಮುಂದೆ ಇಡಲ್ಪಟ್ಟಿತು.

ದ್ವಿಜೋತ್ತಮಾ, ಮನೆಯಿಂದ ಹೊರಟಂದಿನಿಂದ ಇಲ್ಲಿಯವರೆಗೆ ಬಗೆ ಬಗೆಯ ಕಷ್ಟಗಳನ್ನನುಭವಿಸಿದ ನನಗೆ ಈಗ ಎಷ್ಟು ಸಮಾಧಾನವಾಗಿರಬಹುದೆಂಬದನ್ನು ನೀನೇ ಕಲ್ಪಿಸು. "ಇದ್ದಊರ ಗೌಡನು ಪರವೂರ ಮಂಗನೆ" ಎಂಬ ಗಾದೆಯಂತೆ, ರಾಜಗೃಹದಲ್ಲಿ ಮಿಷ್ಟಾನ್ನ ಭೋಜನದಿಂದುಂಟಾಗುತ್ತಿದ್ದ ಸುಖವನ್ನು, ವನವಾಸಿಯಾಗಿರುವಾಗ ನಾನು ಕಂದಮೂಲಗಳ, ಹಾಗೂ ಫಲಗಳ ಭಕ್ಷಣದಿಂದ ಸಂಪಾದಿಸಿಕೊಳ್ಳಬೇಕಾಗಿತ್ತು; ಮನೋಹರವಾದ ರಾಜಗೃಹವಾಸದ ಸೌಖ್ಯವನ್ನು, ನಾನು ಬಿಸಿಲಲ್ಲಿ ಮಾರ್ಗವನ್ನು ಕ್ರಮಿಸುತ್ತಿರುವಾಗ ಗಿಡದ ನೆರಳಲ್ಲಿ ಕುಳಿತು ದೊರಕಿಸಿಕೊಳ್ಳಬೇಕಾಗಿತ್ತು; ಯುವರಾಜನಾಗಿದ್ದಾಗ ಸುಂದರವಾದ ಕಂಕಣಗಳ ಝಣತ್ಕಾರದಿಂದ ಬಾಲೆಯರು, ಸಾವಕಾಶವಾಗಿ ಬೀಸುವ ಚಾಮರಗಳ ಸುಗಂಧದ ಗಾಳಿಯಿಂದಾಗುತ್ತಿದ್ದ ಸುಖವು, ವನವಾಸಿಯಾದ ನನಗೆ ಮಾರ್ಗದ ಎಡಬಲಗಳಲ್ಲಿ ಗಾಳಿಯಿಂದಲ್ಲಾಡುವ ಗಿಡಗಳಿಂದ ದೊರೆಯಬೇಕಾಗಿತ್ತು; ನನ್ನ ಬಿರುದಾವಳಿಗಳನ್ನು ಉಚ್ಚರಿಸಿ, ನನ್ನ ಮನಸ್ಸನ್ನು ಉತ್ಸಾಹಗೊಳಿಸುವ ಸ್ತುತಿಪಾಠಕರ ಕಾರ್ಯವನ್ನು, ನಾನು ಅರಣ್ಯವಾಸಿಯಾಗಿರುವಾಗ ಪಕ್ಷಿಗಳು ಮಾಡಬೇಕಾಗಿತ್ತು; ನನ್ನ ಮನಸ್ಸಿನ ಒಲವನ್ನನುಸರಿಸಿ ವಿನಯದಿಂದ ಸೇವೆಮಾಡುವ ಸೇವಕರ ಸೇವೆಯನ್ನು, ಪ್ರವಾಸಿಯಾಗಿರುವಾಗ ನನ್ನ ಅವಯವಗಳು ಮಾಡುತ್ತಿದ್ದವು. ಪೂಜ್ಯನೇ, ಬಹಳ ಹೇಳುವದರಿಂದೇನು ಪ್ರಯೋಜನವು? ಆಯತವಾಗಿ ದೊರೆತ ರಾಜಭೋಗಗಳ ಮಹತ್ವವನ್ನರಿಯದ ನಾನು, ವನವಾಸಿಯಾದ್ದರಿಂದ ವ್ಯಸನಪಟ್ಟು, ಆ ರಾಜಭೋಗಗಳ ಸಲುವಾಗಿ ಲುಬ್ಧನಾಗಿರಲು, ದೇವರ ಪ್ರಸಾದದಿಂದ ಅವು ನನಗೆ ಪುನಃ ಪ್ರಾಪ್ತವಾದವೆಂಬಂತೆ ಆ ಸುಂದರಿಯ ಸಹವಾಸವು ನನಗಾಯಿತು. ದಾಸಿಯರಿಂದ ಬಡಿಸಲ್ಪಟ್ಟ ಉತ್ತಮೋತ್ತಮವಾದ ಪಕ್ವಾನ್ನಗಳನ್ನು ಆಸ್ಥೆಯಿಂದ ಉಂಡು, ನಾನು ಮೊದಲು ಮಲಗಿಕೊಂಡಿದ್ದ ಮಂದಿರಕ್ಕೆ ಹೋದೆನು. ಅಲ್ಲಿ ಆ ಸುಂದರಿಯು ನನ್ನ ಹಾದಿಯನ್ನು ನೋಡುತ್ತ ಕುಳಿತುಕೊಂಡಿದ್ದಳು. ನಾನು ಹೋದಕೂಡಲೆ ಆಕೆಯು ಎದ್ದುನಿಂತು ಉಪಚರಿಸಿ, ರಾತ್ರಿಯು ಬಹಳವಾದ್ದರಿಂದ ಮಲಗಿಕೊಳ್ಳತಕ್ಕದ್ದೆಂದು ಹೇಳಿ, ದಾಸಿಯ

ರೊಡನೆ ಹೊರಟುಹೋದಳು.

ಕೆಲಹೊತ್ತಿನವರೆಗೆ ನನಗೆ ನಿದ್ರೆಯೇ ಬರಲಿಲ್ಲ. ಬಗೆಬಗೆಯ ವಿಚಾರಗಳು ಮನಸ್ಸಿನಲ್ಲಿ ಎಡತಾಕಹತ್ತಿದ್ದರಿಂದ, ನಾನು ಚಡಪಡಿಸುತ್ತ ಹಾಸಿಗೆಯ ಮೇಲೆ ಹೊರಳಾಡಹತ್ತಿದೆನು. ಆ ಪ್ರಮದೆಯು ನನ್ನ ಮನಸ್ಸನ್ನು ಪೂರ್ಣವಾಗಿ ಎಳಕೊಂಡಿದ್ದಳು. ಅವಳ ಗುಣಗಳನ್ನೂ, ರೂಪವನ್ನೂ ನೆನಿಸುತ್ತ, ಇಲ್ಲದ ಮನೋರಾಜ್ಯಗಳನ್ನು ಕಲ್ಪಿಸಿ ಶಂಕಿಸುತ್ತ—ಆಶೆಪಡುತ್ತ, ಎಂಟು ತಾಸು ರಾತ್ರಿಯನ್ನು ಕಳೆದೆನು. ನಿದ್ರೆಯು ಎತ್ತೋ ಹೊರಟುಹೋಯಿತು. ನಾನು ಎದ್ದು ಕಿಡಿಕೆಯ ಬಳಿಯಲ್ಲಿ ಬಂದು ನೋಡಲು, ಚಂದ್ರೋದಯವಾಗಿತ್ತು. ಬೆಳಗುಮುಂಜಾವಿನ ತಂಗಾಳಿಯು ಸುಳಿಯುತ್ತಿತ್ತು. ನಾನು ತಲೆಬಿಟ್ಟುಕೊಂಡು ಸ್ವಲ್ಪಹೊತ್ತು ಗಾಳಿಗೆ ಕುಳಿತುಕೊಳ್ಳಲು, ಮನಸ್ಸು ಸ್ವಲ್ಪ ಸಮಾಧಾನಪಟ್ಟಿದ್ದರಿಂದ ಮತ್ತೆ ಮಲಗಿಕೊಂಡೆನು. ಯಾವಾಗ ನಿದ್ರೆ ಹತ್ತಿತೋ ತಿಳಿಯದು; ಮರುದಿನ ಎರಡುತಾಸು ಹೊತ್ತು ಏರಿ ನನಗೆ ಎಚ್ಚರಾಯಿತು! ಕಣ್ಣುತೆರೆದು ನೋಡುತ್ತೇನೆ, ಸುಮಧ್ಯಮೆಯು ನನ್ನ ಹಾದಿಯನ್ನು ನೋಡುತ್ತ ನಿಂತುಕೊಂಡಿದ್ದಾಳೆ! ನಾನು ಹಾಸಿಗೆಯಿಂದ ಚಟ್ಟನೆ ಎದ್ದು, ಆಕೆಯನ್ನು ಹಿಂಬಾಲಿಸಿಹೋಗಿ ಪ್ರಾತರ್ವಿಧಿಗಳನ್ನು ತೀರಿಸಿಕೊಂಡೆನು. ಉಪಹಾರವಾಯಿತು. ತಿರುಗಿ ನನ್ನ ಸ್ಥಳಕ್ಕೆ ಬಂದು, ಸ್ವಸ್ಥವಾಗಿ ಕುಳಿತುಕೊಂಡೆನು. ಇಷ್ಟಾಗುವದರೊಳಗೆ ನಾಲ್ಕುತಾಸು ಹೊತ್ತು ಏರಿತು; ಆದರೆ ಆ ಸುಂದರಿಯ ಸುಳವೇ ಇಲ್ಲ! ಸುಮಧ್ಯಮೆಯು ವಿನಯದಿಂದಲೂ, ಬಹು ಮರ್ಯಾದೆಯಿಂದಲೂ ನನ್ನ ಸಂಗಡ ಮಾತಾಡುತ್ತ ಸೇವಾತತ್ಪರಳಾಗಿದ್ದಳು. ನಾನು ಸುಖಾಸನದಲ್ಲಿ ಕುಳಿತು, ಎದುರಿಗೆ ಕಪಾಟಿನಲ್ಲಿ ಇಟ್ಟಿರುವ ಪುಸ್ತಕಗಳಲ್ಲಿ, ಒಂದನ್ನು ತಕ್ಕೊಂಡು ಓದಹತ್ತಲು, ಆಕೆಯು ಅಲ್ಲಿಂದ ಹೊರಟುಹೋದಳು.

ಪ್ರಿಯಮಿತ್ರಾ, ಅಂದು ಮಧ್ಯಾಹ್ನವಾಯಿತು, ಮಧ್ಯಾಹ್ನದ ಊಟವಾಯಿತು, ಒಂಬತ್ತು ತಾಸಾಯಿತು; ಆದರೆ ಆ ಸುಂದರಿಯ ಸುದ್ದಿಯಿಲ್ಲ! ಮತ್ತೆ ನನ್ನ ಚಿಂತೆಗೆ ಆರಂಭವಾಯಿತು. ಆ ಮೋಹಕ ಮೂರ್ತಿಯ ದರ್ಶನವಾದಾಗ ನನ್ನ ಮನಸ್ಸಿಗೆ ಆಗಿದ್ದ ಗಾಯವು ಮಾಯದೆ ಅದು ಬೆಳೆಯುತ್ತ ಹೋಯಿತು. ಆ ಮೂರ್ತಿಯು ಯಾವಾಗಲೂ ಕಣ್ಣಿಗೆ ಕಟ್ಟಿರಬೇಕೆಂದು ನನ್ನ ಮನಸ್ಸು ಬಯ

ನಹತ್ತಿತು. ಆ ಸುಂದರಿಯು ಯಾಕೆ ಬಂದಿರಲಿಕ್ಕಿಲ್ಲ? ನನ್ನಿಂದ ಏನಾದರೂ ಅಪರಾಧವಾಗಿರಬಹುದೋ? ನನ್ನ ದರ್ಶನದಿಂದ ನನ್ನಂತೆ ಆಕೆಯು ವಿಕಾರವಶಳಾಗಿರುವಳೆಂದು ನಾನು ಕಲ್ಪಿಸಿದ್ದು ಸುಳ್ಳಿರಬಹುದೋ? ಹೆಂಗಸರ ನೆಲೆಯು ಯಾರಿಗೂ ಹತ್ತುವದಿಲ್ಲೆಂದು ಕೇಳಿದ್ದೇನೆ; ಏನಾದರೂ ರೋಗವಿರಲಿಕ್ಕಿಲ್ಲವಷ್ಟೆ? ಆಕೆ ಬಿಸಲಿ, ಸುಮಧ್ಯಮೆಯಾದರೂ ಯಾಕೆ ಮನಸ್ಸುಬಿಚ್ಚಿ ಮಾತಾಡಬಾರದು? ಇವೇ ಮೊದಲಾದ ವಿಚಾರಗಳು ಮನಸ್ಸಿನಲ್ಲಿ ಉತ್ಪನ್ನವಾಗಿ ನಾನು ಅಸಮಾಧಾನ ಪಟ್ಟೆನು. ಆ ಸುಂದರವಾದ ಮಂದಿರವೂ, ಅಲ್ಲಿಯ ಸುವ್ಯವಸ್ಥೆಯೂ, ದಾಸಿಯರು ಮಾಡುತ್ತಿದ್ದ ರಾಜೋಪಚಾರಗಳೂ ನನ್ನ ಅಸಮಾಧಾನವನ್ನು ದೂರ ಮಾಡಲು ಸಮರ್ಥವಾಗಲಿಲ್ಲ. ನನ್ನ ಮನಸ್ಸು ಬೇಸತ್ತಿತು. ಮುಂದೆ ಏನು ಮಾಡಬೇಕೆಂದು ವಿಚಾರಿಸುತ್ತ, "ನಾನು ಮಂದಿರದ ಈ ಗೋಡೆಯಿಂದ ಆ ಗೋಡೆಯ ವರೆಗೆ, ಆ ಗೋಡೆಯಿಂದ ಈ ಗೋಡೆಯವರೆಗೆ ಎಡತಾಕ ಹತ್ತಿದೆನು. ಮತ್ತೆ ಆಸನದಲ್ಲಿ ಕೂತು ಪುಸ್ತಕವನ್ನು ಓದಹತ್ತಿದೆನು, ಮನಸ್ಸು ಸಮಾಧಾನಪಡದ್ದರಿಂದ ಹಾಸಿಗೆಯ ಮೇಲೆ ಬಿದ್ದುಕೊಂಡೆನು, ಮತ್ತೆ ಎದ್ದೆನು. ಈ ಮೇರೆಗೆ ಉದಾಸೀನನಾಗಿ ಆತುರದಿಂದ ನಾನು ಆ ಸುಂದರಿಯ ಮಾರ್ಗವನ್ನು ನಿರೀಕ್ಷಿಸುತ್ತಿರಲು, ಎರಡು ತಾಸು ಹೊತ್ತು ಇರುವಾಗ ಆಕೆಯು ನನ್ನ ಬಳಿಗೆ ಬಂದಳು!

ತಪೋನಿಧಿಯೆ, ಆಗಿನ ಆ ಸುಂದರಿಯ ಮೋಹಕ ಸ್ವರೂಪದಿಂದ ನನ್ನ ಚಿತ್ತವೃತ್ತಿಯು ಚಂಚಲವಾಯಿತು. ಆಕೆಯ ಗಾಂಭೀರ್ಯವೆಷ್ಟು, ಸರಳತನವೆಷ್ಟು, ಸೌಜನ್ಯವೆಷ್ಟು! ನನ್ನನ್ನು ನೋಡಿ ಆಕೆಯುವಿಕಾರವಶವಾಗಿರುವಳೆಂದು, ನಾನು ಈ ಮೊದಲು ತಿಳಕೊಂಡದ್ದು ಪ್ರಮಾದವೆಂದೇ ಹೇಳತಕ್ಕದ್ದು. ಕೆಟ್ಟ ಮನಸ್ಸಿನಿಂದ ಪರಸ್ತ್ರೀಯನ್ನು ನೋಡುವ ನೀಚ ಪುರುಷನಿಗೆ, ಸ್ತ್ರೀಯರು ಕೆಟ್ಟಮನಸ್ಸಿನವರಾಗಿ ತೋರುವಂತೆ, ವಿಕಾರವಶನಾದ ನನಗೆ ಆ ಮೋಹಕ ಮೂರ್ತಿಯೂ ವಿಕಾರವಶವಾಗಿ ತೋರಿರಬಹುದು! ಆ ಸುಶೀಲೆಯು ನನ್ನ ಬಳಿಗೆ ಬಂದು ಸರಳತನದಿಂದ—ಪುರುಷಶ್ರೇಷ್ಠನೆ, ನಿರ್ವಾಹವಿಲ್ಲದ್ದರಿಂದ ನಿನ್ನ ಭೆಟ್ಟಿಗಾಗಿಬರಲಿಕ್ಕೆನನಗೆತಡವಾಯಿತು, ಕ್ಷಮಿಸಬೇಕು. ಅತಿಥಿಗಳನ್ನು ಈರೀತಿಯಾಗಿ ದುರ್ಲಕ್ಷಿಸುವದು ಗೃಹಸ್ಥಾಶ್ರಮಿಗಳ ಧರ್ಮವಲ್ಲ. ನನ್ನ ದಾಸಿಯರ ಸೇವೆಯಲ್ಲಿ ಏನಾದರೂ ತಪ್ಪುಗಳಾಗಿದ್ದರೆ, ಅವಕ್ಕಾಗಿಯೂ ನನ್ನನ್ನು ಕ್ಷಮಿಸುವದಾಗ

ಬೇಕು. ನಿಮ್ಮಂಥ ಪರೋಪಕಾರಿಗಳೂ, ಸುಶೀಲರೂ, ತೇಜಸ್ವಿಗಳೂ ಆದ ಅತಿಥಿಗಳ ಸೇವೆಯು ಪರಮ ದುರ್ಲಭವು. ಪುಣ್ಯಶಾಲಿಯೇ, ಅತಿಥಿಸ್ವರೂಪನಾಗಿ ಬಂದಿರುವ ನೀನು, ಇನ್ನು ಮನೆಯಾತನಾಗಬೇಕು. ಈ ಮನೆಯು ನಿನ್ನದೆಂದು ತಿಳಿ. ಇದು ಉಪಚಾರದ ಮಾತಲ್ಲ. ಶ್ರೀ ಗೌರಿಯ ಪೂಜೆಗಾಗಿ ಪ್ರತಿಮಂಗಳವಾರವೂ ನನ್ನಿಂದ ಇದೇ ರೀತಿ ತಪವಾಗುವದು. ಉಳಿದ ದಿನಗಳಲ್ಲಿ ನಿನ್ನಂಥ ಸುಗುಣಿಯ ಸಹವಾಸದಲ್ಲಿ ನನ್ನ ಕಾಲಹರಣವಾಗುವದು ಬಹು ಸಮಾಧಾನಕರವು. ನಿನ್ನಿಂದ ನನ್ನ ದುಃಖದ ನಿವಾರಣವಾಗಲಿ—ಆಗದಿರಲಿ, ನೀನು ಈ ಮಂದಿರದಲ್ಲಿರುವ ವರೆಗೆ ನನ್ನ ಸಮಾಧಾನಕ್ಕೆ ಕೊರತೆಬಾರದು. ಯಾವ ಸಂಕೋಚವೂ ಇಲ್ಲದೆ, ಮನೆಯವರಂತೆ ತಿಳಿದು, ಮಿತ್ರಭಾವದಿಂದ ನಮ್ಮೆಲ್ಲರ ಸಂಗಡ ನಡೆಕೊಳ್ಳತಕ್ಕದ್ದು. ಮೇಘನಾದದೈತ್ಯನ ಈ ಸ್ಥಾನದಲ್ಲಿ, ಯಾತಕ್ಕೇನೂ ಕೊರತೆಯಿಲ್ಲ; ಆದರೆ ನೀನು ಆತನ ಕಣ್ಣಿಗೆ ಬೀಳದಂತೆ ಎಚ್ಚರಪಡತಕ್ಕದ್ದು. ಪ್ರತಿಮಂಗಳವಾರಕ್ಕೊಮ್ಮೆ ಆತನು ಇಲ್ಲಿಗೆ ತಪ್ಪದೆ ಬರುತ್ತಾನೆ. ಉಳಿದ ದಿನ ಆತನ ಭಯವಿಲ್ಲ. ಪುರುಷಶ್ರೇಷ್ಠಾ, ಈ ಸ್ಥಾನದಲ್ಲಿ ನೀನು ಧಾರ್ಮಿಕ ನಿತ್ಯ ನೈಮಿತ್ತಿಕ ಕರ್ಮಗಳನ್ನು ಭಕ್ತಿಯಿಂದ ಆಚರಿಸಬಹುದು; ಶರೀರಸಾಮರ್ಥ್ಯವನ್ನು ಬೆಳಿಸುವದಕ್ಕಾಗಿ ಗರಡಿಯ ಸಾಧಕಮಾಡಬಹುದು: ಬೇಟೆಗಾಗಿಯೇ ಕಾದಿಟ್ಟಿದ್ದ ಅರಣ್ಯದಲ್ಲಿ ಬೇಟೆಯಾಡಬಹುದು; ಇಳಿಹೊತ್ತಾಗಲು, ಸರೋವರದಲ್ಲಿ ನಾವೆಗಳ ಸಹಾಯದಿಂದ ಸಂಚರಿಸಿ ರಮಿಸಬಹುದು; ಚದುರಂಗ ಮುಂತಾದ ಆಟಗಳನ್ನು ಆಡಬಹುದು; ಓದಬಹುದು—ಬರೆಯಬಹುದು; ಹಾಡಬಹುದು—ಬಾರಿಸಬಹುದು; ಒಟ್ಟಿಗೆ, ಸುಜನನೂ, ವಿವೇಕಿಯೂ ಆದ ನೀನು ಮನಸೋಕ್ತವಾಗಿ ಆಚರಿಸಬಹುದು.

ಗುರುಪುತ್ರಾ, ಆ ಪ್ರಮದೆಯ ಈ ಮಾತುಗಳನ್ನು ಕೇಳಿದ ನೀನು, ಅವಳ ಯೋಗ್ಯತೆಯನ್ನು ಮನಸ್ಸಿನಲ್ಲಿ ತೂಗಿ ನೋಡಿದ್ದೀ. ನಾನಂತು ಗಾಬರಿಯಾಗಿ, ಸಿಕ್ಕಹಾಗೆ ಹರಿದುಹೋಗುವ ನನ್ನ ಖೋಡಿಮನಸ್ಸನ್ನು ಗುದ್ದಿ ಸುಮ್ಮನೆ ಕುಳ್ಳಿರಿಸಿಕೊಂಡೆನು. ಆದರೂ ಒಮ್ಮೆ ತನಗಾಗಿದ್ದ ನೋವನ್ನು ತಾಳಲಾರದೆ, ಆ ಮನಸ್ಸು ಕೂತಲ್ಲಿಯೇ ನರಳಹತ್ತಿತು. ಬರಬರುತ್ತ ಆ ಸ್ತ್ರೀಯರ ತಂಡದ ಪರಿಚಯವಾಗಿ, ನಾನು ಅವರೊಡನೆ ಸಲಿಗೆಯಿಂದ ನಡೆಯಹತ್ತಿದೆನು. ಉಷಃಕಾಲಕ್ಕೆ ಎದ್ದಕೂಡಲೆ ಪ್ರಾತಃಸ್ಮರಣಮಾಡಿ, ಪ್ರಾತರ್ವಿಧಿಗಳನ್ನು ತೀರಿಸಿಕೊಂಡು

ನಿತ್ಯಕರ್ಮಗಳನ್ನು ಮುಗಿಸಿಕೊಳ್ಳುತ್ತಿದ್ದೆನು. ಅಷ್ಟರಲ್ಲಿ ಎರಡು ತಾಸು ಹೊತ್ತು ಏರುತ್ತಿತ್ತು. ಉಪಾಹಾರವು ತೀರಿದ ಮೇಲೆ ಗ್ರಂಥಗಳನ್ನು ಅವಲೋಕಿಸುತ್ತಿದ್ದೆನು. ಆರು ತಾಸಿಗೆ ಮಧ್ಯಾಹ್ನದ ಕರ್ಮಗಳು ಮುಗಿದು ಊಟವಾದ ಬಳಿಕ ಸ್ವಲ್ಪ ವಾಮಕುಕ್ಷಿ, ಗ್ರಂಥಾವಲೋಕನ, ಆಟ, ಉಪಹಾರ, ವ್ಯಾಯಾಮ ಇವು ಕ್ರಮವಾಗಿ ನಡೆಯುತ್ತಿದ್ದವು. ಅಷ್ಟರಲ್ಲಿ ಹೊತ್ತು ಮುಣುಗುತ್ತಿತ್ತು. ಸಂಧ್ಯಾವಂದನಾದಿ ಸಂಜೆಯ ಕರ್ಮಗಳು ಮುಗಿದಮೇಲೆ ಎರಡು ತಾಸು ರಾತ್ರಿಗೆ ಸಂಜೆಯ ಊಟವಾಗುತ್ತಿತ್ತು. ಸಂಜೆಯ ಊಟವಾದ ಬಳಿಕ ನಡೆಯುವ ಮುಖ್ಯ ಕೆಲಸವೆಂದರೆ ಹರಟೆಯು! ಬ್ರಾಹ್ಮಣೋತ್ತಮಾ, ಈ ಕ್ರಮದಿಂದ ನಾನು ಆ ಸುಂದರಿಯರ ಸಹವಾಸದಲ್ಲಿ ೧೫ ದಿನಗಳನ್ನು ಕಳೆದರೂ, ಅವರು ನನ್ನ ವೃತ್ತಾಂತವನ್ನು ಕೇಳಲಿಲ್ಲ; ನಾನಾದರೂ ಅವರ ಸಂಗತಿಯನ್ನು ತಿಳಕೊಳ್ಳುವ ಸಾಹಸಕ್ಕೆ ಹೋಗಲಿಲ್ಲ. ಒಮ್ಮೊಮ್ಮೆ ಬೆಳಗಿನ ಉಪಾಹಾರವಾದ ಬಳಿಕ ನಾನು ಆ ಸುಂದರಿಯೊಡನೆ ಬೇಟೆಯಾಡಲಿಕ್ಕೆ ಹೋಗುತ್ತಿದ್ದೆನು; ಸಂಜೆಯ ಉಪಾಹಾರ ತೀರಿದಮೇಲೆ ಒಮ್ಮೊಮ್ಮೆ ಅವಳೊಡನೆ ಉಪವನದಲ್ಲಿ ಸಂಚರಿಸುತ್ತಿದ್ದೆನು; ಒಮ್ಮೊಮ್ಮೆ ಸರೋವರದಲ್ಲಿ ನಾವೆಯಲ್ಲಿ ಕುಳಿತು ವಿಶ್ರಾಂತಿಯನ್ನು ಹೊಂದುತ್ತಿದ್ದೆನು. ಆಕೆಯು ನನ್ನನ್ನು ಪುರುಷಶ್ರೇಷ್ಠಾ, ಎಂದು ಕರೆಯುತ್ತಿದ್ದಳು; ನಾನು ಸುಶೀಲೆ, ಎಂದು ಆಕೆಯನ್ನು ಕರೆಯುತ್ತಿದ್ದೆನು. ಇಷ್ಟು ದಿನವಾದರೂ ನಿಜವಾದ ಹೆಸರು ಕೇಳುವ ಧೈರ್ಯವು ಅವರಿಗೂ ಆಗಲಿಲ್ಲ, ನನಗೂ ಆಗಲಿಲ್ಲ!

ಹೀಗೆ ನಾನು ತಂದೆ-ತಾಯಿಗಳನ್ನೂ, ರಾಜ್ಯಸುಖವನ್ನೂ, ಅರಣ್ಯವಾಸದ ಕಷ್ಟಗಳನ್ನೂ ಮರೆತು ಆನಂದದಿಂದ ಕಾಲಹರಣಮಾಡುತ್ತಿರಲು, ಒಂದು ದಿನ ನಾನು ನಮ್ಮ ಸುಶೀಲೆಯೊಡನೆ ಬೇಟೆಯಾಡುವದಕ್ಕೆ ಹೋದೆನು. ಹೊರಗೆ ಹೋಗುವಾಗ ಒಮ್ಮೊಮ್ಮೆ ನಾನು ಸ್ತ್ರೀ ವೇಷವನ್ನು ಧರಿಸುತ್ತಿದ್ದೆನು; ಒಮ್ಮೊಮ್ಮೆ ಸುಶೀಲೆಯು ಪುರುಷವೇಷವನ್ನು ಧರಿಸಿ ನನ್ನೊಡನೆ ಬರುತ್ತಿದ್ದಳು. ಆ ದಿನ ನಾವಿಬ್ಬರು ಪುರುಷವೇಷದಿಂದಲೇ ಬೇಟೆಗೆ ಹೋಗಿದ್ದೆವು! ಸುಶೀಲೆಯು ಧನುರ್ವಿದ್ಯೆಯ ಅಭ್ಯಾಸವನ್ನು ಚನ್ನಾಗಿ ಮಾಡಿದ್ದಳು. ಆಕೆಯು ಬೇಟೆಯಾಡುತ್ತಾಡುತ್ತ ಅರಣ್ಯದ ಮಧ್ಯವನ್ನು ಹೊಕ್ಕಳು. ಆಗ ನಾನೂ ಹಿಂಬಾಲಿಸಿ ಹೋಗಿದ್ದೆನೆಂದು ಹೇಳುವ ಕಾರಣವಿಲ್ಲ. ಅಷ್ಟರಲ್ಲಿ ಒಂದು ಹುಲಿಯು

ಅಕಸ್ಮಾತ್ತಾಗಿ ಸುಶೀಲೆಯಮೇಲೆ ದುಮುಕಿತು. ಯೋಗ್ಯ ಪ್ರಸಂಗದಲ್ಲಿ ಸಹಾಯವು ದೊರೆಯದಿದ್ದರೆ, ಸುಶೀಲೆಯ ಕಥೆಯು ಮುಗಿದುಹೋಗುತ್ತಿತ್ತು! ಯಾಕಂದರೆ, ಆ ದುಷ್ಟ ವ್ಯಾಘ್ರದ ಅಬ್ಬರಕ್ಕೆ ಸುಶೀಲೆಯುಬೆದರಿ, ಮುಂದುಗಾಣದೆ ಕುದುರೆಯ ಮೇಲೆ ಸುಮ್ಮನೆ ಕುಳಿತಿದ್ದಳು. ಅಷ್ಟರಲ್ಲಿ ನನ್ನ ಧನುಸ್ಸಿನಿಂದ ಹೊರಬಿದ್ದು ಸುಯಿಗುಟ್ಟುತ್ತಹೋದ ತೀಕ್ಷ್ಣಬಾಣವು ವ್ಯಾಘ್ರನ ಮುಖವನ್ನು ಪ್ರವೇಶಿಸಿ ಅದನ್ನು ಹಿಂದಕ್ಕೆ ಸರಿಸಿತು. ಆ ಭಯಂಕರ ಪ್ರಾಣಿಯು ನನ್ನ ಕೂರಂಬಿನ ಇರತಕ್ಕೆ ಹಿಂಜರಿಯದೆ ಸಿಟ್ಟಿನಿಂದ ಮತ್ತೆ ಸುಶೀಲೆಯ ಮೇಲೆ ಹಾರಲು, ನಾನು ಕೈ ಚಮತದಿಂದ ಆ ವ್ಯಾಘ್ರದ ಹಣೆ-ಎದೆ-ಬಾಯಿಗಳಲ್ಲಿ ಅನೇಕಬಾಣಗಳನ್ನು ನಡಿಸಿದೆನು. ಆಗ ಅದು ಹಿಂದಕ್ಕೆ ಬಿದ್ದು ವ್ಯಥೆಯನ್ನು ತಾಳಲಾರದೆ ಒದ್ದಾಡಿ ಪ್ರಾಣಬಿಟ್ಟಿತು. ಇದನ್ನು ನೋಡಿ ಸುಶೀಲೆಯು ಕೃತಜ್ಞತಾಪೂರ್ವಕವಾಗಿ ನನ್ನನ್ನು ನೋಡಿ—ಪುರುಷಶ್ರೇಷ್ಠಾ, ಇಂದು ನೀನು ನನಗೆ ಪ್ರಾಣದಾನಮಾಡಿರುವದನ್ನು ನಾನು ಎಂದೂ ಮರೆಯುವ ಹಾಗಿಲ್ಲ. ನೀನು ಧನುರ್ಧರಾಗ್ರೇಸರನಿರುತ್ತೀ. ನಿನ್ನಂಥ ಕ್ಷತ್ರಿಯವೀರನಿಗೆ ಅಗ್ರೇಸರತ್ವವು ಅಲಂಕಾರಭೂತವಾಗಿರುವದು.

ಈ ಮೇರೆಗೆ ಸುಶೀಲೆಯು ನನ್ನ ಅಭಿನಂದನ ಮಾಡುತ್ತಿರಲು, ನಾನು ನನ್ನ ಕುದುರೆಯನ್ನು ಹಿಂದಕ್ಕೆ ತಿರುಗಿಸಿದೆನು. ನಾವಿಬ್ಬರು ಮನೆಗೆ ಬಂದು ಸ್ನಾನಮಾಡಿ ಊಟವಾದ ಬಳಿಕ ವಿಶ್ರಾಂತಿಯನ್ನು ಹೊಂದಿದೆವು. ದಿನಕ್ಕಿಂತ ಆ ದಿನ ನಮಗೆ, ವಿಶೇಷವಾಗಿ ಸುಶೀಲೆಗೆ ಬಹಳ ಶ್ರಮವಾಗಿತ್ತು. ಹುಲಿಯ ಭಯದಿಂದ ಆಕೆಯ ಮನಸ್ಸು ಬಹಳ ಅಸ್ವಸ್ಥವಾಗಿತ್ತು. ದಿನದ ಹೊತ್ತಿಗೆ ಆಕೆಯು ನನ್ನ ಮಂದಿರಕ್ಕೆ ಬಾರದಿರಲು, ನಾನೇ ಆಕೆಯಿದ್ದಲ್ಲಿಗೆ ಹೋದೆನು. ಆಕೆಯು ಇನ್ನೂ ಮಲಗಿದ್ದಳು. ಗಾಢವಾದ ನಿದ್ರೆಯು ಹತ್ತಿತ್ತು. ನಾನು ದಾಸಿಯರಿಗೆ ಎಬ್ಬಿಸದಂತೆ ಸನ್ನೆಮಾಡಿ ಅಲ್ಲೇ ಆಸನದಲ್ಲಿ ಕುಳಿತು, ವಿನೋದಕ್ಕಾಗಿ ಆ ದಿನದ ಹುಲಿಯ ಬೇಟೆಯ ಪ್ರಸಂಗದ ಚಿತ್ರವನ್ನು ತೆಗೆಯಹತ್ತಿದೆನು. ಎರಡನೆಯ ಸಾರೆ ಸುಶೀಲೆಯ ಮೇಲೆ ಜಿಗಿದ ಹುಲಿಯ ಚಿತ್ರವು ಮುಗಿಯಲು, ಅಷ್ಟರಲ್ಲಿ ಸುಶೀಲೆಯು— "ಪುರುಷಶ್ರೇಷ್ಠಾ, ಹುಲಿಯು" ಎಂದು ಗಾಬರಿಯಾಗಿ ಎದ್ದು ಹಾಸಿಗೆಯ ಮೇಲೆ ಕುಳಿತು ಕಣ್ಣು ತಿಕ್ಕಿಕೊಂಡು ಸುತ್ತುಮುತ್ತು ನೋಡುತ್ತಾಳೆ, ಹತ್ತರ ದಾಸಿಯರು, ಅತ್ತಕಡೆಯ ಆಸನದಲ್ಲಿ ಪುರು

ಷಶ್ರೇಷ್ಠನು! ಕೂಡಲೆ ಸುಶೀಲೆಯು ಎದ್ದು ನಿಂತು, ಪ್ರೀತಿಪೂರ್ವಕವಾದ ಆದರದಿಂದ ನನ್ನನ್ನು ನೋಡುತ್ತ ವಿನಯದಿಂದ — ಪ್ರಮಾದವಾಯಿತು! ತಾವು ಬಂದು ಕುಳಿತಿದ್ದರೂ ನನಗೆ ಎಚ್ಚರವಾಗಬಾರದೆ! ದಾಸಿಯರಿಗೂ ಬುದ್ಧಿಯಿಲ್ಲ. ಅವರಲ್ಲಿ ಒಬ್ಬರು ಹತ್ತರ ಬಂದು ನಿಂತಿದ್ದರೆ, ನನಗೆ ಎಚ್ಚರವಾಗುತ್ತಿತ್ತು! ಪುರುಷಶ್ರೇಷ್ಠರೇ, ನಿಮ್ಮಿಂದ ಇಂದು ನನ್ನ ಪ್ರಾಣರಕ್ಷಣವಾಯಿತು. ಜಾಗ್ರತಿಯಲ್ಲಿಯೂ, ಸ್ವಪ್ನದಲ್ಲಿಯೂ ಅದೇ ಪ್ರಸಂಗವು ನನ್ನ ಕಣ್ಣಿಗೆ ಕಟ್ಟಿರುತ್ತದೆ. ನಾನು "ಪುರುಷಶ್ರೇಷ್ಠಾ" ಎಂದು ಕನಸಿನಲ್ಲಿ ಕರೆದರೂ, ನನ್ನ ಸಂಕಟನಿವಾರಣಕ್ಕಾಗಿ ನಿಜವಾಗಿಯೇ ನೀವು ಸಿದ್ಧರಾಗಿ ಕುಳಿತಿರುವಿರಿ! ನುಡಿದಂತೆ ನನ್ನ ದುರ್ನಿವಾರವಾದ ಪ್ರಾಣಸಂಕಟವನ್ನು ದೂರಮಾಡಿದಿರಿ. ಹೀಗೆಯೇ ನಿಮ್ಮಿಂದ ನನ್ನ ಸಂಕಟಗಳೆಲ್ಲ ದೂರವಾಗಿ, ನಾನು ಜನ್ಮಜನ್ಮಾಂತರಗಳಲ್ಲಿ ನಿಮ್ಮ ತೊತ್ತಾಗಿರುವಂತೆ ಈಶ್ವರನು ಅನುಗ್ರಹಿಸಲಿ!!

ಆ ಕೋಮಲೆಯು ಆಡಿದ ಈ ಮಾತುಗಳನ್ನು ಕೇಳಿ, ನನಗೆ ಬಹಳ ಸಮಾಧಾನವಾಯಿತು. ಆಕೆಯು ನನ್ನನ್ನು ಬಹುವಚನದಿಂದ ಕರೆಯುಲಾರಂಭಿಸಿದ್ದು, ಇದೇ ಮೊದಲೆಂದು ಹೇಳಬಹುದು. ಅವಳಲ್ಲಿ ಮೊದಲಿನ ಸರಳತನವು ಇಂದು ಕಂಡುಬರಲಿಲ್ಲ. ನಾನು ತನ್ನ ಪ್ರಾಣವನ್ನು ರಕ್ಷಿಸಿದೆನೆಂಬ ಉಪಕಾರದಿಂದಲೋ, ನನ್ನ ಶೌರ್ಯವನ್ನು ಕಣ್ಣುಮುಟ್ಟ ನೋಡಿದ್ದರಿಂದಲೋ, ಬೇರೆ ಯಾವ ಕಾರಣದಿಂದಲೋ ತಿಳಿಯದು, ಆ ಸುಂದರಿಯು ನನ್ನನ್ನು ಮೊದಲಿಗಿಂತ ಹೆಚ್ಚು ಗೌರವಿಸಹತ್ತಿದಳು. ಆಕೆಯ ನಿರ್ಮಲ ಮನಸ್ಸಿನಲ್ಲಿ ನನ್ನ ವಿಷಯವಾಗಿ ಆದರ—ಲಜ್ಜಾ—ಭಯಗಳು ಉತ್ಪನ್ನವಾದಂತೆ ತೋರಿದವು. ಭೂಸುರೋತ್ತಮಾ, ಪ್ರಾಯಸ್ಥರಿಗೆ ತಮ್ಮ ಆದರಕ್ಕೆ ಪಾತ್ರಳಾದವಳ ಮನಸ್ಸನ್ನು ಪ್ರಸನ್ನೀಕರಿಸಿಕೊಳ್ಳುವದಕ್ಕಿಂತ, ಹೆಚ್ಚು ಆನಂದಕರವಾದ ಕೆಲಸವು ಯಾವದಿರುವದು? ನನ್ನ ವಿಷಯವಾಗಿ ಸುಶೀಲೆಯು ಪ್ರಸನ್ನಚಿತ್ತಳಾದ್ದರಿಂದ, ನನಗೆ ಸ್ವರ್ಗಸುಖವು ಪ್ರಾಪ್ತವಾದಂತಾಯಿತು. ನಾನು ಆಕೆಯನ್ನು ಕುರಿತು —"ಸನ್ಮಾನನೀಯಳಾದ ಅಬಲಾಮಣಿಯೇ, ನಿನ್ನ ಮಹದಾಶ್ರಯದಿಂದ ನನಗೆ ಎಣೆಯಿಲ್ಲದ ಸೌಖ್ಯವು ಪ್ರಾಪ್ತವಾಗಿರಲು, ಏನು ಮಾಡಿದರೂ ನಿನ್ನ ಉಪಕಾರವು ತೀರುವದಾಗದು. ಸ್ವಜನರಲ್ಲಿ ಹೆಚ್ಚಿನ ಉಪಚಾರವು ಬೇಡ. ಇಂದಿನ ಬೇಟೆಯಲ್ಲಿ ನೀನು ವಿಶೇಷವಾಗಿ ದಣಿದಿರು

ವೆಯೆಂದು ತಿಳಿದು, ನಿನ್ನ ಸಮಾಧಾನಕ್ಕಾಗಿ ನಾನೇ ಬಂದೆನು. ಆಗಲಿ, ಈಗಮು ಇಲ್ಲಿಯೇ ಆಡೋಣ, ಎಂದು ನಾವಿಬ್ಬರು ಆನಂದದಿಂದ ಚದುರಂಗ ಮಾಡಹತ್ತಿದೆವು."

ಹೀಗೆಯೇ ಆನಂದದಿಂದ ನಾವು ಕಾಲಹರಣಮಾಡುತ್ತಿದ್ದೆವು. ದಿನದಿನಕ್ಕೆ ಪರಸ್ಪರರಲ್ಲಿ ಪ್ರೇಮವು ಹೆಚ್ಚುತ್ತ ಹೋಯಿತು. ಒಬ್ಬರನ್ನೊಬ್ಬರು ಅಗಲಿ ರದಾದೆವು. ಪರಸ್ಪರರ ದರ್ಶನವಾದಕೂಡಲೆ ಇಬ್ಬರಿಗೂ ಹರ್ಷವಾಯು ವಿನ ಸಂಚಾರವಾದಂತಾಗುತ್ತಿತ್ತು. ಆ ಕೋಮಲೆಯು ನನ್ನನ್ನು ಏನೋ ಕೇಳಬೇಕೆಂದು ಹಲವುಸಾರೆ ಯತ್ನಿಸಿದಳು. ಆದರೆ ಆಗ ಅವಳ ಮುಖದಿಂದ ಶಬ್ದಗಳೇ ಹೊರಡುತ್ತಿದ್ದಿಲ್ಲ! ಅದರ ಕಾರಣವು ಲಜ್ಜೆಯೋ, ಪ್ರೌಢತನವೋ, ಸೌಜನ್ಯವೋ ಯಾರಿಗೆಗೊತ್ತು! ಬಿಗಿಹಿಡಿದು ಗುದ್ದಿಕೂಡ್ರಿಸಿದ್ದ ನನ್ನ ಖೋಡಿ ಮನಸ್ಸು, ಬರಬರುತ್ತ ಮತ್ತೆ ಕಿಡಿಗೇಡಿತನ ಮಾಡಹತ್ತಿತು. ಅದರ ಕೈಯಲ್ಲಿ ಸಿಕ್ಕು ನಾನು ಎಷ್ಟೋಸಾರೆ ಸೌಜನ್ಯಕ್ಕೆ ಹಾನಿತಂದುಕೊಂಡೆನು. ವಿಪ್ರ ವರ್ಯಾ, ಆಗಿನ ಕಾಲದಲ್ಲೆಲ್ಲ ನಮ್ಮ ಸುಶೀಲೆಯು, ಮುಗುಳುನಗೆಯಿಂದ ನನ್ನನ್ನು ನೋಡಿ ಕ್ಷಮಿಸುತ್ತಿದ್ದಳು. ಆ ಕ್ಷಮೆಯಿಂದ ನಾನು ಮತ್ತಿಷ್ಟು ಎಚ್ಚರಗೆಡುತ್ತಿದ್ದೆನು. ಒಂದು ದಿನ ನಾವು ಪಗಡಿಯಾಡಹತ್ತಿದ್ದೆವೆ, ದಾಸಿ ಯರಲ್ಲಿ ನಾಲ್ಕು ಜನರು ಆ ಸುಂದರಿಯ ಕಡೆಗೆ, ನಾಲ್ಕು ಜನರು ನನ್ನ ಕಡೆಗೆ ಆಗಿ ಕುಳಿತುಕೊಂಡಿದ್ದಾರೆ, ನಾಲ್ಕಾರು ಆಟಗಳು ಆಗಿ ಅವುಗಳಲ್ಲಿ ಬಹುತರ ಆ ಸುಕುಮಾರಿಯೇ ಗೆದ್ದದ್ದರಿಂದ, ಆವೇಶಗೊಂಡು ಸ್ವಲ್ಪ ಲಜ್ಜೆದೊರೆದು ಆಕೆ ನನ್ನೊಡನೆ ಹಾಸ್ಯವಿನೋದಗಳನ್ನು ಮಾಡತೊಡಗಿದ್ದಾಳೆ. ಸೋತದ್ದ ಕ್ಕಾಗಿ ನನ್ನ ಥಸ್ತವಾದವನ್ನು ನಾನೇ ನನ್ನ ಮನಸ್ಸಿನಲ್ಲಿ ಮಾಡಿಕೊಳ್ಳಹತ್ತಿ ದ್ದೇನೆ. ನೋಹಾತಿಶಯದಿಂದ ನನ್ನ ಮೈಮೇಲಿನ ಎಚ್ಚರವು ತಪ್ಪಿದಂತಾಗಿ ರುತ್ತದೆ. ಇಂಥ ಬಂಗಾರದಂಥ ಹೊತ್ತಿನಲ್ಲಿ ಆ ಹರಿಣಾಕ್ಷಿಯು, ಸುಂದರವಾದ ಕಟಾಕ್ಷಗಳಿಂದ ನನ್ನನ್ನು ನೋಡುತ್ತ—ಈಸಾರೆ ಆಟದಲ್ಲಿ ಒಂದು ಪಣ ಮಾಡಬೇಕು. ಈ ಸಾರೆಯಂತು ನಾನು ಗೆಲ್ಲುವದೇ ನಿಶ್ಚಯ! ಆಗ ಸೋತ ವರು ಏನು ಮಾಡಬೇಕು? ಎಂದು ಕೇಳಲು, ನಿರ್ಲಜ್ಜನಾದ ನಾನು—ಮಾಡು ವದೇನು? ಗೆದ್ದವರು ಸೋತವರಿಗೆ ಒಂದು ಚುಂಬನ ಕೊಡಬೇಕು, ಎಂದು ತಕ್ಷಣ ಸೂಚಿಸಿಬಿಟ್ಟೆನು. ಅದನ್ನು ಕೇಳಿದ ಕೂಡಲೆ ದಾಸಿಯರು ಬೆರ

ಗಾಗಿ ನನ್ನನ್ನು ನೋಡಹತ್ತಿದರು. ಆ ಚಂಚಲಾಕ್ಷಿಯು ಚಟ್ಟನೆ ಎದ್ದು—ಸುಮಧ್ಯಮೇ, ಹೊತ್ತಾಯಿತು, ಇನ್ನು ಆಟ ಸಾಕು, ಎಂದು ನುಡಿದು ಹೊರಟು ಹೋದಳು. " ಮಿಂಚಿ ಹೋದ ಮಾತಿಗೆ ಚಿಂತಿಸಿ ಫಲವೇನು? " ಕುಲೀನತೆಗೆ ಒಪ್ಪದ ಮಾತನ್ನು ಆಡಿದ್ದಕ್ಕಾಗಿ ನನಗೆ ಬಹಳ ಪಶ್ಚಾತ್ತಾಪವಾಯಿತು. ಅಂದುರಾತ್ರಿ ನಾನು ಊಟಮಾಡಲಿಲ್ಲ, ಬೆಳತನಕ ನನಗೆ ನಿದ್ದೆಬರಲಿಲ್ಲ. ಬ್ರಾಹ್ಮಗೋತ್ತಮನೇ, ಎರಡು ದಿನ ನಾನು ಆಟದಕಡೆಗೆಹಣಕಿ ಸಹ ನೋಡಲಿಲ್ಲ, ಮನಬಿಚ್ಚಿ ಯಾರಸಂಗಡಲೂ ಮಾತಾಡಲಿಲ್ಲ. ಇನ್ನು ಮೇಲೆ ಆದಷ್ಟು ಮೌನದಿಂದಲೇ ಇರತಕ್ಕದ್ದೆಂದು ನಿಶ್ಚಯ ಮಾಡಿಕೊಂಡೆನು.

ನನ್ನ ಈ ಔದಾಸೀನ್ಯದಿಂದ ಆ ಸುಕುಮಾರಿಗೆ ಸುಖವಾದಂತೆ ತೋರಲಿಲ್ಲ. ಮೂರನೆಯ ದಿವಸ ಆಕೆಯು ಎರಡು ತಾಸು ಹೊತ್ತು ಇರುತ್ತ, ತಾನಾಗಿ ನನ್ನ ಮಂದಿರಕ್ಕೆ ದಾಸಿಯರೊಡನೆ ಬಂದು, ಮಂಜುಲ ಸ್ವರದಿಂದ—ಪ್ರತಾಪಶಾಲಿಗಳೇ, ಈಗೆರಡು ದಿನಗಳಿಂದ ನನ್ನ ಮನಸ್ಸಿಗೆ ಸೊಗಸಿಲ್ಲ. ಈ ದಿನ ಒಬ್ಬೊಬ್ಬರು ಒಂದೊಂದು ನಾವೆಯಲ್ಲಿ ಕುಳಿತು, ಕ್ರೀಡಾವನದೊಳಗಿನ ಸರೋವರದಲ್ಲಿ ಸಂಜೆಯವರೆಗೆ ಯಥೇಚ್ಛವಾಗಿ ಸಂಚರಿಸೋಣ. ನಾನು ಮೊನ್ನೆ ನಡುವೇ ಆಟ ಬಿಟ್ಟು ಎದ್ದು ಹೋದದ್ದರಿಂದ, ನಿಮಗೆ ಸಿಟ್ಟು ಬಂದಂತೆ ತೋರುತ್ತದೆ. ನಾನು ಯಾರಮೇಲಿನ ಸಿಟ್ಟಿನಿಂದಲೂ ಆಟವನ್ನು ಬಿಡಲಿಲ್ಲ. ಮನಸ್ಸಿಗೆ ಏನೋ ಒಂದು ತರವಾದ್ದರಿಂದ ಎದ್ದುಹೋದೆನು. ನನ್ನ ಈ ಉದ್ಧಟತನಕ್ಕಾಗಿ ಕ್ಷಮಿಸಬೇಕು. ಇಗೋ, ಕರಗೊಡ್ಡುತ್ತೇನೆ, ಈ ಅಬಲೆಯ ಮಾತನ್ನು ನಡಿಸಿ ಜಲಕ್ರೀಡೆಗಾಗಿ ಸಿದ್ಧರಾಗಬೇಕು, ಎಂದು ಪ್ರಾರ್ಥಿಸುವಾಗ, ಆ ಸುಂದರಿಯು ಸಂಪೂರ್ಣವಾಗಿ ನನ್ನ ಮನಸ್ಸನ್ನು ಎಳಕೊಂಡುಬಿಟ್ಟಳು. ಅಂದಿನಂಥ ಸುಂದರವಾದ ಉಡಪು—ತೊಡಪುಗಳನ್ನೂ, ಅಲಂಕಾರಗಳನ್ನೂ ಆಕೆಯು ಎಂದೂ ಹಾಕಿಕೊಂಡಿದ್ದಿಲ್ಲ. ನಾನು ಮತ್ತೆ ನಿರ್ಲಜ್ಜನಾಗಿ ಧೈರ್ಯದಿಂದ ಆ ಸುಂದರಿಯ ಮುಖಕಮಲವನ್ನು ಎವೆಯಿಕ್ಕದೆ ನೋಡಹತ್ತಿದೆನು; ಆಗ ಆಕೆಯು—ಹಾ! ಇನ್ನು ತಡವಾಗುತ್ತದೆ ಏಳಬೇಕು, ಎಂದು ನುಡಿದು ಮಂದಿರದಿಂದ ಹೊರಡಲು, ನಾನೂ ದರದರನಾಗಿ ಆಕೆಯ ಬೆನ್ನುಹತ್ತಿದೆನು.

ಸರೋವರದ ತೀರದಲ್ಲಿದ್ದ ಶಿಲಾಮಂಟಪಕ್ಕೆ ಹೋಗಿ ನಾವು ಕುಳಿತುಕೊಳ್ಳಲು, ದಾಸಿಯರು ತೋಟದೊಳಗಿನ ಮಲ್ಲಿಗೆ ಮೊದಲಾದ ತರತರದ

ಸುಗಂಧ ಪುಷ್ಪಗಳ ಅರಳು ಮೊಗ್ಗೆಗಳನ್ನು ತಂದು, ಮಾಲೆಗಳನ್ನು ಕಟ್ಟಹತ್ತಿದರು. ನಮ್ಮ ಸುಶೀಲೆಯು ತನ್ನ ಕೋಮಲ ಕರಗಳಿಂದ ಒಂದು ಸುಂದರವಾದ ಹಾರವನ್ನೂ, ಮನೋಹರವಾದ ಒಂದು ತುರಾಯಿಯನ್ನೂ ಹಾ ಹಾ ಅನ್ನುವದರೊಳಗೆ ಕಟ್ಟಿದಳು. ಬ್ರಹ್ಮರ್ಷಿಯೇ, ಆಗಿನ ಸುಖವನ್ನೇನು ವರ್ಣಿಸಲಿ! ಇಳಿಹೊತ್ತಾಗಿದೆ; ಅರಳು ಮೊಗ್ಗೆಗಳ ಮಿಶ್ರಸುಗಂಧವು ಎಲ್ಲಕಡೆಗೆ ಇಡಿಗಿದೆ; ತಂಗಾಳಿಯು ಅಲ್ಲಿಕೂಡಿದ್ದ ಸುಂದರಿಯರ ಸುಂದರಾಲಕಗಳನ್ನು ಮೆಲ್ಲನೆ ಹಾರಿಸುತ್ತ ಸುಳಿದಾಡಹತ್ತಿದೆ; ಪ್ರಮದೆಯರ ತಂಡವು ಕೈಯೊಳಗಿನಮಾಲೆಗಳನ್ನು ಮುಗಿಸತೊಡಗಿದೆ; ಸುಶೀಲೆಯಲ್ಲಿ ನಟ್ಟಿದ್ದ ನನ್ನ ಕಣ್ಣು—ಮನಗಳು ಕಿತ್ತಲಾರದಾಗಿವೆ. ಇಂಥ ಪ್ರಸಂಗದಲ್ಲಿ ಆ ಚಾರುಗಾತ್ರೆಯು ಮುಗುಳುನಗೆಯಿಂದ ನನ್ನ ಮೋರೆಯನ್ನು ನೋಡುತ್ತ, ಸುಮಧ್ಯಮೆಯ ಕೈಯ್ಯಲ್ಲಿ ಹಾರವನ್ನೂ, ತುರಾಯಿಯನ್ನೂ ಕೊಟ್ಟಳು. ಚತುರಳಾದ ಸುಮಧ್ಯಮೆಯು ನನ್ನ ಬಳಿಗೆಬಂದು, ಕೊರಳಲ್ಲಿ ಹಾರವನ್ನು ಹಾಕಿ, ಕೈಯ್ಯಲ್ಲಿ ತುರಾಯಿ ಕೊಟ್ಟಳು. ದ್ವಿಜಶ್ರೇಷ್ಠಾ, ಸ್ವರ್ಗದಲ್ಲಿ ಇದಕ್ಕೂ ಹೆಚ್ಚಿನ ಸುಖವಿರಬಹುದೋ, ನೀನೇ ಹೇಳು! ಮಾಲೆ—ತುರಾಯಿಗಳನ್ನು ಕಟ್ಟಿಕೊಟ್ಟ ಕೂಡಲೆ ಆ ಚಪಲೆಯು ತನ್ನ ನಾವೆಯಕಡೆಗೆ ನಡೆದಳು. ನಾವೂ ಆಕೆಯನ್ನು ಹಿಂಬಾಲಿಸಿದೆವು. ನಾವೆಯನ್ನೇರಿದ ಆ ವಿಶಾಲಾಕ್ಷಿಯನ್ನು ದಾಸಿಯರು ಮಾಲೆಗಳಿಂದ ಅಲಂಕರಿಸಲು, ಆಕೆಯು ಸೌಂದರ್ಯದಿಂದ ಸ್ವರ್ಗಾಂಗನೆಯನ್ನು ಮೀರಿದಳು! ಆ ದಿವ್ಯ ಮೂರ್ತಿಯು ಈಗೂ ನನ್ನ ಕಣ್ಣಮುಂದೆ ಕಟ್ಟಿರುತ್ತದೆ.

ನಮ್ಮೆಲ್ಲರ ನಾವೆಗಳು ಸರೋವರದಲ್ಲಿ ಸಾಗಿದವು. ಅಬಲೆಯರು ಆವೇಶದಿಂದ ಹುಟ್ಟುಹಾಕಿ, ನಾನು ಮುಂದೆ ನೀನು ಮುಂದೆ ಎಂದು ನಾವೆ ನಡಿಸುವದನ್ನು ನೋಡಿ, ನನಗೆ ಕೌತುಕವಾಯಿತು. ಆಗಿನ ನಮ್ಮ ಚಾರುಗಾತ್ರೆಯ ಸೊಬಗನ್ನೇನು ವರ್ಣಿಸಲಿ! ಹುಟ್ಟುಹಾಕಿ ದಣಿದದ್ದರಿಂದ ಅವಳ ಮುಖಕಮಲವು ಬೆವತಿತ್ತು, ಸರೋವರದಮೇಗಿನ ತಂಗಾಳಿಯಿಂದ ಅವಳ ನೀಲಾಲಕಗಳು ಹಾರಾಡುತ್ತಿದ್ದವು, ಹುಟ್ಟು ಹಾಕುವಾಗ ಸೆರಗು ಜಾರಿ ಸ್ವಲ್ಪ ಹೊರಬಿದ್ದ ಬಟ್ಟಕುಚಗಳು ಕುಪ್ಪುಸವನ್ನು ಒತ್ತಿ ದೃಷ್ಟಿಬರುತ್ತಿದ್ದವು. ಆಹಹ! ದಣಿದು ಹುಟ್ಟು ಇಟ್ಟು ವಿಶ್ರಾಂತಿಗಾಗಿ ನಾವೆಯಲ್ಲಿ ಎದ್ದು ನಿಂತಾಗ, ಹೊರ

ಸೂಸುವ ಆ ಹರಿಣಾಕ್ಷಿಯ ಕಟಾಕ್ಷಗಳ ತಾಕಲಾಟದಿಂದ ಯಾವ ಪುರುಷನು ಘಾಸಿಪ್ಪನಾಗಲಿಕ್ಕಿಲ್ಲ? ಶ್ರಮವಾರಿ ಬಿಂದುಗಳನ್ನು ಸೆರಗಿನಿಂದ ಒರಸಿಕೊಂಡು, ಸುಂದರಾಲಕಗಳನ್ನು ಸರಿಮಾಡಿಕೊಳ್ಳುವಾಗ ಆಕೆಯ ಚಾರುಗಾತ್ರವನ್ನು ನೋಡಿ, ಯಾವನು ಮೋಹಿಸಲಿಕ್ಕಿಲ್ಲ? ಆನಂದದ ಲಹರಿಗಳೇಳಲು, ಆಕೆಯು ಮಂಜುಳಸ್ವರದಿಂದ ಗಾನಮಾಡುವಾಗ, ಯಾವನ ಧೈರ್ಯವು ಹಾಳಾಗಿ ಹೋಗಲಿಕ್ಕಿಲ್ಲ! ಬ್ರಾಹ್ಮಣಶ್ರೇಷ್ಠಾ, ಇಂಥ ಸುಂದರ ಮೂರ್ತಿಯನ್ನು ಬ್ರಹ್ಮನು ಸೃಷ್ಟಿಸಿರಲು, ವನಿತಾದಿ ವಿಷಯಗಳು ವಿಷಸಮವೆಂದು ಹರಟುವವರ ಹರಟೆಯು ವ್ಯರ್ಥವಲ್ಲವೆ? ಸಂಸಾರವು ಅಸಾರವೆಂದು ಗಿರಿ—ಗಂಹರಗಳನ್ನು ಸೇರುವವರ ಪೌರುಷವು ನಿಂದ್ಯವಾದದ್ದಲ್ಲವೇ? ನಾನಂತು ಸ್ವರ್ಗವಿದ್ದರೆ, ಅದು ಕ್ರೀಡಾವನದೊಳಗಿನ ಆಗಿನ ಕಾಲದ ಸರೋವರವೇ ಆಗಿರಬಹುದೆಂದು ತಿಳಿಯುವೆನು!

ದ್ವಿಜೋತ್ತಮಾ, ದಿನಮಣಿಯು ದಣಿದು ಪಶ್ಚಿಮದಿಕ್ಕಿನಲ್ಲಿ ಮರೆಯಾಗುವ ಹವಣಿಕೆಯಲ್ಲಿದ್ದನು; ಹೂ ಬಿಸಿಲು ಅಲ್ಲಲ್ಲಿ ಬಿದ್ದು ಸರೋವರದ ಶೋಭೆಯನ್ನು ಹೆಚ್ಚಿಸುತ್ತಿತ್ತು; ಪಕ್ಷಿಗಳು ಗೂಡು ಸೇರುವದಕ್ಕಾಗಿ ಆಕಾಶದಲ್ಲಿ ಹಾರಾಡುತ್ತಿದ್ದವು; ಕತ್ತಲಾಗುತ್ತದೆಂದು ಎಲ್ಲರೂ ನಮ್ಮ ನಮ್ಮ ನಾವೆಗಳನ್ನು ತಿರುಗಿಸಿದ್ದೆವು. ಅಷ್ಟರಲ್ಲಿ ನಾವೆಯೊಳಗೆ ಹುಟ್ಟುಹಾಕಿ ದಣಿದು ವಿಶ್ರಾಂತಿಯನ್ನು ಹೊಂದುತ್ತಿದ್ದ ಸುಶೀಲೆಯು, ತತ್ತರಿಸುತ್ತ ಒಮ್ಮಿಂದೊಮ್ಮೆ ಸರೋವರದಲ್ಲಿ ಬಿದ್ದಳು! ಆಗ ನನ್ನ ಹೃದಯಕ್ಕೆ ಸಿಡಿಲು ಬಡಿದಂತಾಯಿತು! ದಾಸಿಯರು ಹಾ ಹಾ ಕಾರವನ್ನುಂಟುಮಾಡಿದರು! ದಿಕ್ಕುಗಳು ಶೂನ್ಯವಾದವು! ಕೂಡಲೆ ನಾನು ಸರೋವರದಲ್ಲಿ ಹಾರಿ, ಕ್ಷಣಾರ್ಧದಲ್ಲಿ ಸುಶೀಲೆಯ ಕೈಹಿಡಿದು ಮೇಲಕ್ಕೆತ್ತಿ ನಾವೆಯನ್ನು ಹತ್ತಿಸಿ, ನಾನೂ ಹತ್ತಿದೆನು. ಭಯದಿಂದ ನಡುಗುತ್ತಿದ್ದ ನಮ್ಮ ಚಂಚಲಾಕ್ಷಿಯು ಬೆದರಿ, ನನ್ನನ್ನು ಗಟ್ಟಿಯಾಗಿ ಅಪ್ಪಿಕೊಂಡು—ಪುರುಷಶ್ರೇಷ್ಠಾ, ಈ ಗೋಧೂಲಿಯ ಲಗ್ನದಲ್ಲಿ ಈ ಅನಾಥಳ ಪ್ರಾಣರಕ್ಷಣಮಾಡುವಾಗ ಪಾಣಿಗ್ರಹಣ ಮಾಡಿದ್ದು, ವ್ಯರ್ಥವಾಗಬಾರದು ಕಂಡೆಯಾ! ಇನ್ನು ಪದ್ಮನಯನೆಯು ನಿರಾಶ್ರಿತಳಾಗಿ ಇರಲಾರಳು! ಇಗೋ, ಪಗಡೆಯ ಆಟದಲ್ಲಿ ನಿನ್ನ ಪಾಲಿನದಾಗಿ ಉಳಿದ ಚುಂಬನವು! ಎಂದು ಮುಖವೆತ್ತಲು, ಆಕೆಯ ಪಾಣಿಗ್ರಹಣ ಮಾಡಿದ ನಾನು, ಮೆಲ್ಲನೆ ಅದನ್ನು ಚುಂಬಿಸಿ ಕೃತಕೃತ್ಯನಾದೆನು!



## ೭ ನೆಯ ಪ್ರಕರಣ.

# ದುರದೃಷ್ಟ.



ಪ್ರಿಯವಾಚಕರೇ, ಈ ಮೇರೆಗೆ ಆಕಸ್ಮಿಕವಾಗಿ ಆದ ಪ್ರಾಯಶ್ಚರ ಪಾಣಿಗ್ರಹಣ ಮಹೋತ್ಸವವನ್ನು ಓದಿ, ನಿಮ್ಮ ಮನಸ್ಸು ಸಮಾಧಾನಪಟ್ಟಿರಬಹುದು. ಆ ಮಹೋತ್ಸವದಲ್ಲಿ ಚಾರುಗಾತ್ರೆಯು "ಇನ್ನು ಪದ್ಮನಯನೆಯು ನಿರಾಶ್ರಿತಳಾಗಿ ಇರಲಾರಳು!" ಎಂದು ನುಡಿದದ್ದನ್ನು ಓದಿ ಜಾಣಾಕ್ಷರಾದ ನೀವು ಮೊದಲೇ ತರ್ಕಿಸಿದ್ದಂತೆ, ಆವಳು ವೀರವರ್ಮನ ಮಗಳಾದ ಪದ್ಮನಯನೆಯೆಂದು ಗೊತ್ತು ಹಿಡಿದಿರಬಹುದು. ನಿಮ್ಮಂತೆ ಸುಮತಿಯಾದರೂ ಗೊತ್ತು ಹಿಡಿದನು. ಇರಲಿ, ತಿಳಿಯತಕ್ಕ ಸಂಗತಿಗಳು ಇನ್ನೂ ಹಲವು ಇರುವವು. ಕಮಲಾಕ್ಷನು ತನ್ನ ವೃತ್ತಾಂತವನ್ನು ಪೂರ್ಣವಾಗಿ ಹೇಳಿದನೆಂದರೆ ಎಲ್ಲ ಗೊತ್ತಾಗುವದು. ಬ್ರಹ್ಮಾನಂದದಸ್ಮರಣದಿಂದ ಸಂತುಷ್ಟನಾಗಿದ್ದ ಸುಮತಿಯನ್ನು ಕುರಿತು ಕಮಲಾಕ್ಷನು—ಭೂಸುರೋತ್ತಮನೆ, ಈ ಮೇರೆಗೆ ನಮ್ಮಿಬ್ಬರ ಪಾಣಿಗ್ರಹಣವಾದ ಬಳಿಕ ಆನಂದಿಂದ ಎಲ್ಲರೂ ಮನೆಗೆ ಬಂದೆವು. ಇಂದಿನಿಂದ ನಮ್ಮ ಸುಶೀಲೆಯ, ಅಲ್ಲ ಅಲ್ಲ ಪದ್ಮನಯನೆಯ ನಡತೆಯಲ್ಲಿ ಅಂತರವಾಗಹತ್ತಿತು. ಇಲ್ಲಿಯ ವರೆಗೆ ಪರಕೀಯನಾಗಿದ್ದ ನಾನು, ಇಂದು ಪದ್ಮನಯನೆಯ ಪತಿಯಾದ್ದರಿಂದ, ನಮ್ಮಿಬ್ಬರಲ್ಲಿ ಸತೀ–ಪತಿಗಳ ಪವಿತ್ರಸಂಬಂಧವು ಉತ್ಪನ್ನವಾಯಿತು. ಈ ಸಂಬಂಧಕ್ಕನುಸರಿಸಿ ನಮ್ಮಿಬ್ಬರ ನಡತೆಯಲ್ಲ ಪ್ರೇಮ, ಗೌರವ, ಆದರ ಇವು ಹೆಚ್ಚುತ್ತ ಹೋದವು. ಪರಸ್ಪರರ ವೃತ್ತಾಂತವನ್ನು ತಿಳಕೊಳ್ಳುವದಕ್ಕಾಗಿ ನಮ್ಮಿಬ್ಬರ ಮನಸ್ಸು ಹರಿಯಹತ್ತಿದವು. ಒಂದು ದಿನ ರಾತ್ರಿ ನಾವು ಆನಂದದಿಂದ ಮಾತಾಡುತ್ತ ಕುಳಿತಾಗ, ನಾನು ಪದ್ಮನಯನೆಯನ್ನು ಕುರಿತು—ಪ್ರಿಯೇ, ಪದ್ಮನಯನೆ, ನೀನು ನನ್ನ ಪಾಣಿಗ್ರಹಣ ಮಾಡಿದ್ದರಿಂದ ನಾನು ಕೃತಾರ್ಥನಾದೆನು. ನನ್ನ ವೃತ್ತಾಂತವನ್ನು ಕೇಳಬೇಕೆಂಬ ಕುತೂಹಲವು, ಸ್ವಾಭಾವಿಕವಾಗಿ ನಿನ್ನಲ್ಲಿ ಉಂಟಾಗಿರಬಹುದು. ನೀನು ಯಾರೆಂಬದನ್ನು ತಿಳ

ಕೊಳ್ಳುವದಕ್ಕೆ ನನ್ನ ಮನಸ್ಸಾದರೂ ಹರಿಯುತ್ತದೆ. ಆದರೆ ನನ್ನ ವೃತ್ತಾಂತ ವನ್ನು ಮೊದಲು ಕೇಳು; ಹಿಂದಿನಿಂದ ನಿನ್ನ ವೃತ್ತಾಂತವನ್ನು ಹೇಳುವೆಯಂತೆ, ಎಂದು ನುಡಿದು, ನಿನ್ನ ಮುಂದೆ ಇದೇ ಈಗ ಹೇಳಿದಂತೆ, ನಾನು ಯಾವ ದೇಶದ ರಾಜಪುತ್ರನು, ನನ್ನ ಹೆಸರೇನು, ಯಾವಕಾರಣದಿಂದ ಕಾರಾಗೃಹದಲ್ಲಿ ಇಡಲ್ಪಟ್ಟೆನು, ಅಲ್ಲಿಂದ ಹೇಗೆ ಹೊರಬಿದ್ದೆನು, ಸಂಕಟಗಳ ಪರಂಪರೆಯು ಹೇಗೆ ಒದಗಿತು, ಗುಹಾ ಪ್ರವೇಶವು ಹೇಗಾಯಿತು, ಉಪವನವನ್ನು ನೋಡಿ ಎಷ್ಟು ಬೆರಗಾದೆನು, ಸರೋವರದ ತೀರದ ಶಿಲಾಮಂಟಪದಲ್ಲಿ ಹೇಗೆ ಶಯನ ಮಾಡಿದೆನು, ಎಂಬ ಇವೇ ಮೊದಲಾದ ಸಂಗತಿಗಳನ್ನು ಒಂದು ಅಕ್ಷರ ಬಿಡದೆ ಹೇಳಿ, ನಾನು ಅವಳನ್ನು ಕುರಿತು—ಚಾರುಗಾತ್ರಿಯೇ, ಸರೋವರದ ಶಿಲಾಮಂಟಪದಲ್ಲಿ ಮಲಗಿಕೊಂಡಿದ್ದ ನಾನು, ನಿನ್ನ ಈ ಭವ್ಯ ಮಂದಿರಕ್ಕೆ ಹೇಗೆ ಬಂದೆನೆಂಬದರ ಕಲ್ಪನೆಯೇ ಹರಿಯದ ಬಳಿಕ ಮುಂದಿನ ಸಂಗತಿಯನ್ನು ನಾನೇನು ಹೇಳುತ್ತೇನೆ? ಇದಕ್ಕಾಗಿ ಮನಸ್ಸಿನಲ್ಲಿ ವಿಕಲ್ಪ ವನ್ನು ತಂದುಕೊಳ್ಳಲಾಗದು, ಎಂದು ಹೇಳಿದೆನು.

ಈ ಪ್ರಕಾರದ ನನ್ನ ವೃತ್ತಾಂತವನ್ನು ಕೇಳಿ, ಆ ಸುಂದರಿಯು ಪ್ರೇಮ ಯುಕ್ತ ಸೌಮ್ಯ ಸ್ವರದಿಂದ—ಪ್ರಭುಗಳೇ, ಸಾಕುಬಿಡಿರಿ, ಮುಂದಿನ ಎಲ್ಲ ಸಂಗ ತಿಯು ನನಗೆ ಗೊತ್ತಿದ್ದದ್ದೇ ಅದೆ. ಇಂದಿಗೆ ನಾನು ಧನ್ಯಳಾದೆನು. ಕಪಿಂಜಲ ಋಷಿಗಳ ಒಂದು ಮಾತು ಸತ್ಯವಾಯಿತು. ಆ ಮಹಾತ್ಮನು ನಾನು ಸಾರ್ವ ಭೌಮನ ಪಟ್ಟದರಾಣಿಯಾಗುವೆನೆಂದು ಭವಿಷ್ಯವನ್ನು ಹೇಳಿದ್ದನು. ತಾವು ಆಕಸ್ಮಿಕನಾಗಿ ಕಣ್ಣಿಗೆ ಬಿದ್ದವರಾದ ಕಾರಣ, ತಮ್ಮ ರೂಪವು ಮೋಹಕ ವಿದ್ದಂತೆ, ಅವಕ್ಕೆ ತಕ್ಕ ಗುಣಗಳೂ, ಕುಲೀನತೆಯೂ, ಚಾತುರ್ಯವೂ ತಮ್ಮಲ್ಲಿ ಇರುವವೋ ಇಲ್ಲವೋ ಎಂದು ನಾನು ಶಂಕಿಸುತ್ತಿದ್ದೆನು. ಅವೆಲ್ಲ ತಮ್ಮಲ್ಲಿ ಪರಿಪೂರ್ಣವಾಗಿರುವವಲ್ಲದೆ, ತಾವು ಶೌರ್ಯಸಾಗರರಿರುವಿರೆಂದು ಮನಗಂಡೆನು. ನಿಷ್ಕಲಂಕಳಾಗಿದ್ದ ನಾನು, ತಮ್ಮ ಸಂಶಯಗಳನ್ನೆಲ್ಲ ದೂರ ಮಾಡುವನೆಂಬ ನಂಬಿಗೆಯಿಂದಲೇ, ನನ್ನ ತನು–ಮನೋಧನಗಳನ್ನು ಮನಃ ಪೂರ್ವಕವಾಗಿತಮಗೆಅರ್ಪಿಸಿದ್ದೇನೆ. ನನ್ನ ಶರೀರಕ್ಕೂ,ಪ್ರಾಣಕ್ಕೂ ನೀವೇ ಒಡೆ ಯರು, ಎಂದು ನುಡಿಯಲು, ನಾನು ಆ ಪ್ರಮದೆಯನ್ನು ಕುರಿತು ಕೃತಜ್ಞತೆ ಯಿಂದ–ಪ್ರಾಣಪ್ರಿಯೇ, ಇತ್ತ ಬಾ. ನೀನು ನಿಷ್ಕಳಂಕಳೆಂಬದನ್ನು ನಿನ್ನ ಸ್ವಾತ

ಲಂಬನದಿಂದಲೇನಾನು ತಿಳಕೊಂಡೆನು. ಸುಂದರಿಯೂ, ಸುಗುಣೆಯೂ, ಸುಶಿಕ್ಷಿತಳೂ ಆದ ನೀನು ನನ್ನ ಅರ್ಧಾಂಗಿಯಾದದ್ದರಿಂದ, ನನಗಿಂತ ಧನ್ಯನು ಯಾವನಿರುವನು? ನನ್ನ ಶ್ರಮವು ಸಫಲವಾಯಿತು. ನಿನ್ನ ಮನಸ್ಸಿನ ದುಗುಡನ್ನು ಬಿಟ್ಟು, ನಿನ್ನ ವೃತ್ತಾಂತವನ್ನು ಹೇಳು, ಅನ್ನಲು, ಅವಳು ಉತ್ಸಾಹದಿಂದ ಅದನ್ನು ಹೇಳತೊಡಗಿದಳು.

ಪ್ರಿಯವಾಚಕರೇ, ಪದ್ಮನಯನೆಯ ಸುದ್ದಿಯನ್ನು ಕೆಲ ಮಟ್ಟಿಗೆ ನೀವು ಬಲ್ಲವರಾದ್ದರಿಂದ, ಅದನ್ನು ಮತ್ತೆ ಕೇಳಲಿಕ್ಕೆ ನಿಮಗೆ ಬೇಸರಬರಬಹುದು. ಆದರೆ ಪದ್ಮನಯನೆಯು ಪ್ರೀತಿಪೂರ್ವಕವಾಗಿ ತನ್ನ ಪತಿಯ ಮುಂದೆ, ಅದನ್ನು ಹೇಳುತ್ತಾಳೆಂಬದನ್ನು ಮರೆಯಬೇಡಿರಿ. ಇದಲ್ಲದೆ ಪದ್ಮನಯನೆಯ ಸಂಪೂರ್ಣವಾದ ಇತಿಹಾಸವನ್ನು ನೀವು ಅರಿತುಕೊಳ್ಳಬೇಕಾಗಿರುವದು. ಅದಕ್ಕಾಗಿ ನೀವು ಅದನ್ನು ಮೊದಲಿನಿಂದ ಸುಮತಿಯ ಸಂಗಡ ಇನ್ನೊಮ್ಮೆ ಕೇಳಿರಿ. ಪದ್ಮನಯನೆಯು ಕಮಲಾಕ್ಷನನ್ನು ಕುರಿತು—ಪ್ರಭುಗಳೇ, ಈ ಅನಾಥಳ ವೃತ್ತಾಂತವನ್ನು ಚಿತ್ತಗೊಟ್ಟು ಕೇಳುವದಾಗಬೇಕು. ವಿಂಧ್ಯಾದ್ರಿಯ ಉತ್ತರಕ್ಕೆ ಕನೋಜವೆಂಬ ಅತಿ ವಿಖ್ಯಾತವಾದ ರಾಜ್ಯವಿದ್ದದ್ದು ತಮಗೆ ಗೊತ್ತಿರಬಹುದು. ಅಲ್ಲಿ ವೀರವರ್ಮನೆಂಬ ಅರಸನು ನ್ಯಾಯದಿಂದ ರಾಜ್ಯಪರಿಪಾಲನೆಯನ್ನು ಮಾಡುತ್ತಿರಲು, ಮುಪ್ಪಿನಕಾಲಕ್ಕೆ ಕಪಿಂಜಲ ಋಷಿಗಳ ಅನುಗ್ರಹದಿಂದ ಆತನಿಗೆ ನಾನೊಬ್ಬಳೇ ಮಗಳು ಹುಟ್ಟಿದೆನು. ನನಗೆ ಪದ್ಮನಯನೆಯೆಂದು ಹೆಸರಿಟ್ಟರು. ಕಪಿಂಜಲ ಋಷಿಗಳು ನನ್ನ ತಂದೆಗೆ—ಅರಸಾ, ನಿನ್ನ ಮಗಳು ಹದಿನಾರನೆಯ ವರ್ಷದಲ್ಲಿ ನಿನ್ನನ್ನು ಅಗಲಿ ಹೋಗಿ ಬಹಳ ಕಷ್ಟಪಡುವಳು; ಆದರೂ ಆಕೆಯು ಸಾರ್ವಭೌಮನ ರಾಣಿಯೂ, ಸಾರ್ವಭೌಮನ ತಾಯಿಯೂ ಆಗಿ ನಿನಗೆ ಕಡೆಗೆ ಸುಖವನ್ನು ಕೊಡುವಳು, ಎಂದು ಭವಿಷ್ಯವನ್ನು ಹೇಳಿದರು. ಅರಸನು ಅರಗಳಿಗೆಯಾದರೂ ಅಗಲದೆ ನನ್ನ ರಕ್ಷಣೆ ಮಾಡುತ್ತಿದ್ದನು; ಆದರೆ ದೊಡ್ಡವರ ಮಾತು ಹೇಗೆ ಸುಳ್ಳಾಗಬೇಕು? ಮುಂದೆ ಋಷಿಗಳು ಮುಪ್ಪಿನಿಂದ ದೇಹವಿಟ್ಟದ್ದರಿಂದ ಅವರ ಶ್ಮಶಾನಯಾತ್ರೆಯು ಉತ್ಸವದಿಂದ ನಡೆಯಿತು. ಆಗ ನಾನು ತೀಕ್ಷ್ಣವೇಗವೆಂಬ ಹೆಸರಿನ ನನ್ನ ಪಟ್ಟದ ಕುದುರೆಯನ್ನು ಹತ್ತಿದೆನು. ಋಷಿಯ ವಚನವನ್ನು ಸತ್ಯವಾಗಿಮಾಡುವದಕ್ಕಾಗಿಯೋ ಏನೋ ತಿಳಿಯದು ; ತೀಕ್ಷ್ಣವೇಗವು

ಭಯಂಕರವಾದ ವೇಗದಿಂದ ಒಂದೇ ಸವನೆ ದಕ್ಷಿಣ ದಿಕ್ಕಿಗೆ ಒಂಬತ್ತು ತಾಸು ಓಡಿ, ಒಂದು ಅರಣ್ಯಮಧ್ಯವನ್ನು ಹೊಕ್ಕು ದಣಿದು ಬಿದ್ದಿತು. ಅಂಗ ರಕ್ಷಕರೆಲ್ಲ ಹಿಂದಾದರು. ಅವರಲ್ಲಿ ಘನಮಲ್ಲನೆಂಬ ಹೆಸರನ್ನಿಟ್ಟುಕೊಂಡು, ನನ್ನನ್ನು ಅಪಹರಿಸುವದಕ್ಕಾಗಿ ನನ್ನ ತಂದೆಯ ಬಳಿಯಲ್ಲಿ ಸರದಾರನಾಗಿ ಬಹು ದಿವಸ ಹೊಂಚು ಹಾಕಿದ್ದ ಮೇಘನಾದನೆಂಬ ದೈತ್ಯನು, ನನ್ನ ಬಳಿಗೆ ಬಂದು ನನ್ನನ್ನು ಅಪಹರಿಸಿಕೊಂಡು ಈ ಗುಪ್ತವಾದ ವಿಹಾರಮಂದಿರದಲ್ಲಿ ಇಟ್ಟನು. ಅವನು ಆಗಲೇ ನನ್ನ ಮೇಲೆ ಬಲತ್ಕಾರ ಮಾಡತಕ್ಕವನು; ಆದರೆ ಕಪಿಂಜಲ ಗುರುಗಳು, ನನ್ನ ಮೇಲೆ ಬಲತ್ಕಾರ ಮಾಡುವವರ ನಾಶವಾಗ ಲೆಂದು ಶಪಿಸಿದ್ದನ್ನು ಅವನು ಕೇಳಿದ್ದರಿಂದ, ಭಯಪಟ್ಟು ಆತನು ಹಾಗೆ ಮಾಡ ಲಿಲ್ಲ. ನಾನು ಶ್ರೀ ಗೌರಿಯ ಪೂಜೆಗಾಗಿ ರಾಕ್ಷಸನಿಂದ ಒಂದು ವರ್ಷದ ಅವ ಧಿಯನ್ನು ಪಡೆದಿದ್ದೇನೆ; ಏಳುದಿನಕ್ಕೊಮ್ಮೆ, ಅಂದರೆ ಪ್ರತಿಮಂಗಳವಾರ ಮಾತ್ರ ಆತನು ನನ್ನ ಭೆಟ್ಟಿಗೆ ಬರುತ್ತಾನೆ. ನಡುವೆ ಎಂದೂ ಬರುವದಿಲ್ಲ. ನನ್ನ ಮೇಲಿನ ಲೋಭಾತಿಶಯದಿಂದಲೂ, ನನ್ನ ಸದ್ಗುಣಗಳ ಮೇಲಿನ ನಂಬಿಗೆಯಿಂದಲೂ ಮೇಘನಾದನು ನನಗೆ ಪೂರ್ಣ ಸ್ವಾತಂತ್ರ್ಯವನ್ನು ಕೊಟ್ಟಿರುತ್ತಾನೆ. ನನ್ನ ಇಚ್ಛೆಯ ವಿರುದ್ಧವಾಗಿ ಏನಾದರೂ ಪ್ರಸಂಗ ಒದಗಿ ದರೆ, ಅಥವಾ ನನಗೆ ಏನಾದರೂ ಸಂಕಟ ಒದಗಿದರೆ, ನಾನು ಮೇಘನಾದ ನನ್ನು ಸ್ಮರಿಸಿದರೆ ಸಾಕು; ಆತನು ಇಲ್ಲಿ ಬಂದು ನಿಲ್ಲುವನು. ಅವನ ಮಾಯಾ ಸಾಮರ್ಥ್ಯವೇ ಅಂಥಾದ್ದು. ಅಂಥ ವಿಚಿತ್ರ ಸಾಮರ್ಥ್ಯವುಳ್ಳವನಿಂದಲೇ ಈ ಉದ್ಯಾನದಲ್ಲಿ ಒಬ್ಬ ಕಾವಲಿಗನ ಅವಶ್ಯಕತೆ ಕೂಡ ಇರುವದಿಲ್ಲ. ಎಲ್ಲ ಮಾತು ನನ್ನ ಇಚ್ಛೆಯನ್ನವಲಂಬಿಸಿರುವದು. ವಿಹಾರಕ್ಕೆ ತಕ್ಕದ್ದಾದ ಇಂಥ ನಿಷ್ಕಂಟಕ ರಮ್ಯಸ್ಥಳವು ದೊರೆತಿದ್ದರೂ, ವಿಹಾರದ ಮುಖ್ಯ ಸಾಧನವು ನನ್ನ ಮನಸ್ಸಿನಂತೆ ದೊರೆಯದ್ದರಿಂದ ಇದು ನನಗೆ ಶ್ಮಶಾನದಂತೆ ತೋರುತ್ತಿರು ವದು. ದಿನಾಲು ಇಳಿಹೊತ್ತಾದ ಕೂಡಲೆ ವಿಶ್ರಾಂತಿಗಾಗಿ ದಾಸಿಯರನ್ನು ಕೂಡಿಕೊಂಡು ಸರೋವರಕ್ಕೆ ಹೋಗುವದು ನನ್ನ ಕ್ರಮವಾಗಿತ್ತು. ಅದರಂತೆ ನಾನು ಒಂದು ದಿನ ಸರೋವರಕ್ಕೆ ಬಂದಾಗ್ಗೆ ಶಿಲಾಮಂಟಪದಲ್ಲಿ ನೀವು ಮಲ ಗಿರುವದನ್ನು ನೋಡಿದೆನು. ನಿಮ್ಮ ರೂಪವೂ, ಪ್ರಾಯವೂ ನನ್ನ ಮನಸ್ಸನ್ನು ಎಳಕೊಂಡವು; ಆದರೆ ತಮ್ಮ ಗುಣಗಳನ್ನೂ, ಸತ್ವವನ್ನೂ ಪರೀಕ್ಷಿಸಬೇಕೆಂದು,

ಮೇಘನಾದನಲ್ಲಿ ಮೊದಲೇ ಅಭ್ಯಾಸಿಸಿದ್ದ ಮೋಹಿನೀ ಮಂತ್ರದ ಸಹಾಯದಿಂದ, ನಿಮ್ಮನ್ನು ಈ ಮಂಚದ ಮೇಲೆ ತಂದು ಮಲಗಿಸಿ, ಮಂತ್ರವನ್ನು ಉಪಸಂಹರಿಸಿದೆನು. ಸುಮಧ್ಯಮೆಗೆ ಕಲಿಸತಕ್ಕದ್ದನ್ನು ಕಲಿಸಿ, ನಿಮ್ಮ ಬಳಿಗೆ ಕಳಿಸಿದಾಗ ನೀವು ಆಡಿದ ಮಾತುಗಳಿಂದ ನೀವು ಧೈರ್ಯಶಾಲಿಗಳಿರುವಿರೆಂದು ಮನಗಂಡೆನು. ಅಂದೇ ನಾನು ನಿಮ್ಮ ಪಾಣಿಗ್ರಹಣ ಮಾಡತಕ್ಕವಳು; ಆದರೆ ನಿಮ್ಮ ಕುಲಶೀಲಾದಿಗಳು ಗೊತ್ತಾಗದ್ದರಿಂದ ಕುಲೀನತೆಗೆ ಭಂಗ ಬಂದೀತೆಂಬ ಭಯದಿಂದ, ನನ್ನ ಮನೋಭಾವವನ್ನು ವ್ಯಕ್ತಮಾಡದೆ, ಗಾಂಭೀರ್ಯದಿಂದ ನಿಮ್ಮೊಡನೆ ನಡಕೊಂಡೆನು. ನೀವು ಬಂದ ದಿನವೇ ಮೇಘನಾದನು ತುಡುಗರನ್ನು ಸಂಹರಿಸಿ, ಅವರ ಬಳಿಯಲ್ಲಿದ್ದ ವಸ್ತ್ರಾಭರಣಗಳನ್ನೂ, ಧನುರ್ಬಾಣಗಳನನ್ನೂ, ಕುದುರೆಯನ್ನು ತಂದು ನನಗೆ ಕೊಟ್ಟನು. ಅವುಗಳನ್ನು ನೋಡಿ ನಾನು ಇವು ಯಾವನೋಒಬ್ಬ ರಾಜಪುತ್ರನ ಪದಾರ್ಥಗಳೆಂದು ತರ್ಕಿಸಿದ್ದೆನು. ನೀವು ಉಟ್ಟ ದೋತರದಿಂದ ಶಿಲಾಮಂಟಪದಲ್ಲಿ ಮಲಗಿರುವದನ್ನು ನೋಡಿ, ಆ ಪದಾರ್ಥಗಳು ನಿಮ್ಮವೇ ಇರಬಹುದೆಂದು ತರ್ಕಿಸಿ, ಸತ್ಯತೆಯನ್ನು ತಿಳಿಯುವದಕ್ಕಾಗಿಯೇ ಅವನ್ನು ನಿಮ್ಮ ಮಂಚದ ಎದುರಿಗೆ ಬುದ್ಧಿಪೂರ್ವಕವಾಗಿ ಇಡಿಸಿದ್ದೆನು. ಸುದೈವದಿಂದ ನನ್ನ ತರ್ಕವು ನಿಜವಾಗಿದೆ! ಪ್ರಾಣಪ್ರಿಯರೇ, ಇವರ ಮುಂದಿನ ಸಂಗತಿಯು ನಿಮಗೆ ಗೊತ್ತೇ ಅದೆ. ಇನ್ನು ರಾಕ್ಷಸನಿಂದ ನನ್ನ ದೇಹವು ಕಲಂಕಿತವಾಗಿರಬಹುದೆಂಬ ಸಂಶಯವು ನಿಮ್ಮಲ್ಲಿ ಸ್ವಾಭಾವಿಕವಾಗಿ ಉತ್ಪನ್ನವಾಗಿರಬಹುದು; ನಾಳಿಗೆ ಮೇಘನಾದನು ಬಂದನೆಂದರೆ, ಅದರ ನಿರ್ಣಯವೂ ಆಗುವದು. ಈಗ ರಾತ್ರಿಯು ಬಹಳವಾಗಿರುವದರಿಂದ ಮಲಗಿಕೊಳ್ಳಬೇಕು, ಎಂದು ಹೇಳಿ, ಆ ಸುಂದರಿಯು ದಾಸಿಯರೊಡನೆ ಹೊರಟುಹೋದಳು.

ಪದ್ಮನಯನೆಯ ವೃತ್ತಾಂತವನ್ನು ಕೇಳುತ್ತಿದ್ದ ಸುಮತಿಯು ನಡುವೇ ಬಾಯಿಹಾಕಿ ದುಃಖದಿಂದ ನುಡಿದನೇನಂದರೆ--ರಾಜಪುತ್ರಾ, ನನ್ನ ಸಹೋದರಿಯಂತೆ ಇದ್ದ ಪದ್ಮನಯನೆಯ ಸದ್ಗುಣಗಳನ್ನು ನೀನೇನು ಬಲ್ಲೆ? ಯಾವ ಸುಂದರಿಯ ಸದ್ಗುಣಗಳಿಗೂ, ಸದ್ವಿದ್ಯೆಗೂ, ರೂಪಕ್ಕೂ ಬಹುಜನ ರಾಜಕುಮಾರರು ಮೋಹಿತರಾಗಿರುವರೋ, ಆ ಸುಂದರಿಯ ಸ್ಥಿತಿಯು ಹೀಗಾಗಬೇಕೆ? ಅವಳಿಗೆ ನಿನ್ನಂಥ ಯೋಗ್ಯಪತಿಯು ದೊರೆತಿರುವದು ಬಹು ಸಮಾ

ಘಾನಕರವು. ನಮ್ಮ ಪದ್ಮನಯನೆಯನ್ನು ಸರಿಗಟ್ಟುವ ಸ್ತ್ರೀಯರು ಭೂಮಿಯಲ್ಲಿ ವಿರಲವೆಂದು ತಿಳಿ. ಇರಲಿ, ಮುಂದಿನ ಸಂಗತಿಯನ್ನು ಹೇಳು. ಪದ್ಮನಯನೆಯು ಈಗ ನಿನ್ನ ಬಳಿಯಲ್ಲಿ ಇಲ್ಲದಿರುವದು, ಆಕೆಯ ಹೊಸದುಃಖದ ಮಂಗಲಾಚರಣವೆಂದು ನಾನು ಈ ಮೊದಲೇ ತರ್ಕಿಸಿದ್ದೇನೆ.

ಸುಮತಿಯ ಮಾತುಗಳನ್ನು ಕೇಳಿ, ಕಮಲಾಕ್ಷನಿಗೆ ಬಹಳ ಆಶ್ಚರ್ಯವಾಯಿತು. ಇಲ್ಲಿಯವರೆಗೆ ಅವನು ಸುಮತಿಯನ್ನು ಪರಕೀಯನೆಂದು ತಿಳಿದಿದ್ದನು; ಆದರೆ ಆ ಬ್ರಾಹ್ಮಣನು ತನ್ನ ಪ್ರಿಯ ಪದ್ಮನಯನೆಯ ಸಂಬಂಧವನ್ನು ಹೇಳಿದ್ದರಿಂದ, ರಾಜಪುತ್ರನು ಅವನನ್ನು ನೋಡಿ ದುಃಖದಿಂದ—ದ್ವಿಜೋತ್ತಮಾ, ನನ್ನ ಪ್ರೀತಿಗೆ ಪಾತ್ರಳಾದ ಪದ್ಮನಯನೆಯು ನಿನಗೇನಾಗಬೇಕು? ಅವಳ ವಿಯೋಗದಿಂದ ನನ್ನ ಶರೀರವು ಈ ವೊತ್ತಿಗೂ ಕ್ಷೀಣವಾಗುತ್ತ ನಡೆದದೆ. ಅವಳ ಸೌಜನ್ಯ, ವಿನಯ, ಪ್ರೇಮ, ಪತಿಭಕ್ತಿ ಇವುಗಳನ್ನು ಎಷ್ಟೆಂತ ವರ್ಣಿಸಲಿ? ನಾನು ಹತಭಾಗ್ಯನಾದದ್ದರಿಂದಲೇ ಆ ಸುಂದರಿಯನ್ನಗಲಿ ಕೊರಗುತ್ತೇನೆ. ಭೂಸುರೋತ್ತಮಾ, ಪದ್ಮನಯನೆಯು ನಿನಗೇನಾಗಬೇಕೆಂಬದನ್ನಷ್ಟು ದಯಮಾಡಿ ಹೇಳಿದರೆ ಉಪಕಾರವಾಗುವದು, ಅನ್ನಲು, ಸುಮತಿಯು—ರಾಜಪುತ್ರಾ, ಹೇಳುತ್ತೇನೆ ಕೇಳು. ನನ್ನ ಒಡಹುಟ್ಟಿದವಳಂತೆ ಇದ್ದ ರಾಜಪುತ್ರಿಯು, ಯಾವ ಸುಮತಿಯೊಡನೆ ಕಪಿಂಜಲ ಋಷಿಯ ಬಳಿಯಲ್ಲಿ ವಿದ್ಯಾಭ್ಯಾಸಮಾಡಿದೆನೆಂದು, ನಿನ್ನ ಮುಂದೆ ಹೇಳಿದಳೋ, ಆ ದೈವಗೇಡಿಯಾದ ಸುಮತಿಯು ನಾನೇ ಎಂದು ಹೇಳಿದನು. ಅದನ್ನು ಕೇಳಿ ಕಮಲಾಕ್ಷನು ದುಃಖದಿಂದ ಕುತ್ತಿಗೆಯ ಶಿರಬಿಗಿದವನಾಗಿ—ಮಿತ್ರಾ, ಸುಮತೀ, ಇತ್ತ ಬಾ. ನಿನ್ನ ತಂಗಿಯನ್ನು ಬಿಟ್ಟುಬಂದು ನಾನೊಬ್ಬನೇ ನಿನ್ನ ಬಳಿಯಲ್ಲಿ ಕುಳಿತ ಅಪರಾಧಕ್ಕಾಗಿ ನನ್ನನ್ನು ದಂಡಿಸು. ಅಹಾ! ಹಾಗೆ ದಂಡಿಸಿದರಾದರೂ ನನ್ನ ಪ್ರೀಯಳು ಬರುವಳೇನು? ಇಲ್ಲ. ಇನ್ನೆಲ್ಲಿಯ ಪ್ರಿಯಳು! ಸಖೀ, ಪದ್ಮನಯನೇ, ನನ್ನನ್ನಗಲಿದೆಯಾ? ಎಂದು ಮೂರ್ಛಿತನಾದನು. ಕೂಡಲೆ ಸುಮತಿಯು ಶೀತೋಪಚಾರಮಾಡಿ ಎಚ್ಚರಗೊಳಿಸಿ ಹೇಳಿದ್ದೇನಂದರೆ—ರಾಜಪುತ್ರಾ, ಇದೇನು? ನಿನ್ನ ಸಂಗತಿಯನ್ನು ಪೂರ್ಣವಾಗಿ ಹೇಳದೆ, ಹೀಗೆ ಅಳುತ್ತ ಕುಳಿತುಕೊಂಡರೆ ಆಗುವ

ಪೇನು? ದುಃಖವನ್ನು ತಾಳಿಕೊಂಡು ಪದ್ಮನಯನೆಯ ದುರದೃಷ್ಟವನ್ನು ಸ್ವಸ್ಥಮನಸ್ಸಿನಿಂದ ಹೇಳು.



## ೮ನೆಯ ಪ್ರಕರಣ.

# ದೌರ್ಜನ್ಯ.



ರಾಜಪುತ್ರನಾದ ಕಮಲಾಕ್ಷನು ಸುಮತಿಯ ಮಾತುಗಳನ್ನು ಕೇಳಿ, ತನ್ನ ದುಃಖವನ್ನು ನುಂಗಿಕೊಂಡು---ಮಿತ್ರಾ, ಸುಮತೀ, ನೀನು ನನ್ನ ಪ್ರಿಯಪತ್ನಿಯ ಮಿತ್ರನಾದದ್ದರಿಂದ ನನಗೂ ಮಿತ್ರನೇ ಸರಿ. ಈ ಜಗತ್ತಿನಲ್ಲಿ ಮಿತ್ರರಿಗಿಂತ ಹೆಚ್ಚಿನ ವಸ್ತುವು ಮತ್ತೊಂದಿಲ್ಲ. ವಿಚಾರಮಾಡಲು, ಬಂಧುಗಳಲ್ಲಿ ಪರಸ್ಪರ ಪ್ರೇಮವು ಬಂಧುತ್ವದಿಂದ ಉಂಟಾಗುತ್ತದೆ; ಅಂದರೆ ಬಂಧುಗಳು ಪರಸ್ಪರರ ಮೇಲೆ ತಂದೆ, ಮಗ, ಗಂಡ, ಹೆಂಡತಿ, ಮಾವ, ಅಳಿಯ ಇತ್ಯಾದಿ ಸಂಬಂಧಗಳಿಂದ ಪ್ರೇಮಮಾಡುವರು; ಆದರೆ ಮಿತ್ರರಲ್ಲಿಯ ಪ್ರೇಮವು ಬಂಧುತ್ವದಿಂದ ಹುಟ್ಟದೆ, ಬಂಧುತ್ವವೇ ಪ್ರೇಮದಿಂದ ಹುಟ್ಟುತ್ತದೆ. ಈ ಸಂಸಾರದಲ್ಲಿ ಪ್ರೇಮವು ಸುಖದ ಮೂಲಾಧಾರವಾದ್ದರಿಂದ, ಪ್ರೇಮದ ಯೋಗದಿಂದ ಬಂಧುವಾಗಿರುವ ಮಿತ್ರನು, ಬಂಧುಗಳಿಗಿಂತಲೂ ಹೆಚ್ಚಿನ ಬಂಧುವಾಗಿರುವನು. ಅವನು ನಂಬಿಗೆಗೆ ಯೋಗ್ಯನೂ, ಜೀವಕ್ಕೆ ಜೀವಕೊಡುವವನೂ ಆಗಿರುತ್ತಾನೆ. ಎಲೈ ಅನಿಮಿತ್ತ ಬಾಂಧವನಾದ ಮಿತ್ರಾ, ಸುಮತೀ, ನಾನು ಹೇಳುವದನ್ನು ಚಿತ್ತವಿಟ್ಟು ಕೇಳು. ರಾಜಪುತ್ರಿಯು ಹೇಳಿದಂತೆ ಮೇಘನಾದನು ಮರುದಿವಸವೇ ಬಂದನು. ಪದ್ಮನಯನೆಯು ಅವನನ್ನು ಭೆಟ್ಟಿಯಾಗುವ ಸ್ಥಾನವನ್ನು ನಾನು ಇಲ್ಲಿಯವರೆಗೆ ನೋಡಿದ್ದಿಲ್ಲ. ನಾನು ನನ್ನ ಪ್ರಿಯಳ ಹೇಳಿಕೆಯಂತೆ, ಆ ಸ್ಥಾನದಲ್ಲಿ ಒತ್ತಟ್ಟಿಗೆ ಮರೆಗೆ ನಿಂತುಕೊಂಡಿದ್ದೆನು. ರಾಕ್ಷಸನು ಕಾಮುಕನಾಗಿ ಆ ಮೋಹನಾಂಗಿಯನ್ನು ನೋಡಿ-

ಸುಂದರೀ, ಸಂಧ್ಯಾಕಾಲದ ಕಮಲಪುಷ್ಪದಂತೆ ಯಾವಾಗಲೂ ಬಾಡಿರುವ ನಿನ್ನ ಮುಖವು ಈದಿನ ಅರಳಿರುವದನ್ನು ನೋಡಿ, ನನಗೆ ಬಹಳ ಸಮಾಧಾನವಾಗಿದೆ. ನಮ್ಮ ಸಮಾಗಮ ಸುಖವನ್ನನುಭವಿಸುವ ಕಾಲವು ಸಮೀಪಿಸಿದ್ದರಿಂದ, ನೀನು ಇಷ್ಟು ಹಿಗ್ಗಿದಂತೆ ಕಾಣುತ್ತದೆ. ಇನ್ನು ಹದಿನೈದು ದಿನಗಳಾದಬಳಿಕ, ನಿನ್ನ ವ್ರತವು ಮುಗಿಯುತ್ತದಷ್ಟೆ? ಆ ಮೇಲೆ ನಮ್ಮಿಬ್ಬರ ವಿವಾಹಕ್ಕೆ ಯಾವ ಪ್ರತಿಬಂಧವೂ ಇಲ್ಲ. ಇತ್ತ ಬಾ, ಬಹಳ ದೂರನಿಲ್ಲಬೇಡ, ನನ್ನ ಮಗ್ಗಲಲ್ಲಿ ಈ ಮಂಚದಮೇಲೆ ಕೂಡ್ರು, ಎಂದು ಹೇಳಿ, ರಾಜಪುತ್ರಿಯ ಕೈ ಹಿಡಿಯಹೋದನು. ಕೂಡಲೆ ಅವಳು ಹಿಂದಕ್ಕೆ ಸರಿದು, ಚಕಿತ ಮುದ್ರೆಯಿಂದ ಮೇಘನಾದನನ್ನು ನೋಡಲು, ಅವನು—ಓಹೋ, ಸುಂದರೀ ನನ್ನಿಂದ ಬಹು ದೊಡ್ಡ ತಪ್ಪಾಗುತ್ತಿತ್ತು. ಈ ಹೊತ್ತಿನ ನಿನ್ನ ಪ್ರಸನ್ನಮುದ್ರೆಯನ್ನು ನೋಡಿ ನಿನ್ನ ವ್ರತವನ್ನು ಮರೆತಿದ್ದೆನು. ಇಲ್ಲ, ಎಷ್ಟುಮಾತ್ರವೂ ನಿನ್ನ ಅಂಗಸ್ಪರ್ಶ ಮಾಡುವದಿಲ್ಲ. ಬಾ, ದೂರ ಕುಳಿತು ನಿನ್ನ ಮಧುರ ಭಾಷಣಗಳಿಂದ ಈ ಮೇಘನಾದನ ಮನಸ್ಸನ್ನು ರಮಿಸು. ನಿನ್ನ ಅಪೇಕ್ಷೆಯು ಮತ್ತೇನಾದರೂ ಇದ್ದರೆ ಹೇಳು. ಅದನ್ನು ಪೂರ್ಣಮಾಡಲಿಕ್ಕೆ ಈ ದಾಸನು ಸಿದ್ಧನಾಗಿದ್ದಾನೆ.

ರಾಕ್ಷಸನ ಮಾತುಗಳನ್ನು ಕೇಳಿ ಪದ್ಮನಯನೆಯು—ಪ್ರತಾಪಶಾಲಿಗಳೇ, ನಿಮ್ಮ ಪುಣ್ಯಪ್ರಭಾವದಿಂದಲೂ, ಬಾಹುಬಲದ ಯೋಗದಿಂದಲೂ ನನಗೆ ಯಾವ ಮಾತಿನಕೊರತೆಯೂ ಇಲ್ಲ. ಎಲ್ಲಇಚ್ಛೆಗಳು ನನ್ನ ಮನದಲ್ಲಿ ಉತ್ಪನ್ನವಾಗುವದರೊಳಗೇ ಪೂರ್ಣವಾಗಿ ಹೋಗುತ್ತವೆ; ಆದರೆ ನನಗೆ ಈಗ ಒಂದು ಉತ್ತಮವಾದ ಧನುಸ್ಸು ಬೇಕಾಗಿರುವದು. ನಾನು ಚಿಕ್ಕಂದಿನಲ್ಲಿ ಧನುರ್ವಿದ್ಯೆಯನ್ನು ಅಭ್ಯಾಸ ಮಾಡಿರುವದು ನಿಮಗೆ ಗೊತ್ತೇ ಇದೆ. ನೀವು ಧನುಸ್ಸನ್ನು ತಂದುಕೊಟ್ಟರೆ, ಬೇಸರಬಂದಾಗ ಗುರಿಹೊಡೆದು ಇಲ್ಲವೆ ಬೇಟೆಯಾಡಿ ಮನಸ್ಸನ್ನು ರಮಿಸಿಕೊಳ್ಳುವೆನು. ದಯಮಾಡಿ ಈ ದಾಸಿಯ ಇಚ್ಛೆಯನ್ನು ಪೂರ್ಣಮಾಡಬೇಕು ಎಂದು ಹೇಳಿದಳು.

ಮಿತ್ರಾ, ಸುಮತೀ, ರಾಜಪುತ್ರಿಯ ಪ್ರೇಮಯುಕ್ತ ಮಧುರಭಾಷಣಗಳು ರಾಕ್ಷಸನ ಮನಸ್ಸನ್ನು ಮರುಳುಮಾಡಿದವು. ಇಷ್ಟು ದಿನಗಳಲ್ಲಿ ಇಂದಿನಂತೆ ಅವಳು ರಾಕ್ಷಸನಸಂಗಡ ಮನಬಿಚ್ಚಿ ಎಂದೂ ಮಾತಾಡಿದಂದೆ ತೋರ

ಲಿಲ್ಲ. ಯಾಕಂದರೆ, ಈ ದಿನದ ಸ್ಥಿತಿಯು ಮೇಘನಾದನಿಗೆ ಅನುಕೂಲವಾಗಿ ತೋರಿದ್ದರಿಂದ, ಅವನು ಮೈಮರೆತು ಯಾವವಿಚಾರವನ್ನೂ ಮಾಡದೆ—ಸುಂದರೀ, ಇದಾವ ದೊಡ್ಡಮಾತು? ನನ್ನ ಪ್ರಾಣಕ್ಕಿಂತಲೂ ನೀನು ನನಗೆ ಅಧಿಕಪ್ರಿಯಳಾದ್ದರಿಂದ, ಯಾವ ಧನುಸ್ಸಿನಿಂದ ಎರಡನೆಯವರು ನನ್ನ ಸಂಗಡ ಯುದ್ಧಮಾಡಿದರೆ ಮಾತ್ರ ನನಗೆ ಮರಣವು ಒದಗುವದೋ, ಆ ಪ್ರಚಂಡ ಧನುಸ್ಸನ್ನೇ ನಿನ್ನ ಸಂತೋಷಾರ್ಥವಾಗಿ ನಿನಗೆ ಕೊಡುವೆನೆಂದು ಹೇಳಿದನು. ರಾಕ್ಷಸನು ತನ್ನ ನಾಶವನ್ನು ತಾನೇ ಮಾಡಿಕೊಳ್ಳುವದನ್ನು ನೋಡಿ ಪದ್ಮನಯನೆಯು ಆನಂದಯುಕ್ತಳಾಗಿ, ಮುಗುಳುನಗೆಯಿಂದ ರಾಕ್ಷಸನನ್ನು ನೋಡಿ—ಪ್ರತಾಪಶಾಲಿಗಳೇ, ನಿಮ್ಮ ಔದಾರ್ಯವನ್ನೂ, ನನ್ನ ಮೇಲಿರುವ ನಿಮ್ಮ ಅನಿರ್ವಾಚ್ಯವಾದ ಪ್ರೇಮವನ್ನೂ ಎಷ್ಟೆಂತವರ್ಣಿಸಲಿ? ಈ ವೊತ್ತಿಗೆ ನನ್ನ ದುಃಖಗಳೆಲ್ಲ ನಾಶವಾದವು. ಈಗಲೇ ತಮ್ಮನ್ನು ಬಿಗಿಯಾಗಿ ಅಪ್ಪಿಕೊಳ್ಳಬೇಕೆಂಬ ಉತ್ಕಂಠೆಯು ನನಗಾಗಿದೆ, ಆದರೆ ಏನು ಮಾಡಲಿ? ಮೂರ್ಖಳಂತೆ ನನ್ನ ಸುಖಕ್ಕೆ ನಾನೇ ಅಂತರಿಸಿದ್ದೇನೆ. ಇರಲಿ, ಉಪಾಯವಿಲ್ಲ. ತಪ್ಪು ಆಗದಂತೆ ನಡೆಯುವದೇ ಯೋಗ್ಯವು, ಎಂದು ಹೇಳಿ ತರತರದ ಮಧುರವಾದ ಪಕ್ವಾನ್ನಗಳಿಂದ ಅವನನ್ನು ತೃಪ್ತಿಪಡಿಸಿದಳು. ಆಗ ರಾಕ್ಷಸನು ರಾಜಪುತ್ರಿಯನ್ನು ಆನಂದದಿಂದ ನೋಡಿ, ತಾನು ಉಂಡ ಪದಾರ್ಥಗಳನ್ನು ವರ್ಣಿಸುತ್ತ ಉನ್ಮತ್ತನಾಗಿ ನುಡಿದನೇನಂದರೆ—ಪ್ರಾಣಪ್ರಿಯೇ, ನಿನ್ನ ಯೋಗದಿಂದ ಎಣೆಯಿಲ್ಲದ ಸುಖಗಳು ನನಗೆ ಒದಗಿದವಲ್ಲದೆ, ಇದಕ್ಕೂ ಹೆಚ್ಚಿನ ಸುಖಗಳು ಮುಂದೆ ಒದಗತಕ್ಕವಿರುತ್ತವೆ. ನಿನ್ನ ಉಪಕಾರವನ್ನು ನಾನು ಯಾವ ರೀತಿಯಿಂದ ತೀರಿಸಲಿ? ನಿನ್ನನ್ನು ಅಗಲಬೇಕಾದರೆ ನನ್ನ ಜೀವದಸುತ್ತು ಬರುತ್ತದೆ; ಆದರೆ ಮಾಡಲೇನು? ನಿನ್ನ ಮಾತನ್ನು ಮೀರುವದೆಂದರೆ, ಅದಕ್ಕೂ ಕಠಿಣ ಪ್ರಸಂಗವು. ಇರಲಿ, ನಾನು ವಚನಕೊಟ್ಟಂತೆ ನಿನ್ನ ದೇವತಾರಾಧನೆಯ ಕಾಲವು ಮುಗಿಯುವವರೆಗೆ ನಿನ್ನ ಅಂಗಸ್ಪರ್ಶಮಾಡುವದಿಲ್ಲ. ನೀನಾದರೂ ನಿನ್ನ ಆರಾಧ್ಯದೇವತೆಯ ಆರಾಧನೆಯನ್ನು ಮನಮುಟ್ಟಿಮಾಡು. ಪ್ರಿಯೇ, ನಾನು ಇನ್ನೊಮ್ಮೆ ಬರುವಾಗ ನನ್ನ ಪ್ರಚಂಡ ಧನುಸ್ಸನ್ನು, ಬಾಣಗಳಿಂದ ತುಂಬಿದ ಬತ್ತಳಿಕೆಯೊಂದಿಗೆ ತರುವೆನು. ಇನ್ನು ಶೋಣಿತಪುರಕ್ಕೆ ಹೋಗಲು

ನನಗೆ ಅನುಮತಿಸು, ಎಂದು ಹೇಳಿ ಆ ಮದೋನ್ಮತ್ತನು ಆನಂದಭರಿತನಾಗಿ ಶೋಣಿತಪುರಕ್ಕೆ ನಡೆದನು.

ಮಿತ್ರಾ, ಸುಮತೀ, ಮುಂದಿನ ಸಂಗತಿಯನ್ನು ಚಿತ್ತಗೊಟ್ಟು ಕೇಳು. ಮೇಘನಾದನ ಉಗ್ರಸ್ವರೂಪವನ್ನೂ, ರಾಜಪುತ್ರಿಯು ತನ್ನ ಶರೀರವು ಮಲಿನವಾಗದಂತೆ ಆ ರಾಕ್ಷಸನನ್ನು ಮರುಳುಮಾಡಿದ್ದನ್ನೂ ನೋಡಿ, ನನಗೆ ಪರಮಾಶ್ಚರ್ಯವಾಯಿತು. ಮೊದಲೇ ನಾನು ಆ ಸುಂದರಿಯ ರೂಪಾತಿಶಯಕ್ಕೆ ಮರುಳು ಆಗಿದ್ದೆನು. ಅವಳು ನಿರ್ದೋಷಿಯೆಂದು ತಿಳಿದ ಬಳಿಕಂತೂ ಕೇಳುವದೇನು, ಪ್ರೇಮದಭರಕ್ಕೆ ಆತಂಕವಿಲ್ಲದಂತೆ ಆಗಿ ಆ ಸುಂದರಿಯ ಪ್ರಾಪ್ತಿಯ ಸಲುವಾಗಿ ನಾನು ತೀರಾ ಉತ್ಸುಕನಾದೆನು. ನನ್ನ ಶರೀರವು ಪುಳುಕಿತವಾಯಿತು; ಕಣ್ಣುಗಳಿಂದ ಆನಂದಾಶ್ರುಗಳು ಉದುರಹತ್ತಿದವು. ಅವಳ ಮನಸ್ಸನ್ನು ಯಾವಾಗ ಆನಂದಗೊಳಿಸೇನೆಂಬ ಲವಲವಿಕೆಯು ನನ್ನಲ್ಲಿ ಉತ್ಪನ್ನವಾಯಿತು. ಕೂಡಲೆ ನಾನು ಆನಂದದ ಆವೇಶದಿಂದ ರಾಜಪುತ್ರಿಯ ಬಳಿಗೆ ಹೋಗಲು, ಅವಳು ಮಂಚದಿಂದ ಎದ್ದು ಕೆಳಗೆ ನಿಂತು, ಮಂಜುಲಸ್ವರದಿಂದ— ಪ್ರಾಣಪ್ರಿಯರೇ, ತಮ್ಮ ಸಂಶಯವು ದೂರವಾಯಿತೇ? ಅನ್ನಲು, ನಾನು ಪ್ರೇಮದಿಂದ—"ಸಖೀ, ನನ್ನನ್ನು ಕ್ಷಮಿಸು. ನನ್ನ ಮನಸ್ಸಿನ ಸಂಶಯಗಳ ನಿವಾರಣವು ನಿನ್ನ ನಿಷ್ಕಲಂಕವಾದ ವರ್ತನದಿಂದ ತಾನೇ ಆಯಿತು. ನೀನು ಮನದ ಚಿಂತೆಯನ್ನೂ, ಸಂಶಯಗಳನ್ನೂ ಬಿಟ್ಟು ನನ್ನ ಮನಸ್ಸನ್ನು ರಮಿಸು." ಎಂದು ಹೇಳಿ, ಆ ಸುಂದರಿಯ ಕೈ ಬೆರಳನ್ನು ಹಿಡಿದು, ಮೆಲ್ಲನೆ ಮುಂದಕ್ಕೆ ಜಗ್ಗಲು, ಆ ಸುಕುಮಾರಿಯು ಪ್ರೇಮದೊಡನೆ ನನ್ನ ಹತ್ತಿರ ಬಂದಳು. ಪರಸ್ಪರರ ಅಂಗಸ್ಪರ್ಶದಿಂದ ಇಬ್ಬರಿಗೂ ಆದ ಆನಂದವನ್ನು ವರ್ಣಿಸಲಸಾಧ್ಯವು.

ಮಿತ್ರಾ, ಲೋಕಸುಂದರಿಯಾದ ನನ್ನ ಪ್ರಿಯಳು ಲಜ್ಜೆಯಿಂದ ತನ್ನ ಕೈಬೆರಳನ್ನು ನನ್ನ ಕೈಯೊಳಗಿಂದ ಕೊಸರಿಕೊಂಡಳು. ಅವಳ ಹಸ್ತಸ್ಪರ್ಶದಿಂದ ನನ್ನ ಹಸ್ತವು ಬೆವತು ನಡುಗಹತ್ತಿದ್ದರಿಂದಲೇ ಅವಳ ಈ ಪ್ರಯತ್ನವು ಸಹಜವಾಗಿ ಸಫಲವಾಯಿತು. ಆದರೆ ಆ ಸುಂದರಿಯ ಈ ಪ್ರಯತ್ನಕ್ಕೆ ಅವಳ ಮನಸ್ಸು ಪ್ರೇರಕವಾಗದೆ, ದಾಸಿಯರ ಉಪಹಾಸದ ಭಯವೂ, ತನ್ನ ಗೌರವದ ವರ್ತನದ ಉಲ್ಲಂಘತನದ ಭಯವೂ ಪ್ರೇರಕವಾದವು. ಅವಳ

ಮ್ಮಂದಸ್ಮಿತೆಯಾಗಿ, ಮಧುರದೃಷ್ಟಿಗಳಿಂದ ನನ್ನನ್ನು ನೋಡುತ್ತ—"ಮನುಷ್ಯರು ತಮ್ಮ ಕಾರ್ಯಸಿದ್ಧಿಯಾಗುವವರೆಗೆ ಅನ್ಯರ ಮನಸ್ಸನ್ನು ಪ್ರಸನ್ನೀಕರಿಸಿಕೊಳ್ಳುವದಕ್ಕೆ ಹಲವು ಬಗೆಗಳಿಂದ ಯತ್ನಿಸುತ್ತಾರೆ. ಆಗ್ಗೆ ಅವರು ತೋರಿಸುವ ಪ್ರೇಮವೂ, ಆಡುವಮಾತುಗಳೂ, ಮಾಡುವ ಕೃತಿಗಳೂ ವಿಶ್ವಾಸನೀಯಗಳೆಂದು ಎಷ್ಟು ಮಾತ್ರವೂ ನಿಶ್ಚಯಿಸಲಾಗದು. ಅವು ಮೃಗಜಲದಂತೆ ಕೆಲವುವೇಳೆ ಮನೋಹರವಾಗಿ ಕಂಗೊಳಿಸಿ, ಕಡೆಗೆ ನಾಶವಾಗುತ್ತವೆ. ಸ್ವಸುಖಾಸಕ್ತರಾದ ಜನರು ಅನ್ಯರ ಸುಖ-ದುಃಖಗಳನ್ನು ನೋಡುವದು ಕಡಿಮೆ. ತನ್ನ ಸ್ತ್ರೀಯ ವಿಷಯವಾಗಿ ಪುರುಷನಲ್ಲಿ ನಿಷ್ಕಪಟವಾದ ಪ್ರೀತಿಯೂ, ನಿರಂತರವಾದ ವಿಶ್ವಾಸವೂ ಇದ್ದ ಹೊರತು ಆ ಸ್ತ್ರೀಗೆ ಅವನ ಸಮಾಗಮದಿಂದ ಸುಖವಾಗುವದಿಲ್ಲ. ಸದಾಚರಣೆಯಸ್ತ್ರೀಗೆ ದುರಾಚರಣೆಯ ಪತಿಯು ದೊರೆಯುವದರಿಂದ, ಆ ದಂಪತಿಗಳ ಸುಖದ ಬಣತೆಯೇ ಕೆಟ್ಟು ಹೋಗುತ್ತದೆ. ಪ್ರಿಯರೇ, ಬಹಳ ಹೇಳುವದರಿಂದ ಪ್ರಯೋಜನವೇನು? ಸುವಿಚಾರದ ಸ್ತ್ರೀಯು ಮೂರ್ಖನೂ, ದುರಾಚಾರಿಯೂ ಆದ ಪತಿಯ ಸಮಾಗಮಸುಖವನ್ನನುಭವಿಸುವದಕ್ಕಿಂತ, ಬ್ರಹ್ಮಚರ್ಯದಿಂದಿರುವದೇ ಲೇಸೆಂದು ನನಗೆ ತೋರುತ್ತದೆ. ಸ್ತ್ರೀಯು ವಿವಾಹಿತಳಾದಳೆಂದರೆ, ತನ್ನ ಪತಿಯು ಸುವಿಚಾರಿಯೇ ಇರಲಿ, ಮೂರ್ಖನೇ ಇರಲಿ, ಅವನ ಮನೋವೃತ್ತಿಯನ್ನನುಸರಿಸಿ ಅವನ ಸೇವೆಮಾಡಿ, ಅವನ ಹಿತವನ್ನು ಚಿಂತಿಸುವದೇ ಅವಳ ಪಾತಿವ್ರತ್ಯದ ಧರ್ಮವಾಗಿರುವದು. ಅದರಿಂದಲೇ ಜಾಣರಾದ ಸ್ತ್ರೀಯರು, ತಮ್ಮ ವಿವಾಹವನ್ನು ಬಹು ವಿಚಾರದಿಂದ ಮಾಡಿಕೊಳ್ಳಬೇಕಾಗುವದು." ಎಂದು ನುಡಿದು ತಲೆವಾಗಿ ನಿಂತುಕೊಂಡಳು.

ಮಿತ್ರಾ, ನಾನು ಆ ಸುಂದರಿಯ ಪ್ರೇಮಯುಕ್ತ ಚಾತುರ್ಯದ ಮಾತುಗಳನ್ನು ಕೇಳಿ ಗಾಂಭೀರ್ಯದಿಂದ "ಪ್ರಾಣಪ್ರಿಯೇ, ನಿನ್ನ ಚಾತುರ್ಯಕ್ಕೆ ಸೀಮೆಯಿಲ್ಲ, ಕಾರ್ಯಸಿದ್ಧಿಯವರೆಗೆ ಮಾತ್ರ ಪ್ರೇಮವನ್ನು ತೋರಿಸುವವರು, ಯೋಗ್ಯಾಯೋಗ್ಯಗಳ ವಿಚಾರ ಮಾಡದೆ ತಮ್ಮ ಕೆಲಸವನ್ನು ಆದಷ್ಟು ಬೇಗನೆ ಸಾಧಿಸಿಕೊಳ್ಳಲಿಕ್ಕೆ ಯತ್ನಿಸುತ್ತಾರೆ. ನಿರಂತರವಾಗಿ ಪ್ರೇಮವನ್ನಪೇಕ್ಷಿಸುವವರು ಯೋಗ್ಯವಿಚಾರಮಾಡದೆ, ಒಮ್ಮೆಲೆ ಪ್ರೇಮವನ್ನು ತೋರಿಸುವ ಭರಕ್ಕೆ ಹೋಗುವದಿಲ್ಲ. ಸ್ವಸುಖಾಸಕ್ತರಾದ ಜನರು ಸ್ವಕೀಯ ವಸ್ತುಗಳ ಮೇಲೆಯೂ

ಪ್ರೇಮ ಮಾಡದೆ ಇರುವರೆ? ಮುಗ್ಧೆ, ಚಂಚಲನೂ, ಅವಿಚಾರಿಯೂ, ವಿಶ್ವಾಸಘಾತಕನೂ ನಾನಲ್ಲ. ನಿನ್ನ ಮನಸ್ಸಿನ ಸಂಶಯಗಳನ್ನು ಬಿಡು. ನನ್ನ ಪ್ರಾಣವು ನಿನ್ನಾಧೀನವಾದದ್ದೆಂದು ತಿಳಿ." ಎನ್ನಲು, ರಾಜಪುತ್ರಿಯು ಸಾನಂದಪ್ರದಯಳಾಗಿ "ಪ್ರಾಣಮೊಡೆಯರೆ, ಸ್ತ್ರೀಗೆ ಪತಿಯ ಅನುಕೂಲತೆಯ ಹೊರತು ಅಧಿಕಪ್ರಿಯವಾದದ್ದು ಯಾವದಿರುವದು? ಸಕಲೈಶ್ವರ್ಯಗಳ ಅನುಕೂಲತೆಯಿದ್ದು ಇದೊಂದು ಮಾತಿನ ಕೊರತೆ ಇದ್ದರೆ, ಅವಳಿಗೆ ಆ ಐಶ್ವರ್ಯಗಳೆಲ್ಲ ವಿಷವಂತೆ ಭಾಸವಾಗುತ್ತವೆ. ಸ್ತ್ರೀಗೆ ಸಕಲೈಶ್ವರ್ಯಗಳೂ, ಸುಖವೂ, ಸೌಭಾಗ್ಯವೂ, ಮೋಕ್ಷವೂ ಪತಿಯೇ ಆಗಿರುವನು. ಹೀಗಿರಲು, ನನ್ನ ಪ್ರಿಯಪತಿಗಳಾಗಿರುವ ನೀವು, ನನಗೆ ಅನುಕೂಲವಾಗಿರುವಾಗ ಇದಕ್ಕೂ ಹೆಚ್ಚಿನ ಸುಖವು ಮತ್ತಾವದಿರುವದು? ಇಂದಿಗೆ ನಾನು ಧನ್ಯಳಾದೆನು."

ಮಿತ್ರಾ, ಸುಮತೀ, ಈ ಪ್ರಕಾರ ನಮ್ಮಿಬ್ಬರ ಸಂಭಾಷಣವು ನಡೆದಿರಲು, ಚತುರಳೂ, ಧೂರ್ತಳೂ ಆದ ಸುಮಧ್ಯಮೆ ಎಂಬ ದಾಸಿಯು ಅಲ್ಲಿಗೆ ಬಂದಳು. ಅವಳು ಪದ್ಮನಯನೆಯ ಹಿತಚಿಂತಕಳಾದ್ದರಿಂದ ಪದ್ಮನಯನೆಯು ಅವಳನ್ನು ದಾಸಿಯರಲ್ಲಿ ಎಣಿಸದೆ ಗೆಳತಿ ಎಂದು ತಿಳಿದಿದ್ದಳು. ಅದರಿಂದ ಸುಮಧ್ಯಮೆಗೆ ಬಹುತರವಾಗಿ ಸ್ವತಂತ್ರದಿಂದ ವರ್ತಿಸುವ ಅಧಿಕಾರವಿತ್ತು. ಆಗಲಾ ಸುಮಧ್ಯಮೆಯು ನನ್ನನ್ನು ಕುರಿತು—"ರಾಜಾಧಿರಾಜರಾದ ಕಮಲಾಕ್ಷ ಪ್ರಭುಗಳೆ, ಬಂಧು—ಮಿತ್ರರ ವಿಯೋಗ ದುಃಖದಿಂದ ಕೊರಗುತ್ತಿರುವ ನನ್ನ ಒಡತಿಯಾದ ಪದ್ಮನಯನಾದೇವಿಯು, ತಮ್ಮ ಆಗಮನವಾದಂದಿನಿಂದ ಆನಂದವೃತ್ತಿಯಲ್ಲಿರುವದನ್ನು ನೋಡಿ, ನನಗೆ ಬಹಳ ಸಂತೋಷವಾಗಿದೆ. ಅಧಿಕೋಕ್ತಿಯ ದೋಷವು ನನಗೆ ಬಂದರೂ ಚಿಂತೆಯಿಲ್ಲ. ಅಡವಿಯೊಳಗಿನ ಸುಗಂಧ ಪುಷ್ಪದಂತೆ ವ್ಯರ್ಥ ಬಾಡುತ್ತಿರುವ, ಲೋಕಸುಂದರಿಯಾದ ಪದ್ಮನಯನಾದೇವಿಯ ಯೌವನವನ್ನು ಸಫಲಮಾಡುವದಕ್ಕೆ ತಾವೇ ಯೋಗ್ಯರೆಂಬ ನನ್ನ ಅಭಿಪ್ರಾಯವನ್ನು ಹೊರಗೆಡವದೆ ಇರಲಾರೆನು. ಇದಕ್ಕೆ ನನ್ನ ಒಡತಿಯ ಅನುಮೋದನವೂ ಇರುವದೆಂಬದು ತನಗೆ ಗೊತ್ತಾಗಿದೆ. ತಾವೂ ನನ್ನ ಒಡತಿಯೂ ಸಾರ್ವಭೌಮರ ಮಕ್ಕಳಾಗಿದ್ದರೂ, ಈಗಿನ ಕಾಲಗತಿಯು ವಿಪರೀತವಿರುವದರಿಂದ, ನಿಮ್ಮಿಬ್ಬರ ಯೋಗ್ಯತೆಗೆ ಅನುಸರಿಸಿ ನಿಮ್ಮ ವಿವಾಹವು ಆಗಲಾರದು. ಆದರೂ ತಾವು ಗಾಂಧರ್ವ ವಿವಾಹದಿಂದಲೇ ನನ್ನ ಒಡ

ತನ್ನ ಪಾಣಿಗ್ರಹಣ ಮಾಡಬೇಕೆಂದು ನನ್ನ ಪ್ರಾರ್ಥನೆಯದೆ. ಒಂದಕ್ಕೆ ಭರತಜನಕನಾದ ದುಷ್ಯಂತಮಹಾರಾಜನು. ಪತಿವ್ರತಾಶಿರೋಮಣಿಯಾದ ಶಕುಂತಲೆಯನ್ನು ಕಣ್ವಮಹಾಮುನಿಗಳ ಆಶ್ರಮದಲ್ಲಿ ಗಾಂಧರ್ವವಿವಾಹದಿಂದಲೇ ಕೂಡಿದನು. ಕ್ಷತ್ರಿಯರಿಗೆ ಗಾಂಧರ್ವ ವಿವಾಹವು ಸಮ್ಮತವಾಗಿರುವದು.'' ಎಂದು ಹೇಳಿ ತರತರದ ಭೋಗದ್ರವ್ಯಗಳಿಂದ ತುಂಬಿದ ಚಿನ್ನದ ತಾಟುಗಳನ್ನು ಕಮಲಾಕ್ಷನ ಅನುಮೋದನದಿಂದ ರಾಜಪುತ್ರಿಯಮುಂದೆ ಇಟ್ಟಳು. ಆಗ ಸುಕುಮಾರಿಯಾದ ಪದ್ಮನಯನೆಯು. ಚಟ್ಟನೆ ಎದ್ದು ವಿನಯದಿಂದ ಸೆರಗನ್ನು ಸಾವರಿಸಿಕೊಳ್ಳುತ್ತ, ಮೃದುಸ್ಮಿತೆಯಾಗಿ, ಸುಗಂಧಯುಕ್ತವಾದ ಗಂಧವನ್ನು ತನ್ನ ಸೂಕ್ಷ್ಮವಾದ ಕರದಿಂದ ನನ್ನ ಮೈಗೆ ಹಚ್ಚಿ ಮೇಲೆ ಸುಗಂಧದ್ರವ್ಯಗಳನ್ನು ಹಾಕಿದಳು. ಆ ಮೇಲೆ ಆ ಸುಂದರಿಯು, ಸುವಾಸನೆಯುಳ್ಳ ತರತರದ ಪುಷ್ಪಗಳಿಂದ ಕಟ್ಟಿದ ಮಾಲಿಕೆಯನ್ನು ಕೈಯಲ್ಲಿ ತೆಗೆದುಕೊಂಡು ಮಧುರ ದೃಷ್ಟಿಗಳಿಂದ ನನ್ನನ್ನು ನೋಡುತ್ತ, ನನ್ನ ಮನಸ್ಸು ತನ್ನಲ್ಲಿಯೇ ಇರಬೇಕೆಂಬ ಭಾವದಿಂದ ಅದಕ್ಕೆ ಪ್ರತಿಬಂಧಮಾಡುವಳೋ ಎಂಬಂತೆ, ಆ ಹೂಮಾಲೆಯನ್ನು ನನ್ನ ಕೊರಳಲ್ಲಿ ಹಾಕಿದಳು. ಆಗ್ಗೆ ನನಗಾದ ಆನಂದವನ್ನು ವರ್ಣಿಸಲಳವಲ್ಲ. ಕಲ್ಪಿತವಾದ ಸ್ವರ್ಗಸುಖವು ಪ್ರತ್ಯಕ್ಷ ಒದಗಿದಂತಾಯಿತು. ಮಿತ್ರಾ, ಏನು ಹೇಳಲಿ? ಆ ಕಾಲಕ್ಕೆ ರಾಜಪುತ್ರಿಯ ಮುಖದಲ್ಲಿ ವ್ಯಕ್ತವಾಗಿದ್ದ ಮುಗುಳುನಗೆಯು ನನ್ನ ಕಣ್ಣಮುಂದೆ ಕಟ್ಟಿದಂತೆ ಆಗಿ, ದುಃಖಾಗ್ನಿಯನ್ನು ಹೊತ್ತಿಸುತ್ತದೆ.

ಈ ಪ್ರಕಾರ ರಾಜಪುತ್ರಿಯು ತರತರದ ಸುಗಂಧ ತೈಲಗಳಿಂದಲೂ, ಹೂಮಾಲೆಗಳಿಂದಲೂ, ಅಮೂಲ್ಯವಾದ ಆಭರಣಗಳಿಂದಲೂ ನನ್ನನ್ನು ಅಲಂಕರಿಸಿ, ಸುಮ್ಮನೆ ತನ್ನ ಕೈಬೆರಳುಗಳನ್ನು ತಿಕ್ಕಿಕೊಳ್ಳುತ್ತ, ತಲೆಬಾಗಿ, ಕಡೆಗಣ್ಣಿನ ನೋಟಗಳಿಂದ ಆಗಾಗ್ಗೆ ನನ್ನನ್ನು ನೋಡುತ್ತ, ಚಿನ್ನದ ಪುತ್ತಳಿಯಂತೆ ನನ್ನೆದುರಿಗೆ ನಿಂತುಕೊಂಡಳು. ಆಗ್ಗೆ ಅವಳ ಮುಖದಲ್ಲಿ ಬೆವರಿನ ಹನಿಗಳು ಮಿನುಗುತ್ತಿರಲು, ಅವುಗಳ ಮಧ್ಯದಲ್ಲಿದ್ದ ಮೂಗಬಟ್ಟು ನಕ್ಷತ್ರಮಂಡಲದ ಚಂದ್ರನಂತೆ ಹೊಳೆಯುತ್ತಿತ್ತು. ಅವಳು ಬೆವರಿನ ಹನಿಗಳನ್ನು ಒರಿಸಿಕೊಳ್ಳುವದಕ್ಕಾಗಿ, ತರ್ಜನಿಯ ಬೆರಳನ್ನು ಮೇಲ್ದುಟಿಯ ಮೇಲೆ ಆಡಿಸಿಕೊಳ್ಳುತ್ತಿರಲು, ನಿನ್ನ ಮನಸ್ಸನ್ನು ಸ್ವಾಧೀನಮಾಡಿಕೊಳ್ಳದೆ ಬಿಡುವದಿಲ್ಲೆಂಬ

ಪುರುಷಾರ್ಥವನ್ನು ಪ್ರೇಮಮತ್ಸರದಿಂದ ನನಗೆ ತೋರಿಸುವಳೆಂಬ ಭಾವವು ವ್ಯಕ್ತವಾಗುತ್ತಿತ್ತು. ಅವಳು ಚಾತುರ್ಯದಿಂದ ಮಾಡುವ ಅಂಗವಿಕ್ಷೇಪದಿಂದ ನನ್ನಲ್ಲಿ ಕಾಮವಿಕಾರವು ಹೆಚ್ಚಿತು. ರಾತ್ರಿಯು ಬಹಳವಾದದ್ದರಿಂದ ಸುಮಧ್ಯಮೆಯೇ ಮೊದಲಾದ ದಾಸಿಯರು ಮಲಗುವದಕ್ಕಾಗಿ ತಮ್ಮ ತಮ್ಮ ಸ್ಥಳಗಳಿಗೆ ಹೊರಟುಹೋದರು. ಮಿತ್ರಾ, ನನ್ನ ಪ್ರಿಯಳಿಗೆ ಪತಿಯೊಡನೆ ಇದೇ ಮೊದಲನೆಯ ಸಮಾಗಮವಾದದ್ದರಿಂದ ಅವಳ ಸ್ಥಿತಿಯು ವಿಚಿತ್ರವಾಯಿತು. ಏಕಾಂತವಲ್ಲಿ ನನ್ನೊಡನೆ ಗುಪ್ತಿನ ಹಲವು ಮಾತುಗಳನ್ನಾಡಬೇಕೆಂದು ಇಚ್ಛಿಸುತ್ತಿದ್ದ ಆ ಸುಂದರಿಯ ಮುಖದಿಂದ ಲಜ್ಜೆಯ ಮೂಲಕ ಅಕ್ಷರಗಳೇ ಹೊರಡಲಿಲ್ಲ. ಭಯದಿಂದ ಅವಳ ಸರ್ವಾಂಗವು ಕಂಪಿಸಹತ್ತಿ ಮೈ ಬೆವತಿತು. ಈ ಕಾಲಕ್ಕೆ ಹೇಗೆ ವರ್ತಿಸಬೇಕೆಂಬದು ಅವಳಿಗೆತಿಳಿಯದ್ದರಿಂದ ಅವಳ ಸ್ಥಿತಿಯು ವಿಲಕ್ಷಣವಾಯಿತು. ಈ ಪ್ರಕಾರ ಮುಂದುಗಾಣದೆ ಚಿತ್ರದ ಗೊಂಬೆಯಂತೆ ನಿಂತಿದ್ದ ಮುಗ್ಧೆಯನ್ನು ನಾನು ಪ್ರೇಮದಿಂದ ಕೈ ಹಿಡಿದು ಹತ್ತರ ಕುಳ್ಳಿರಿಸಿಕೊಂಡು ಸಂತಯಿಸಿದೆನು. ಆ ಹೊತ್ತಿನ ರಾತ್ರಿಯು ನನ್ನ ಪ್ರಿಯಳ ಸಮಾಗಮದಿಂದ ಅರೆನಿಮಿಷವಾಯಿತು.

ಈ ಪ್ರಕಾರ ನಾವು ಸುಖಾಸಕ್ತರಾಗಿ ಆರು ದಿನಗಳನ್ನು ಕಳೆಯಲು, ಮೇಘನಾದನು ರಾಜಪುತ್ರಿಯ ಭೆಟ್ಟಿಗಾಗಿ ಬರತಕ್ಕ ಏಳನೇಯ ದಿನವು ಪ್ರಾಪ್ತವಾಯಿತು. ಅವನು ನಿಯಮಿತವೇಳೆಗೆ ರಾಜಪುತ್ರಿಯ ಮಂದಿರದೊಳಗೆ ಬಂದು ಧುಮಿಷ್ಟನಾಗಿ ನನ್ನ ಪ್ರಿಯಳೊಡನೆ ಹರಟಹತ್ತಿದನು. ಅವನು ಪ್ರೇಮದ ಆವೇಶದಿಂದ -"ಪ್ರಾಣಪ್ರಿಯೆ, ಇದು ನೋಡು, ನೀನು ಹೇಳಿದಂತೆ ಪ್ರಚಂಡ ಧನುಸ್ಸನ್ನೂ, ಬಾಣಗಳಿಂದ ತುಂಬಿದ ಬತ್ತಳಿಕೆಯನ್ನೂ ತಂದಿದ್ದೇನೆ. ಈ ಧನಸ್ಸು ನಿನ್ನ ಕೈಯ್ಯಲ್ಲಿ ಬಂದದ್ದರಿಂದ ನನ್ನ ಪ್ರಾಣವೇ ನಿನ್ನ ಕೈಯಲ್ಲಿ ಬಂದಹಾಗಾಯಿತು. ಇರಲಿ, ಆದರೇನಾಯಿತು? ನೀನೇನು ಪರಕೀಯಳೆ? ನನ್ನ ಪ್ರಾಣದಸಲುವಾಗಿ ನನಗಿಂತಲೂ ನಿನಗೆ ವಿಶೇಷ ಚಿಂತೆಯಿರುವದು. ಬೇಟೆಯಿಂದಾಗಲಿ, ಗುರಿಹೊಡೆಯುವವರಿಂದಾಗಲಿ ನಿನ್ನ ಬೇಸರವನ್ನು ಕಳೆದುಕೋ" ಅನ್ನಲು, ರಾಜಪುತ್ರಿಯು ಆನಂದಯುಕ್ತಳಾಗಿ ಅವನನ್ನು ಆದರಾತಿಥ್ಯಗಳಿಂದ ಸಂತೋಷಗೊಳಿಸಿ, ಬೇಗನೆ ಶೋಣಿತಪುರಕ್ಕೆ ಕಳುಹಿದಳು. ಅವಳಿಗೆ ನನ್ನ ಸಮಾಗಮವಾದದ್ದಲ್ಲದೆ, ದುಷ್ಟ ಮೇಘನಾದ

ನನ್ನು ಕೊಲ್ಲುವ ಧನುಸ್ಸು ಕೈಸೇರಿದ್ದರಿಂದ ಅವಳ ಸಂತೋಷಕ್ಕೆ ನೆಲೆಯಿಲ್ಲ ದಾಯಿತು.

ಮಿತ್ರಾ ಸುಮತೀ, ಈ ಸಾರೆ ರಾಕ್ಷಸನು ರಾಜಪುತ್ರಿಯ ಸಂಗಡ ಆಡಿದ ಮಾತುಗಳನ್ನು ಸಹಿಸುವದು ನನ್ನಿಂದಾಗಲಿಲ್ಲ. ಹೆಂಡತಿಯ ಅಪಮಾನವನ್ನು ಕಣ್ಣುಮುಚ್ಚಿ ನೋಡಿ ಸುಮ್ಮನಿರುವದು ನನಗೆ ದುಃಸಹವಾಗಲು, ನನ್ನ ಪ್ರಿಯಳನ್ನು ಕುರಿತು ನುಡಿದೆನೇನೆಂದರೆ—ಪ್ರಾಣಪ್ರಿಯೆ, ನಾನು ಪ್ರತ್ಯಕ್ಷ ವಾಗಿ ನಿನ್ನ ಹತ್ತರ ಇರುತ್ತಿರಲು, ಎರಡನೆಯವನು ಬಂದು ನಿನಗೆ ಉಪದ್ರವ ಕೊಡುವದು ಆಶ್ಚರ್ಯವದು. ಆ ರಾಕ್ಷಸನ ಸಾಮರ್ಥ್ಯವೆಂದರೇನು? ಅರಕ್ಷ ಣದಲ್ಲಿ ಅವನನ್ನು ಯಮಸದನಕ್ಕೆ ಅಟ್ಟಬಹುದು. ನಾವು ಹೀಗೆ ಪರತಂತ್ರ ರಾಗಿ ಎಲ್ಲಿಯವರೆಗೆ ಇರಬೇಕು? ಇಂಥ ಸ್ಥಿತಿಯು ನಿಜವಾದ ಶೌರ್ಯಕ್ಕೂ, ಮನುಷ್ಯತ್ವಕ್ಕೂ ತಕ್ಕದ್ದಲ್ಲ. ಏನೇ ಆಗಲಿ ನಾನು ರಾಕ್ಷಸನಿಗೆ ಪ್ರತ್ಯಕ್ಷವಾಗಿ ಕಾಣಿಸಿಕೊಂಡು, ಅವನೊಡನೆ ಯುದ್ಧಮಾಡಿ ಕೊಲ್ಲುವೆನು, ಇಲ್ಲವೆ ನಾನು ಪ್ರಾಣಕೊಡುವೆನು. ಹೀಗೆ ಸ್ತ್ರೀಯರಂತೆ ಹೆದರಿ ಇನ್ನು ಮರೆಗೆ ಎಂದೂ ಕೂಡ್ರಲಿಕ್ಕಿಲ್ಲ.

ರಾಜಪುತ್ರಿಯು ನನ್ನ ಮಾತುಗಳನ್ನು ಕೇಳಿ ಮುಗುಳುನಗೆಯಿಂದ— "ಪ್ರಾಣಪ್ರಿಯರೇ, ತಮ್ಮ ಮಾತುಗಳು ಕಡುಗಲಿಗಳಿಗೆ ಸಹ ಸೋಜಿಗವನ್ನುಂ ಟುಮಾಡದೆ ಇರಲಾರವು. ಯಾಕೆಂದರೆ, ರಾಕ್ಷಸನ ಭಯಂಕರ ರೂಪವನ್ನು ಕಣ್ಣಿನಿಂದ ನೋಡುವದೂ ದುಃಸಹವಾಗಿರಲು, ಅವನಿಗೆ ಎದುರಾಗಿ ಯುದ್ಧ ಮಾಡುವದೆಂದರೆ ಎಂಥ ಶೌರ್ಯದ ಮಾತು! ತಾವು ಇಂಥ ಕಠಿಣ ಕೆಲಸಕ್ಕೆ ಕೈ ಹಾಕುವದನ್ನು ನೋಡಿ ನನಗೆ ಬಹಳ ವ್ಯಸನವಾಗುತ್ತದೆ. ತಾವು ವಿಷಪ ರೀಕ್ಷೆಯನ್ನು ಮಾಡಬಾರದು," ಎಂದು ಹೇಳಲು, ನಾನು ರಾಜಪುತ್ರಿಯನ್ನು ಕುರಿತು—"ಭೀರುಸ್ವಭಾವದ ನನ್ನ ತರಳೆಯೇ, ಸ್ತ್ರೀಜಾತಿಯ ಪ್ರೇಮಕ್ಕೆ ನಿನ್ನ ಭಾಷಣಗಳು ಒಪ್ಪುತ್ತವೆ. ನನ್ನಮೇಲೆ ನಿನ್ನ ಅನಿರ್ವಾಚ್ಯವಾದ ಪ್ರೇಮವು ಇರುವದೆಂಬದನ್ನು ನಾನು ಬಲ್ಲೆನು. ಇಲ್ಲಿಯವರೆಗೆ ನಿನ್ನನ್ನು ಪರಿಪರಿಯಿಂದ ಪೀಡಿಸಿದ ಆ ಖೂಳ ರಕ್ಕಸನ ಪ್ರಾಣವನ್ನು ಹಿಂಡಿದಹೊರತು, ನನಗೆ ಸಮಾಧಾನವಾಗಲರಿಯದು. ನೀನು ಇಲ್ಲದ್ದೊಂದು ಸಂಶಯತೆಗೆದು ಕೊಂಡು ನನ್ನ ಸಲುವಾಗಿ ಚಿಂತೆಮಾಡಬೇಡ. ಸ್ವಸ್ಥ ಮನಸ್ಸಿನವಳಾಗಿರು.

ನಿರಾಯಾಸದಿಂದ ರಾಕ್ಷಸನ ಶಿರಸ್ಸನ್ನು ಭೂಮಿಗಿಳಿಸುವೆನು” ಅನ್ನಲು, ಪದ್ಮನಯನೆಯು ನನ್ನ ಮಾತಿಗೆ ಹರ್ಷಿತಳಾಗಿ ನುಡಿದಳೇನಂದರೆ—“ ಪ್ರತಾಪಶಾಲಿಗಳೇ, ತಮ್ಮಲ್ಲಿ ಧೈರ್ಯವು ಎಷ್ಟರಮಟ್ಟಿಗೆ ಇರುತ್ತದೆಂಬದನ್ನು ತಿಳಿಯುವದಕ್ಕಾಗಿ ಶೂರರಿಗೆ ಅಸಹ್ಯವಾದ ಕೀಳುಮಾತುಗಳನ್ನು ನಾನು ಆಡಿದೆನು. ಈ ಪದ್ಮನಯನೆಯಾದರೂ, ಧನುರ್ವಿದ್ಯೆಯನ್ನು ಅರಿತವಳಿರುತ್ತಾಳೆ; ಅವಳಿಂದ ನಿಮಗೆ ತಪ್ಪದೆ ಸಹಾಯವಾಗಬಹುದು. ಇದಲ್ಲದೆ ರಾಕ್ಷಸನ ಮೃತ್ಯುರೂಪವಾದ ಧನಸ್ಸು ನನ್ನ ಹತ್ತರ ಅದೆ. ಯಾವದೊಂದು ಉಪಾಯದಿಂದ ರಾಕ್ಷಸನ ನಾಶಮಾಡದಿದ್ದರೆ, ನಮಗೆ ಸುಖವಾಗಲರಿಯದೆಂಬದನ್ನು ನಾನು ಬಲ್ಲೆನು. ಇರಲಿ, ಹೇಗಾದರೂ ನನ್ನ ವ್ರತದ ಅವಧಿಯು ಮುಗಿಯುತ್ತಬಂದದೆ. ಕಾಮುಕನಾದ ರಾಕ್ಷಸನು ಪರಸ್ತ್ರೀಯಾದ ನನ್ನನ್ನು ಕೆಣಕಿದರೆ ನಾಶವಾಗದೆ ಇರನು. ವೀರಾಗ್ರೇಸರರಾದ ತಮ್ಮ ಬಲವು ನನಗಿರಲು, ಆ ಖೂಳಕ್ರವ್ಯಾದನ ಸಾಮರ್ಥ್ಯವನ್ನೂ, ಕ್ರೂರತನವನ್ನೂ ಏಕೆ ಲೆಕ್ಕಿಸಲಿ? ತಮ್ಮ ಬಾಹುಗಳನೆರಳಲ್ಲಿ ನಿರಾತಂಕವಾಗಿ ವಿಶ್ರಾಂತಿಯನ್ನು ತಗೆದುಕೊಳ್ಳುವೆನು. ಅವಧಿಯು ಮುಗಿಯುವವರೆಗೆ ತಾಳಬೇಕು. ರಾಕ್ಷಸನ ದೌರ್ಜನ್ಯವೇ ಅವನ ನಾಶಕ್ಕೆ ಕಾರಣವಾಗುವದು.

---

## ೯ನೆಯ ಪ್ರಕರಣ.

# ದುಷ್ಟಶಾಸನ.



ಈ ಮೇರೆಗೆ ನನ್ನ ಪ್ರಿಯಳು ಹೇಳಿದ ಸಮಂಜಸಮಾತುಗಳಿಗೆ ನಾನು ಒಡಂಬಟ್ಟು, ಕೆಲವು ದಿನಗಳು ಕಳೆಯಲು, ಆಕೆಯ ವ್ರತಸಮಾಪ್ತಿಯ ದಿವಸವು ಒದಗಿತು. ಒಕ್ಕಲಿಗನು ಹೊಡೆಯ ತಲೆಯಲ್ಲಿ ಮಳೆಯ ಹಾದಿಯನ್ನು ನೋಡುವಂತೆ, ಪದ್ಮನಯನೆಯ ಅಂಗಸಂಗವನ್ನು ಎದುರುನೋಡುತ್ತಿದ್ದ ಮೋಘನಾದನು, ಆ ದಿನ ಉತ್ಸಾಹಪೂರ್ಣನಾಗಿ ಪದ್ಮನಯನೆಯ ಬಳಿಗೆ ಬಂದನು.

ಅವನ ಪೋಷಾಕು ಸುಂದರವಾದದ್ದಿತ್ತು. ಮುತ್ತು—ರತ್ನಗಳ ಅಲಂಕಾರಗಳಿಂದ ಅವನು ಜಗ್ಗುತ್ತಿದ್ದನು. ತನ್ನ ವೈಭವದಿಂದ ಪದ್ಮನಯನೆಯನ್ನು ಮರುಳು ಮಾಡುವ ವಿಷಯವಲ್ಲಿ ಅವನು ಎಳ್ಳಷ್ಟು ಔದಾಸೀನ್ಯವನ್ನು ತಾಳಿದ್ದಿಲ್ಲ. ರಥ, ಕುದುರೆ, ಅಂಗರಕ್ಷಕರು, ಪರಿಚಾರಕರು, ಸ್ತುತಿಪಾಠಕರು, ಪರಿಮಿತಚತುರಂಗ ಸೈನ್ಯ ಮೊದಲಾದವು ರಾಕ್ಷಸನ ಉತ್ಸಾಹವನ್ನು ಹೆಚ್ಚಿಸುತ್ತಿದ್ದವು. ಮನೋರಾಜ್ಯದ ಉಚ್ಚಶಿಖರವನ್ನೇರಿದ ಆ ದೈತ್ಯರಾಜನ ಮನಸ್ಸಿನಲ್ಲಿ ಆನಂದದ ತೆರೆಗಳು ಉತ್ಪನ್ನವಾಗಿದ್ದವು. ಅವನಿಗೆ ದಿಕ್ಕುಗಳು ಪ್ರಸನ್ನವಾಗಿ ತೋರುತ್ತಿದ್ದವು. ಉಚ್ಚಮನೋರಥಗಳನ್ನು ಕಲ್ಪಿಸಿ ಕಲ್ಪಿಸಿ, ಅವುಗಳ ಕಾಲ್ಪನಿಕ ಭೋಗದಿಂದ ಮನಸ್ಸು ತೃಪ್ತವಾಗದಿರಲು, ಅವನು ಒಮ್ಮೊಮ್ಮೆ ಚಡಪಡಿಸುವನು. ಇಂದು ಪದ್ಮನಯನೆಯ ಬಳಿಯಲ್ಲಿ ಹೀಗೆ ಕೂಡಬೇಕು—ಹಾಗೆ ಕೂಡಬೇಕು, ಹೀಗೆ ಮಾತಾಡಬೇಕು—ಹಾಗೆ ಮಾತಾಡಬೇಕು, ಆಕೆಗೆ ಇದನ್ನು ಕೊಡಬೇಕು—ಅದನ್ನು ಕೊಡಬೇಕು, ಆಕೆಯ ಮನಸ್ಸನ್ನು ಹೀಗೆ ರಮಿಸಬೇಕು, ಹಾಗೆ ರಮಿಸಬೇಕು ಇವೇ ಮೊದಲಾದ ವಿಚಾರಗಳ ತಾಕಲಾಟದಿಂದ ವ್ಯಗ್ರನಾದ ಆ ತಾಮಸಿಯ ಮನಸ್ಸು ಪದ್ಮನಯನೆಯಿದ್ದಲ್ಲಿಗೆ ಹೋಗಿ ಹೋಗಿ ಬರುತ್ತಿತ್ತು. ತನಗೆ ಒಲಿದಂತೆ ಜಗತ್ತನ್ನು ನೋಡುವದು ಮನುಷ್ಯನ ಸ್ವಭಾವವಾದದ್ದರಿಂದ, ತನ್ನಂತೆ ಪದ್ಮನಯನೆಯಾದರೂ ಉತ್ಸಾಹಪೂರ್ಣಳಾಗಿ, ವಸ್ತ್ರಾಲಂಕಾರಗಳಿಂದ ತನ್ನ ಸೌಂದರ್ಯದಲ್ಲಿ ಸೊಬಗನ್ನುಂಟು ಮಾಡಿಕೊಂಡು, ಸರ್ವಸನ್ನಾಹದೊಡನೆ ತನ್ನ ಹಾದಿಯನ್ನು ನೋಡುತ್ತಿರುವಳೆಂದು ಮೇಘನಾದನು ಕಲ್ಪಿಸಿದ್ದನು. ಪ್ರಿಯಮಿತ್ರಾ, ನಮ್ಮ ವಿಷಯಿಜನರ ಈ ಹಾಳುವರ್ಣನವು ನಿನಗೆ ತಿರಸ್ಕರಣೀಯವಾಗಿ ತೋರಬಹುದು; ಆದರೆ, "ಹೆತ್ತವರಿಗೆ ಹೆಗ್ಗಣವೇ ಮುದ್ದು" ಎಂಬಂತೆ ನಮ್ಮಂಥ ವಿಷಯಿಗಳಿಗೆ ಇಂಥ ವರ್ಣನಗಳೇ ರಮ್ಯವಾಗಿ ತೋರುವವು. ಇರಲಿ, ಕದಲಿತ್ತಿನಂತೆ ಸಿಂಗಾರವಾಗಿದ್ದ ನಮ್ಮ ಮದುಮಗನು ಮದುವೆಯಾಗುವ ಉಬ್ಬಿನಿಂದ ಪದ್ಮನಯನೆಯ ವಿಹಾರಮಂದಿರವನ್ನು ಹೊಕ್ಕು ಬೆರಗಾಗಿ ನಿಂತುಕೊಂಡನು.

ಮೇಘನಾದನು ಪದ್ಮನಯನೆಯ ಮಂದಿರವನ್ನು ಪ್ರವೇಶಿಸಿದಾಗ ಎರಡು ತಾಸು ಹೊತ್ತು ಏರಿತ್ತು. ಉತ್ಸಾಹದ ಯಾವಚಿಹ್ನಗಳೂ ಆ ಮಂದಿರದಲ್ಲಿ ಕಂಡುಬರುತ್ತಿದ್ದಿಲ್ಲ. ಪದ್ಮನಯನೆಯು ಗಂಭೀರ ಮುಖಮುದ್ರೆಯು

ಮುಂದೆ ಮೇಘನಾದನ ಅಲಂಕಾರಿಕಮುಪ್ಪೆಯು ತೇಜೋಹೀನವಾಯಿತು. ಆಗ ಪದ್ಮನಯನೆಯು ಬೇಟೆಯಾಡಲಿಕ್ಕೆ ತಕ್ಕ ಪುರುಷವೇಷವನ್ನು ಧರಿಸಿದ್ದಳು. ಮೇಘನಾದನು ಕೊಟ್ಟಿದ್ದ ಪ್ರಚಂಡಧನುಸ್ಸು ಆಕೆಯ ಕೈಯಲ್ಲಿ ಒಪ್ಪುತ್ತಿತ್ತು. ಟೊಂಕದಲ್ಲಿಖಡ್ಗವು ಅಲೆದಾಡುತ್ತಿತ್ತು. ಆಕೆಯು ಹದನಾದಬರ್ಚಿಯನ್ನು ತಕ್ಕೊಂಡಿದ್ದಳು. ಒಟ್ಟಿಗೆ ಬೇಟೆಗೆ ಹೊರಟುನಿಂತಿದ್ದ, ಪ್ರತಾಪಿಯಾದ ಪ್ರಾಯದ ಕ್ಷತ್ರಿಯ ವೀರನಂತೆ ಆಕೆಯು ಮೇಘನಾದನಿಗೆ ತೋರಿದಳು. ಆಕೆಯು ಮೇಘನಾದನನ್ನು ಕುರಿತು—ರಾಕ್ಷಸಶ್ರೇಷ್ಠನೇ, ಒಳ್ಳೇದು ಹೊತ್ತಿಗೆ ಬಂದೆ; ಇಲ್ಲದಿದ್ದರೆ ಒಬ್ಬಳೇ ಬೇಟೆಗೆ ಹೋಗಬೇಕಾಗಿತ್ತು. ನಿನ್ನ ಈ ಪ್ರಚಂಡ ಧನುಸ್ಸು ನನ್ನ ಕೈಸೇರಿದಾಗಿನಿಂದ ಬೇಟೆಯಾಡುವ ನನ್ನ ಉತ್ಸಾಹಕ್ಕೆ ಮೇರೆಯಿಲ್ಲದಾಗಿದೆ. ನಿನ್ನ ಈ ಧನುಸ್ಸು ಬಹು ಉತ್ತಮವಾದದ್ದು. ನಾನು ನಿನ್ನ ಪಾಣಿಗ್ರಹಣ ಮಾಡಿದನಂತರ ಪರಾಧೀನಳಾಗುವೆನು. ಈಗಿನಂತೆ ಬೇಟೆಯಾಡುವದಕ್ಕೆ ಅನುವು ದೊರೆಯುವದಿಲ್ಲ. ವಿವಾಹಿತ ಸ್ತ್ರೀಯ ಸ್ವಾತಂತ್ರ್ಯವು ಪತಿಯಿಂದಾಗಲಿ, ಸಂತತಿಯಿಂದಾಗಲಿ ಸೆಳೆದುಕೊಳ್ಳಲ್ಪಡುತ್ತದೆ. ಏಳು, ಇಂದು ಆನಂದದಿಂದ ಬೇಟೆಯಾಡಿಬರೋಣ. ಇಂದು ವ್ರತಸಮಾಪ್ತಿಯಾದ್ದರಿಂದ ಪಾಣಿಗ್ರಹಣ ಮಹೋತ್ಸವವು ನೆರವೇರತಕ್ಕದ್ದದೆ ವೀರರಿಗೆ ಮೃಗಯೆಗಿಂತ ಹೆಚ್ಚು ಆನಂದದ ಸಂಗತಿಯಿಲ್ಲೆಂಬದನ್ನು ನಾನು ಯಾಕೆ ಹೇಳಬೇಕು? ಆ ಆನಂದದ ಸಂಗತಿಯು ನಮ್ಮ ವಿವಾಹದ ಪೂರ್ವದಲ್ಲಿ ಒದಗಲಿ. ವೀರಾಗ್ರಣಿಯೇ, ಈ ಪರಿವಾರದ ಗೊಂದಲವೇಕೆ? ನಿನ್ನ ಈ ಪರಿಚಾರಕರೂ, ಬಟ್ಟಂಗಿಗಳೂ, ಸೈನ್ಯವೂ, ರಥಾಶ್ವಗಳೂ ಶೋಣಿತಪುರಕ್ಕೆ ಹೋಗಲಿ. ನಿನ್ನ ಸಮಾಗಮಕ್ಕಾಗಿ ಬಹುದಿನ ಕಾದಿದ್ದ ನನಗೆ ನಿನ್ನ ವಿಯೋಗವು ಬೇಗನೆ ಒದಗದಂತೆ ವ್ಯವಸ್ಥೆಮಾಡು. ನೀನು ಚಿರಕಾಲ ಈ ವಿಹಾರಮಂದಿರದಲ್ಲಿ ಇರತಕ್ಕದ್ದು. ನಾನು ಅರ್ಧಾಂಗಿಯಾದಬಳಿಕ ನಿನ್ನ ಸೇವೆಯನ್ನು ಕೈಮುಟ್ಟಿ ಮಾಡುವದು ನನ್ನ ಧರ್ಮವಲ್ಲವೆ? ಅನ್ನಲು, ರಾಕ್ಷಸನು ಮೋಹಪರವಶನಾಗಿ ಎಲ್ಲ ಪರಿವಾರವನ್ನು ಶೋಣಿತಪುರಕ್ಕೆ ಅಟ್ಟಿ, ಪದ್ಮನಯನೆಯೊಡನೆ ಬೇಟೆಗೆ ಹೊರಟನು.

ಪದ್ಮನಯನೆಯು ಮೇಘನಾದನೊಡನೆ ಬೇಟೆಯಾಡುತ್ತಾಡುತ್ತ ಅರಣ್ಯದ ಮಧ್ಯವನ್ನು ಪ್ರವೇಶಿಸಿದಳು. ಪ್ರಿಯಮಿತ್ರಾ, ಏನು ಹೇಳಲಿ! ಏಕಾಂ

ಶವಾಸ, ದಟ್ಟವಾದ ಗಿಡದ ನೆರಳು, ಏರಿಕೆಯ ಬಿಸಿಲಿನಲ್ಲಿಯೂ ಉಷ್ಣತೆಯ ಬಾಧೆಯು ತಟ್ಟದಾಗಿದೆ, ಪದ್ಮನಯನೆಯು ತನ್ನ ಭಾಲೆಯನ್ನು ನೆಗಹಿ, ಹುಬ್ಬು ಗಂಟಿಕ್ಕಿ ಒಂದು ಮೃಗವನ್ನು ಬೆನ್ನಟ್ಟುವ ಹವಣಿಕೆಯಲ್ಲಿದ್ದಾಳೆ, ಮೇಘನಾದನ ಪಾಪದೃಷ್ಟಿಗಳು ಪದ್ಮನಯನೆಯಿಂದ ಕಿತ್ತಲಾರದಾಗಿವೆ; ಈ ಸ್ಥಿತಿಯಲ್ಲಿ ಆತನು ಪದ್ಮನಯನೆಯನ್ನು ಕುರಿತು—ಹರಿಣಾಕ್ಷೀ, ಬಿಡು, ಇನ್ನೂ ಬೇಟೆಯು ಸಾಕಾಗಲಿಲ್ಲವೇನು? ನೋಡು, ಈ ಸ್ಥಳವು ಎಷ್ಟು ರಮ್ಯವಾಗಿದೆ. ಬೇಟೆಯಲ್ಲಿ ನನ್ನ ಮನಸ್ಸು ಎಷ್ಟು ಮಾತ್ರವೂ ರಮಿಸಲೊಲ್ಲದು. ನಾನು ಕೇವಲ ಪರವಶನಾಗಿದ್ದೇನೆ, ಸರ್ವಾಂಗದಲ್ಲಿ ದಾಹವು ಉತ್ಪನ್ನವಾಗಿದೆ. ಈ ಪ್ರಸಂಗದಲ್ಲಿ ನೀನು ನನ್ನನ್ನು ಬಿಗಿದಪ್ಪಿ ಸಮಾಧಾನಗೊಳಿಸಲೇಬೇಕು, ಎಂದು ನುಡಿದು ಕುದುರೆಯಿಂದ ಆಕೆಯನ್ನು ಇಳಿಸಹೋದನು. ಆಗ ಆಕೆಯು—ಹಾ! ಅಧಮಾ, ಚಾಂಡಾಲಾ, ನನ್ನ ದೇಹಸ್ಪರ್ಶದಿಂದ ನಿನ್ನ ಪ್ರಾಣಹಾನಿಯಾಗುವದಂತು ಇರಲಿ, ನಾನು ಅಪವಿತ್ರಳಾದೇನು? ಎಂದು ನುಡಿದು ಒಮ್ಮೆ ಭಾಲೆಯಿಂದ ಅವನನ್ನು ಇರಿದು, ಸಾಂಕೇತಿಕ ಶಬ್ದವನ್ನು ಉಚ್ಚರಿಸಿದಳು. ಕೂಡಲೆ ಅಲ್ಲಿಯೇ ಮರೆಗೆ ಇದ್ದ ಕಮಲಾಕ್ಷನು ಅಶ್ವಾರೂಢನಾಗಿ ಒಂದು ಪದ್ಮನಯನೆಯನ್ನು ಬೆನ್ನಿಗೆ ಹಾಕಿಕೊಂಡು ನಿಂತುಕೊಂಡನು.

ಮಿತ್ರದ್ರೋಹ್ಯನೇ, ಅಕಸ್ಮಾತ್ತಾಗಿ ನಾನು ಬಂದದ್ದನ್ನು ನೋಡಿ ಮೇಘನಾದನು ಬೆಪ್ಪಾದನು. ಆತನ ತಲೆಗೇರಿದ ಕಾಮವಿಕಾರವು ಝರ್ರನೆ ಇಳಿದು, ಪದ್ಮನಯನೆಯ ಮೋಸದ ಚಿತ್ರವು ಅವನ ಕಣ್ಣಿಗೆ ಕಟ್ಟಿತು. ತನ್ನ ಸರಳತನ, ಪದ್ಮನಯನೆಯ ಮೋಸ, ನನ್ನ ಉದ್ಧಾಮತನ ಇವು ಮನಸ್ಸಿನಲ್ಲಿ ಹೊಳೆಯಲು, ಆ ತಾಮಸಿಯು ಕ್ರೋಧಕ್ಕೆ ಈಡಾದನು. ಅವನ ಕ್ರೋಧಾಗ್ನಿಯು ಪುಟವಾಗಿ ಹೆಚ್ಚುತ್ತ ಹೋಗಲು ಕ್ಷಣಕ್ಷಣಕ್ಕೆ ಅವನ ಮುಖಮುದ್ರೆಯು ಬದಲಾಗಹತ್ತಿತು. ಅವನು ಆವೇಶದಿಂದ ನನ್ನನ್ನು ಕುರಿತು—ದುರ್ಬಲನಾದ ನರಾಧಮನೇ, ಸ್ಥಾನಾಸ್ಥಾನದ ವಿಚಾರವನ್ನು ಮಾಡದೆ, ಯಾರ ಭಯವನ್ನೂ ಮನಸ್ಸಿನಲ್ಲಿ ತಾರದೆ, ಪ್ರಾಯದ ಸೊಕ್ಕಿನಿಂದ ಮೈಮರೆತು ಪದ್ಮನಯನೆಯ ಬೆನ್ನುಹಟ್ಟುವೆಯಾ? ಬೇಟೆಯ ನೆವದಿಂದ ನನ್ನನ್ನು ಇಲ್ಲಿಗೆ ಕರತಂದು ಕೈ ತೋರಿಸಬೇಕೆಂದು ನೀವು ಎಷ್ಟು ದಿನ ಹೊಂಚುಹಾಕಿದ್ದೀರಿ? ನಿಮ್ಮಂಥ ದುರ್ಬಲರಿಂದ ಆಗುವದೇನು? ಇಗೋ, ನಿನ್ನಲ್ಲಿ ಸಾಮರ್ಥ್ಯವಿದ್ದರೆ ಉಳಿದುಕೋ, ಎಂದು ಖಡ್ಗ

ವನ್ನೇರ್ರಿಕುದುರೆಯನ್ನು ನೂಕಿ ನನ್ನ ಮೈಮೇಲೆ ಬಂದನು. ಕೂಡಲೆ ನಾನು ಅಸಂಖ್ಯ ಬಾಣಗಳನ್ನು ಆ ರಾಕ್ಷಸನ ಸರ್ವಾಂಗದಲ್ಲಿ ನಡಿಸಿ, ಅವನನ್ನು ಹಿಂದಕ್ಕೆ ಕಟ್ಟಿ ನುಡಿದೆ ನೇನಂದರೆ—ಎಲೈ ತಾಮಸಿಯೇ, ಸಮರದಲ್ಲಿ ನಿನಗೆ ಎದುರಾಗಿ ನನ್ನ ಬಾಹು ಬಲವನ್ನು ತೋರಿಸುವೆನಲ್ಲದೆ, ನಿನ್ನ ಹಾಗೆ ಗಳಹುವದಿಲ್ಲ. ಸುಶೀಲೆಯೂ, ಸುಕುಮಾರಿಯೂ, ಸುಶಿಕ್ಷಿತಳೂ ಆದ ಪದ್ಮನಯನೆಯು, ಗುಣಹೀನನಾದ ನಿನ್ನ ಪ್ರತಿಬಂಧದಿಂದ ಕೊರಗುತ್ತಿರಲು, ಪುರುಷಧರ್ಮವನ್ನನುಸರಿಸಿ ನಾನು ಅವಳ ಬಂಧವಿಮೋಚನ ಮಾಡಲಿಕ್ಕೆ ನಿಂತದ್ದರಲ್ಲಿ ಅಪರಾಧವೇನಿರುವದು? ಪದ್ಮನಯನೆಯು ನನ್ನ ವಿವಾಹಿತ ಸ್ತ್ರೀಯಿರುತ್ತಾಳೆ; ನಮ್ಮಿಬ್ಬರ ವಿವಾಹಕ್ಕೆ ಪರಸ್ಪರರಲ್ಲಿ ಉತ್ಪನ್ನವಾದ ಪ್ರೇಮವು ಕಾರಣವಾಗಿರುತ್ತದೆ. ನಿಜವಾದ ಪ್ರೇಮವು ಐಶ್ವರ್ಯ, ಸಾಮರ್ಥ್ಯ, ಅಧಿಕಾರ ಮುಂತಾದ ಬಾಹ್ಯಕಾರಣಗಳಿಂದ ಉತ್ಪನ್ನವಾಗುತ್ತಿರುವದಿಲ್ಲ. ನಿನ್ನ ಸಾಮರ್ಥ್ಯದ ಭಯವು ನನಗಿರುತ್ತಿದ್ದರೆ, ಪದ್ಮನಯನೆಯನ್ನು ನಾನು ಕಣ್ಣೆತ್ತಿ ಸಹ ನೋಡುತ್ತಿದ್ದಿಲ್ಲ. ನೀನು ಮೈನೊಕ್ಕು ಬಿಟ್ಟು ಎಚ್ಚರದಿಂದ ನನ್ನೊಡನೆ ಯುದ್ಧಮಾಡು, ಅಂದರೆ ನಮ್ಮಿಬ್ಬರ ಪರಾಕ್ರಮದ ನಿರ್ಣಯವಾಗುವದು.

ನನ್ನ ಈ ಮಾತುಗಳನ್ನು ಕೇಳಿ ರಾಕ್ಷಸನಿಗೆ ಮಿತಿಮೀರಿ ಸಿಟ್ಟು ಬಂದರೂ, ಪದ್ಮನಯನೆಯ ಕೈಯಲ್ಲಿ ತನ್ನ ಮೃತ್ಯುರೂಪವಾದ ಪ್ರಚಂಡ ಧನಸ್ಸಿರುವದನ್ನು ನೋಡಿ ಅವನು ಕುಂಠಿತನಾದನು. ಮೇಘನಾದನು ತನ್ನ ಈ ಮನದ ದುಗುಡನ್ನು ವ್ಯಕ್ತಮಾಡದೆ, ಶಸ್ತ್ರಗಳ ಹೊಡತಗಳಿಂದ ನನ್ನನ್ನು ಬಹಳವಾಗಿ ನೋಯಿಸಿದನು. ಆಗ ನಾನು ಖತಿಗೊಂಡು ಬಾಣಗಳ ಮಳೆಸುರಿಸಿ ರಾಕ್ಷಸನ ಸರ್ವಾಂಗವನ್ನು ಛಿದ್ರಮಯವಾಗಿ ಮಾಡಲು, ಅವನು ಕಾಲನಂತೆ ಅರ್ಭಟಿಸುತ್ತ ನನ್ನ ಬಾಣಗಳನ್ನು ಲೆಕ್ಕಿಸದೆ ಮೇಲ್ವಾಯ್ದು ಖಡ್ಗದಿಂದ ನನ್ನನ್ನು ಬಹಳವಾಗಿ ನೋಯಿಸಿದನು. ಇದನ್ನು ನೋಡಿ ನನ್ನ ಪ್ರಿಯಳು ಬಹಳ ಅಸಮಾಧಾನಪಟ್ಟಳು. ಅವಳು ಸ್ವತಃ ಯುದ್ಧಮಾಡಲಿಕ್ಕೆ ಟೊಂಕ ಕಟ್ಟಿದಳು. ಇಂಥ ಸಾಹಸಕ್ಕೆ ಹೋಗಲಾಗದೆಂದು ನಾನು ಅವಳನ್ನು ಪ್ರತಿಬಂಧಿಸಲು, ನನ್ನ ಬಹಿಃಪ್ರಾಣವಾದ ಆ ಸುಂದರಿಯು ನುಡಿದಳೇನಂದರೆ—ಆರ್ಯರೇ, ನಾನು ತಮ್ಮ ಸುಖದುಃಖಗಳಿಗೆ ಪಾಲುಗಾರಳಾಗಿರಲು, ಸಂಕಟಸಮಯದಲ್ಲಿ ತಮಗೆ ಸಹಾಯ ಮಾಡದೆ ಇರುವರೇ? ಸಹಾಯಮಾಡಲಿಕ್ಕೆ ನನಗೆ ಅನಕೂ

ಲವೇ ತೆರದಿದ್ದರೆ ಉಪಾಯವಿದ್ದಿಲ್ಲ. ನಾನು ಚಿಕ್ಕಂದಿನಲ್ಲಿ ಧನುರ್ವಿದ್ಯೆಯನ್ನು ಅಭ್ಯಾಸಿಸಿದ್ದೇನೆ. ಅದರ ಉಪಯೋಗವನ್ನು ಈಗಲ್ಲದೆ ಮತ್ತೆ ಯಾವಾಗ ಮಾಡಬೇಕು? ಈ ಚರಣಸೇವೆಯಲ್ಲಿ ದೇಹವನ್ನು ಸವಿಸಿ ಕೃತಾರ್ಥಳಾಗಲಿಕ್ಕೆ ಪ್ರತಿಬಂಧವಿರಬಾರದೆಂದು ನಾನು ಬೇಡಿಕೊಳ್ಳುತ್ತೇನೆ. ಮನೋಹರರೇ, ಎರಡನೆಯ ವಿಚಾರ ಮಾಡದೆ, ನನಗೆ ಭಾರವಾಗಿರುವ ಈ ಪ್ರಚಂಡ ಧನುಸ್ಸನ್ನು ತಾವು ತೆಗೆದುಕೊಂಡು, ನನಗೆ ತಮ್ಮ ಹಗುರಾದ ಧನುಸ್ಸನ್ನು ಕೊಡಬೇಕು.

ಈ ಪ್ರಕಾರ ರಾಜಪುತ್ರಿಯು ನನ್ನನ್ನು ಆಗ್ರಹದಿಂದ ಹಿಂದಕ್ಕೆ ಸರಿಸಿ, ಧನುಷ್ಪಾಣಿಯಾಗಿ ರಾಕ್ಷಸನಿಗೆ ಎದುರಾಗಲು ಅವನು—ಎಲೈ ವಿಶ್ವಾಸಘಾತಕಿಯೇ, ನಿನ್ನ ಪ್ರಿಯನನ್ನು ಹಿಂದಕ್ಕೆ ಸರಿಸಿ ನೀನು ನನ್ನ ಸಂಗಡ ಯುದ್ಧಕ್ಕೆ ಬಂದೆಯಾ? ಏನೂ ಚಿಂತೆಯಿಲ್ಲ. ಇನ್ನು ಮೇಲೆ ಮಾತ್ರ ನೀವು ಬೇಗನೆ ಜಯವನ್ನು ಹೊಂದಿ ನನ್ನ ಕಾಟವನ್ನು ತಪ್ಪಿಸಿಕೊಳ್ಳುವಿರಿ. ನಿನ್ನನ್ನು ಒಮ್ಮೆಲೆ ಕೊಲ್ಲಲಿಕ್ಕೆ ನಾನು ಮನಸ್ಸು ಮಾಡುವದಿಲ್ಲ. ನೀನು ಯುದ್ಧಮಾಡಲಿಚ್ಛಿಸುತ್ತಿದ್ದರೆ, ಯಥೇಚ್ಛವಾಗಿ ಬಾಣಗಳನ್ನು ಬಿಡು. ಅವುಗಳಿಂದ ಲೇಶವಾದರೂ ನನಗೆ ಬಾಧೆಯಾಗಲಾರದು. ಎನ್ನಲು ರಾಜಪುತ್ರಿಯು ಸಿಟ್ಟಿನಿಂದ ಹುಬ್ಬುಗಂಟಿಕ್ಕಿದಳು; ಅವಳ ಕೋಮಲವಾದ ಕೆಳದುಟಿಯು ನಡುಗಹತ್ತಿತು. ಅವಳು ರಾಕ್ಷಸನನ್ನು ಕುರಿತು—ಎಲೈ ಪರೇಂಗಿತಜ್ಞನಲ್ಲದ ಮತ್ತನಾದ ದೈತ್ಯಾಧಮನೇ, ಅನಾಥರಾದ ಅಬಲೆಯರನ್ನು ಪ್ರತಿಬಂಧಿಸಿ, ಒತ್ತಾಯದಿಂದ ಅವರನ್ನು ವಶಮಾಡಿಕೊಳ್ಳುವ ನಿನ್ನ ಆಯುಷ್ಯವು ಕ್ಷೀಣವಾಗಲಿ; ನಿನ್ನ ವಂಶವು ನಿರ್ವಂಶವಾಗಲಿ. ಅಧಮಾ, ನಾನು ದೆಸೆಗೇಡಿಯಾಗಿ ಅರಣ್ಯದಲ್ಲಿ ಹಲುಬುತ್ತಿರಲು, ನನ್ನ ದುಃಖಕ್ಕೆ ಲಕ್ಷ್ಯಗೊಡದೆ, ಸ್ವಹಿತವನ್ನೇ ಚಿಂತಿಸಿದೆಯಲ್ಲ! ನಿನ್ನಂತೆ ನಾನೂ ತಾಮಸಿಯಾಗಿದ್ದರೆ, ಇಷ್ಟು ಹೊತ್ತಿಗೆ ನಿನ್ನ ಬಲೆಗೆ ಬೀಳುತ್ತಿದ್ದೆನು, ಇಲ್ಲವೆ ಪ್ರಾಣಕ್ಕೆ ಎರವಾಗುತ್ತಿದ್ದೆನು. ಸ್ವಾರ್ಥಪರನೂ, ನಿರ್ದಯನೂ ಆದ ನಿನಗೆ ಅನುಕೂಲವಾಗಿ ನಡೆಯುವದು ಯೋಗ್ಯವೆಂದು ನನಗೆ ತೋರಿದ್ದರಿಂದ, ಮೂರ್ಖನಾದ ನಿನ್ನ ಒಲವಿನಂತೆ ನಡೆದು ನನ್ನ ನಡತೆಯನ್ನು ಪರಿಶುದ್ಧವಾಗಿಟ್ಟುಕೊಂಡೆನು. ಕುಲಗೇಡಿಯೇ, ತಾವು ಮನಮುಟ್ಟಿ ಪ್ರೀತಿಸದ ಪುರುಷರನ್ನು ಪ್ರಮದೆಯರು ಹುಳಬಿದ್ದ ಹುಚ್ಚನಾಯಿಗಿಂತಲೂ ಕಡೆಯೆಂದು

ತಿಳಿಯುತ್ತಾರೆಂಬವನ್ನು ಅರಿಯೆಯಾ? ನೀನು ಗುಣಹೀನನಾದ್ದರಿಂದ ನಿನ್ನ ಐಶ್ವರ್ಯ-ಸಾಮರ್ಥ್ಯಗಳು ನನಗೆ ತ್ಯಾಜ್ಯವಾಗಿರುವವು. ಇಲ್ಲಿಯವರೆಗೆ ನಾನು ಪ್ರಾಣಧಾರಣಮಾಡಿದ್ದು ನಿನ್ನ ಸಮಾಗಮದ ಇಚ್ಛೆಯಿಂದಲ್ಲ; ಈ ಜತ್ತಿನಲ್ಲಿ ಮನುಷ್ಯರಾಗಿ ಹುಟ್ಟಿ, ಆ ಅಲಭ್ಯ ಜನ್ಮವನ್ನು ಸಾರ್ಥಕವಾಗ ಮಾಡದೆ, ವ್ಯರ್ಥ ದೇಹವನ್ನು ನೀಗುವದು, ಅಯೋಗ್ಯವೆಂದು ತಿಳಿದು ಹೇಗಾದರೂ ಪ್ರಾಣಧಾರಣ ಮಾಡಿರುತ್ತೇನೆ. ಈಗ ನನ್ನ ಪ್ರಿಯ ಪತಿಯ ಸಹಾಯಾರ್ಥವಾಗಿ ಯುದ್ಧ ಮಾಡಲು ನಿಂತಿರುವೆನು. ದೈವಯೋಗದಿಂದ ನೀನು ಯುದ್ಧದಲ್ಲಿ ನಾಶವನ್ನು ಹೊಂದಿದರೆ, ನನ್ನ ಈ ದೇಹವನ್ನು ಪತಿಸೇವೆಯಲ್ಲಿ ಸವಿಸುವೆನು. ಈಶ್ವರೇಚ್ಛೆಯಿಂದ ವಿಪರೀತ ಪ್ರಸಂಗವೇ ಒದಗಿದಲ್ಲಿ ಈ ಜಡದೇಹವನ್ನು ನನ್ನ ಪ್ರಿಯಪತಿಗೆ ಅರ್ಪಿಸಿ, ಅಖಂಡ ಸೌಭಾಗ್ಯವನ್ನು ಹೊಂದುವೆನು. ವ್ಯ ಸೊಕ್ಕಿನಿಂದ ನನ್ನ ಸಾಮರ್ಥ್ಯವನ್ನು ಲಕ್ಷಿಸದೆಯಿದ್ದ ನಿನ್ನನ್ನು ಅಸ್ತ್ರಪ್ರಯೋಗದಿಂದ ನಾನು ಜರ್ಜರವಾಗಮಾಡದಿದ್ದರೆ ನನಗೂ ನನ್ನ ಧನುರ್ವಿದ್ಯೆಯ ಅಭ್ಯಾಸಕ್ಕೂ ಧಿಕ್ಕಾರವಿರಲಿ, ಎಂದು ಹೇಳಿ, ಅಸಂಖ್ಯ ಬಾಣಗಳನ್ನು ರಾಕ್ಷಸನ ಸರ್ವಾಂಗದಲ್ಲಿ ನಡಿಸಿದಳು.

ಪದ್ಮನಯನೆಯು ಬತ್ತಳಿಕೆಯಿಂದ ಬಾಣಗಳನ್ನು ತೆಗೆಯುವದೂ, ಅವುಗಳನ್ನು ಹೆದೆಗೇರಿಸುವದೂ, ಕಿವಿಯವರೆಗೆ ಜಗ್ಗುವದೂ ಯಾರಿಗೂ ಗೊತ್ತಾಗುತ್ತಿದ್ದಿಲ್ಲ. ಅವಳ ಧನುಸ್ಸು ಯಾವಾಗಲೂ ವರ್ತುಲಾಕೃತಿಯಾಗಿರುವಂತೆ ತೋರುತ್ತಿತ್ತು. ವಿಪ್ರವರ್ಯಾ, ನನ್ನ ಪ್ರಿಯಳ ಹಸ್ತಚಾಪಲ್ಯವನ್ನೂ ಸಾಮರ್ಥ್ಯವನ್ನೂ, ನೋಡಿ ನನಗೂ, ರಾಕ್ಷಸನಿಗೂ ಸರಿಯಾಗಿಯೇ ಆಶ್ಚರ್ಯವಾಯಿತು! ಸಾಕ್ಷಾತ್ ಶ್ರೀಕೃಷ್ಣಪರಮಾತ್ಮನು ನರಕಾಸುರನ ಸಂಗಡ ಯುದ್ಧ ಮಾಡುವಾಗ್ಗೆ ಆತನ ಹೆಂಡತಿಯಾದ ಸತ್ಯಭಾಮಾದೇವಿಯು ಆ ದೈತ್ಯಾಧಮನ ಸಂಗಡ ಯುದ್ಧ ಮಾಡಿದ್ದನ್ನು ನಾನು ಪುರಾಣದಲ್ಲಿ ಮಾತ್ರ ಕೇಳಿದ್ದೆನು; ಆದರೆ ನನ್ನ ಪ್ರಿಯ ಪದ್ಮನಯನೆಯು ಅದನ್ನು ಪ್ರತ್ಯಕ್ಷ ಪ್ರಯೋಗ ಮಾಡಿ ತೋರಿಸಿದಳು. ಮೇಘನಾದನು ರಾಜಪುತ್ರಿಯ ಶೌರ್ಯಕ್ಕೆ ಬೆರಗಾದದ್ದಲ್ಲದೆ ಅವಳ ಬಾಣಗಳಿಂದಾದ ಗಾಯಗಳ ನೋವಿನಿಂದ ಕಳವಳಗೊಂಡು ಮಿತಿಮೀರಿ ಸಿಟ್ಟಿಗೆದ್ದನು. ಅವನ ಕೋಪಾಟೋಪಕ್ಕೆ ನಮ್ಮ ಸುಕುಮಾರಿಯು ಈಡಾಗಲಿಲ್ಲ. ಮರ್ಮಕ್ಕೆ ಒಂದು ಬಾಣವು ತಾಕಿ ಆಕೆಯು ಇಳೆಗೆ ಒರಗಿದಳು. ಸಮೀಪದಲ್ಲಿದ್ದ ಸುಮಧ್ಯಮೆಯು ಕೂಡಲೆ ಅವಳನ್ನು ಎತ್ತಿಕೊಂಡು ಶೀತೋಪಚಾರ

ಗಳನ್ನು ಮಾಡತೊಡಗಿದಳು. ಮಿತ್ರಾ, ನನ್ನ ಪ್ರಿಯಳಿಗೊದಗಿದ ಈ ದುರವಸ್ಥೆಯನ್ನು ನೋಡಿ ನನ್ನ ಮನಸ್ಸು ಎಷ್ಟು ವ್ಯಾಕುಲಗೊಂಡಿರಬಹುದೆಂಬದರ ಕಲ್ಪನೆಯನ್ನು ನೀನೇ ಮಾಡು. ಪ್ರಚಂಡವಾಯುವಿನ ಪೆಟ್ಟಿನಿಂದ ಬಾಳೆಯ ಗಿಡವು ಇಳಿಗೊರಗುವಂತೆ, ತನ್ನ ವಿಶಾಲವಾದ ನೇತ್ರಕಮಲಗಳನ್ನು ಮುಚ್ಚಿಕೊಂಡು ನಿಶ್ಚೇಷ್ಟಳಾಗಿ ಬಿದ್ದ ನನ್ನ ಪ್ರಾಣಪ್ರಿಯಳನ್ನು ನೋಡಿ, ನನ್ನ ಸುಖದ ಆಶೆಯು ಹಾಳಾಯಿತು, ಯುದ್ಧೋತ್ಸಾಹವು ಕುಗ್ಗಿತು. ನಾನು ವಿಚಾರಗೇಡಿಯಾಗಿ ಕಣ್ಣೀರು ಸುರಿಸುತ್ತ ಪ್ರಿಯಳ ಬಳಿಯಲ್ಲಿ ಸುಮ್ಮನೆ ಕುಳಿತುಕೊಂಡೆನು.

ದ್ವಿಜವರ್ಯನಾದ ಸುಮತಿಯೇ, ಈ ಪ್ರಕಾರ ಇಂದ್ರಜಿತುವಿನ ಮಾಯಾಸೀತೆಯ ಮೃತಶರೀರವನ್ನು ನೋಡಿ, ಶ್ರೀ ರಾಮಚಂದ್ರನು ಯುದ್ಧ ವ್ಯಾಪಾರವನ್ನು ಬಿಟ್ಟಂತೆ, ನನ್ನ ಪ್ರಿಯಳಾದ ರಾಜಪುತ್ರಿಯ ನಿಶ್ಚೇಷ್ಟವಾದ ಶರೀರವನ್ನು ನೋಡಿ ನಾನು ಸುಮ್ಮನೆ ಕುಳಿತಿದ್ದರೂ, ಮೇಘನಾದನು ನನಗೆ ಕೇಡು ಬಗೆಯಲಿಲ್ಲ. ರಾಜಪುತ್ರಿಯ ಬಾಣಗಳ ಪೆಟ್ಟಿನಿಂದ ಅವನು ಕಂಗಾಲಾಗಿರಬಹುದು; ತಾನು ಪದ್ಮನಯನೆಗೆ ಸಂಪೂರ್ಣ ಸ್ವಾತಂತ್ರ್ಯ ಕೊಟ್ಟಿದ್ದಕ್ಕಾಗಿ ಅವನಿಗೆ ಪಶ್ಚಾತ್ತಾಪವಾಗಿರಬಹುದು; ತನ್ನ ಮೃತ್ಯುರೂಪವಾದ ನನ್ನನ್ನು, ವೈರಿಗಳ ಕೈಸೇರಿದ್ದರಿಂದ ಅವನ ಎದೆಯೊಡೆದು ನೀರಾಗಿರಬಹುದು. ಮುಂದೆ ಕೆಲಹೊತ್ತಿನ ಮೇಲೆ ರಾಜಪುತ್ರಿಯು ಸುಮಧ್ಯನೆಯ ಶೀತೋಪಚಾರಗಳಿಂದ ಮೂರ್ಛೆ ತಿಳಿದು ಎದ್ದಳು. ಅವಳು ದೀನಮುದ್ರೆಯಿಂದ ನನ್ನನ್ನು ಕುರಿತು—ಪ್ರಾಣಪ್ರಿಯರೇ, ಯಮಸ್ವರೂಪಿಯಾದ ರಾಕ್ಷಸನು ಇನ್ನೂ ಜೀವದಿಂದಲೇ ಇರುವನೆ? ಏನೂ ಚಿಂತೆಯಿಲ್ಲ. ಇಗೋ ನೋಡಿರಿ, ನಾನು ಎಚ್ಚತ್ತಿರುವೆನು, ನೀವು ಧೈರ್ಯ ಬಿಡಬೇಡಿರಿ. ಇದು ಮೋಹಕ್ಕೆ ಒಳಗಾಗುವ ಪ್ರಸಂಗವಲ್ಲ. ನಾನು ಧನುರ್ವಿದ್ಯೆಯನ್ನು ಕಲಿತವಳಾಗಿದ್ದರೂ, ಸ್ತ್ರೀಯಾದ್ದರಿಂದ ನನಗೆ ಯುದ್ಧಮಾಡುವ ಪ್ರಸಂಗವು ಒದಗಿದ್ದಿಲ್ಲ. ಈಗ ನಾನು ಅನುಭವಸಿದ್ಧಳಾಗಿದ್ದೇನೆ.

ಮಿತ್ರಾ, ಈ ಪ್ರಕಾರ ರಾಜಪುತ್ರಿಯು ಆಡಿದ ಮಾತುಗಳಿಂದ ನನ್ನ ಮನಸ್ಸು ಸಂತಾಪಗೊಂಡಿತು. ಹೆಂಡತಿಯ ಸಹಾಯವನ್ನು ಪಡೆಯುವ ಪ್ರಸಂಗವು ಒದಗಿದ್ದನ್ನು ನೋಡಿ ನನಗೆ ಬಹಳ ಪಶ್ಚಾತ್ತಾಪವಾಯಿತು. ಕೂಡಲೆ ನಾನು ಧನುಸ್ಸಿಗೆ ಹೆದೆಯನ್ನೇರಿಸಿ ಧ್ವನಿಮಾಡುತ್ತ ರಾಕ್ಷಸನಿಗೆ ಎದುರಾ

ದೆನು. ತನ್ನ ಪ್ರತ್ಯುರೂಪವಾದ ಧನುಸ್ಸಿನ ಝೇಂಕಾರ ಧ್ವನಿಯನ್ನು ಕೇಳಿ, ರಾಕ್ಷಸನ ಎದೆಯೊಡೆದು ನೀರಾಯಿತು; ಅವನ ಮುಖವು ಕಳೆಗುಂದಿತು; ಶೌರ್ಯವು ಅಡಗಿತು; ಸಿಂಹನಾದವು ಕೇಳದ ಹಾಗಾಯಿತು. ಅವನು ನನ್ನನ್ನು ಕುರಿತು ಕಪಟದಿಂದ—ಪ್ರತಾಪಶಾಲಿಯೇ, ನಿನ್ನ ಶೌರ್ಯಕ್ಕೆ ಮೆಚ್ಚಿದೆನು. ನಾನು ಬಹು ಜನರ ಸಂಗಡ ಯುದ್ಧ ಮಾಡಿದ್ದರೂ, ನಿನ್ನಂಥ ಅಪ್ರತಿಮವೀರನ ಸಂಘಟನೆಯು ನನಗಾಗಿದ್ದಿಲ್ಲ. ನಿನ್ನ ಸಂಗಡ ಯುದ್ಧ ಮಾಡುವ ಸಾಮರ್ಥ್ಯವು ನನಗಿಲ್ಲ. ಕರುಣಾಸಮುದ್ರನೇ, ನಾನು ನಿನಗೆ ಶರಣು ಬಂದಿದ್ದೇನೆ, ಜೀವದಾನ ಕೊಡು. ನಿನ್ನನ್ನೂ, ನಿನ್ನ ಪ್ರಿಯಳಾದ ಪದ್ಮನಯನಾದೇವಿಯನ್ನೂ ಪೀಡಿಸಿದ್ದಕ್ಕಾಗಿ ನನ್ನನ್ನು ಕ್ಷಮಿಸು. ಶರಣು ಬಂದವರನ್ನು ರಕ್ಷಿಸುವದು ಶೂರರ ಧರ್ಮವೆಂಬದನ್ನು ನಿನಗೆ ಹೇಳುವ ಕಾರಣವಿಲ್ಲ. ನಿನ್ನ ಮಿತ್ರತ್ವವನ್ನು ನಾನು ಮನಃಪೂರ್ವಕವಾಗಿ ಬಯಸುತ್ತಿರುವೆನು. ಬಹು ಸ್ಥೂಲವಾದ ಧನುಸ್ಸನ್ನು ಹೊತ್ತುಕೊಂಡು ಯಾಕೆ ಬಳಲುತ್ತೀ? ಇತ್ತ ಬಾ, ಈ ಗಿಡದ ನೆರಳಿನಲ್ಲಿ ವಿಶ್ರಮಿಸೋಣ!!

ಮಿತ್ರಾ, ಈ ಪ್ರಕಾರ ರಾಕ್ಷಸನು ಆಡಿದ ಮಾತುಗಳನ್ನು ಕೇಳಿ ನನ್ನ ಮನಸ್ಸು ಕರಗಿತು. ಇನ್ನು ಮೇಲೆ ನಾನು ಧನುಸ್ಸನ್ನು ಕೆಳಗಿಡತಕ್ಕವನು. ಅಷ್ಟರಲ್ಲಿ ರಾಜಪುತ್ರಿಯು ದೂರದಿಂದಲೇ ನನ್ನನ್ನು ಕುರಿತು—ಆರ್ಯಪುತ್ರರೇ, ನೀವು ಆ ರಾಕ್ಷಸನ ಮಾತುಗಳಿಗೆ ಮರುಳಾಗತಕ್ಕದ್ದಲ್ಲ. ಈಗ ಬಹು ದಿವಸಗಳಿಂದ ಆತನದುರ್ನಡತೆಯನ್ನೂ, ಕ್ರೂರತನವನ್ನೂ ನಾನು ನೋಡುತ್ತ ಬಂದಿರುತ್ತೇನೆ. ಹಿಂಸಕನಾದ ಆ ಖಲನಿಗೆ ದಯವು ಎಲ್ಲಿಯದು? ನೀವು ಸರಳಮನಸ್ಸಿನಿಂದ ಅವನಿಗೆ ಅನುಕೂಲವಾದರೆ, ನಿಮ್ಮ ಪ್ರಾಣವನ್ನು ನೀವೇ ನಾಶಮಾಡಿಕೊಂಡಂತಾಗುವದು. ಎರಡನೆಯ ವಿಚಾರ ಮಾಡದೆ ಬೇಗನೆ ಪ್ರಚಂಡ ಧನುಸ್ಸಿಗೆ ಬಾಣವನ್ನು ಹೂಡಿ ಬಿಟ್ಟು, ರಾಕ್ಷಸನ ಸಂಹಾರ ಮಾಡಿರಿ. ಇದರ ಮೇಲೆಯೂ ನನ್ನ ಮಾತು ಕೇಳದೆ ಧನುಸ್ಸನ್ನು ಕೆಳಗಿಟ್ಟರೆ, ಅವನು ನಿಶ್ಚಯವಾಗಿ ಅದನ್ನು ತಕ್ಕೊಳ್ಳುವನು. ಆ ಮೇಲೆ ಆ ನೀಚನು ನನಗೂ, ನಿಮಗೂ ನಮ್ಮ ನಿಮ್ಮ ಹಿರಿಯರಿಗೂ ಮಣಿಯಲಿಕ್ಕಿಲ್ಲ. ನನ್ನನ್ನು ಸಮಾಧಾನಪಡಿಸಬೇಕೆಂದು ನಿಮ್ಮ ಮನಸ್ಸಿನಲ್ಲಿದ್ದರೆ, ಬೇಗನೆ ಆ ರಾಕ್ಷಸಕ್ರೂರನನ್ನು ಸಂಹರಿಸಿರಿ.

ನನ್ನ ಪ್ರಿಯಳ ಮಾತುಗಳನ್ನು ಕೇಳಿದ ಮೇಲೆ ನನಗೆ ಎಚ್ಚರಹುಟ್ಟಿದ್ದಲ್ಲದೆ, ನನ್ನ ವಿಚಾರದಬಗ್ಗೆ ನಾಚಿಕೆಯುಂಟಾಯಿತು. ಕೂಡಲೆ ನಾನು ಧನುಸ್ಸಿಗೆ ತೀಕ್ಷ್ಣವಾದ ಬಾಣಗಳನ್ನು ಹೂಡಿ ಕಿವಿಯವರೆಗೆ ಜಗ್ಗಿ ರಾಕ್ಷಸನ ಮೇಲೆಬಿಡಲು, ಅವನು ಅವುಗಳನ್ನು ಢಾಲಿನ ಸಹಾಯದಿಂದ ತಪ್ಪಿಸಿಕೊಂಡು ಸಮೀಪದಲ್ಲಿಯೇ ಇದ್ದ ಒಂದು ಬಂಡೆಯನ್ನು ತಕ್ಕೊಂಡು ನನ್ನ ಮೇಲೆ ಒಗೆಯುವದಕ್ಕೆ ಬಂದನು. ಅಷ್ಟರಲ್ಲಿ ನಾನು ಮತ್ತೊಂದು ಬಾಣವನ್ನು ಹೂಡಿ ರಾಕ್ಷಸನ ಹಣೆಗೆ ಗುರಿನೋಡಿ ಬಿಟ್ಟೆನು. ಅದು ತಪ್ಪದೆ ಹಣೆಗೆ ಬಡೆದು ರಾಕ್ಷಸನ ಪ್ರಾಣವನ್ನು ತಕ್ಕೊಂಡಿತು. ಮೇಘನಾದನು ಸಾಯುವಾಗ್ಗೆ ಭಯಂಕರವಾದ ಧ್ವನಿಯಿಂದ ಒದರಲು, ಅದರ ಪ್ರತಿಧ್ವನಿಯು ಅರಣ್ಯದಲ್ಲೆಲ್ಲ ಹಬ್ಬಿತು. ಅವನ ಪರ್ವತಪ್ರಾಯವಾದ ಶರೀರವು ಇಳೆಗೊರಗಿದ್ದನ್ನು ಕಂಡು ರಾಜಪುತ್ರಿಯು ನನ್ನ ಕಡೆಗೆ ಬಂದು ಆನಂದದಿಂದ ನನ್ನನ್ನು ಬಿಗಿಯಾಗಿ ಅಪ್ಪಿಕೊಂಡಳು. ಆ ಮೇಲೆ ನಾವು ತೋಟದೊಳಗಿನ ಸರೋವರಕ್ಕೆ ಹೋಗಿ ಸ್ನಾನ ಮಾಡಿ ಶುಚಿರ್ಭೂತರಾಗಿ ಮಂದಿರಕ್ಕೆ ಹೋದೆವು. ರಾಕ್ಷಸನ ಸಂಗಡ ಬಹಳ ಹೊತ್ತು ಯುದ್ಧ ಮಾಡಿದ್ದರಿಂದ ನಮಗೆ ಬಹಳ ಹಸಿವೆಯಾಗಿತ್ತು. ದಾಸಿಯರು ಅಡಿಗೆಯನ್ನು ಸಿದ್ಧ ಮಾಡಿರಲು, ನಾವು ಆನಂದದಿಂದ ಭೋಜನಮಾಡಿ ವಿಹಾರಮಂದಿರಕ್ಕೆ ಹೋಗಿ ವಿಶ್ರಾಂತಿಯನ್ನು ಹೊಂದಿದೆವು. ಆ ಸ್ಥಳದಲ್ಲಿ ಮೇಘನಾದನ ಹೊರತು ಅನ್ಯರ ಪ್ರವೇಶವಾಗುವ ಸಂಭವವು ತೀರ ಕಡಿಮೆಯಿದ್ದದ್ದರಿಂದ ಅಲ್ಲಿ ನಮಗೆ ಸದ್ಯಕ್ಕೆ ಯಾತರ ಭಯವೂ ಇದ್ದಿಲ್ಲ. ದುಷ್ಟಶಾಸನದಿಂದ ನಾವು ನಿಷ್ಕಂಟಕರಾದೆವು.

## ೧೦ ನೆಯ ಪ್ರಕರಣ

## ಶೋಧೋಪಕ್ರಮ.



ವಿಪ್ರವರ್ಯಾ, ಇನ್ನುಮುಂದೆ ನಮ್ಮ ಪ್ರಿಯಪದ್ಮನಯನೆಯಿಂದ ಒದಗಿದ ಸುಖವನ್ನು ಎಷ್ಟು ವರ್ಣಿಸಿದರೂ ಸ್ವಲ್ಪವೇ ಇರುವದು. ಇಲ್ಲಿಯ

ವರೆಗೆ ನಮಗೆ ರಾಕ್ಷಸನ ಭಯವಿದ್ದದ್ದರಿಂದ ಸುಖೋಪಭೋಗವು ಯಥೇಚ್ಛ ವಾಗಿ ಆಗುತ್ತಿದ್ದಿಲ್ಲ. ರಾಕ್ಷಸನ ಕ್ರೂರತನವನ್ನೂ, ಸಾಮರ್ಥ್ಯವನ್ನೂ ನೋಡಿ ಒಮ್ಮೊಮ್ಮೆ ನನಗೂ ನನ್ನ ಪ್ರಿಯಳಿಗೂ ಸರಿಯಾಗಿಯೇ ವ್ಯಸನವಾಗು ತ್ತಿತ್ತು. ರಾಕ್ಷಸನ ಮರಣದಿಂದ ನಾವು ನಿಷ್ಕಂಟಕರಾದೆವು. ವಿಷಯೋಪ ಭೋಗದ ಹೊರತು ಬೇರೆ ಉದ್ಯೋಗವು ಇಲ್ಲದ್ದರಿಂದ, ನಾನು ಪದ್ಮನಯನೆ ಯೊಡನೆ ಕೆಲವು ವೇಳೆಯನ್ನು ಜಲಕ್ರೀಡೆಯಲ್ಲಿಯೂ, ಕೆಲವು ವೇಳೆಯನ್ನು ವೀಣೆ-ಜಲತರಂಗ ಮುಂತಾದ ವಾದ್ಯಗಳನ್ನು ಬಾರಿಸುವದರಲ್ಲಿಯೂ, ಕೆಲವು ವೇಳೆಯನ್ನು ಉದ್ಯಾನದಲ್ಲಿ ವಿಹರಿಸುವದರಲ್ಲಿಯೂ, ಕೆಲವು ವೇಳೆಯನ್ನು ಆಟಗಳಲ್ಲಿಯೂ ಕಳೆಯುತ್ತಿದ್ದೆನು. ದುರ್ಲಭಳಾದ ಸುಂದರಿಯ ಸಹವಾಸ ದಿಂದ ಕಾಲವು ಬಹುಬೇಗ ಕ್ರಮಿಸಹತ್ತಿತು. ಆನಂದದ ಭರದಲ್ಲಿ ನಾನು ಮಾತಾ-ಪಿತೃಗಳನ್ನೂ, ಆಪ್ತೇಷ್ಟರನ್ನೂ, ದೇಶ-ಕೋಶಗಳನ್ನೂ, ಇಷ್ಟ-ಮಿತ್ರರನ್ನೂ ಮರೆತೆನು. ಪದ್ಮನಯನೆಯಂತು ನನ್ನ ಮನಸ್ಸನ್ನು ಒಲಿಸಿಕೊ ಳ್ಳಲಿಕ್ಕೆ ಯಾವಾಗಲೂ ತವಕಿಸುತ್ತಿದ್ದಳು. ಇಂಥ ಸುಗುಣಿಯಾದ ಸುಂದರಿ ಯೊಡನೆ ಅಖಂಡ ಆರುತಿಂಗಳನ್ನು ಕಳೆದೆನು. ಆಗ ವಿಷಯಸುಖದ ಹೊರತು ಮತ್ತೊಂದರ ಸ್ಮರಣವು ನಮಗಿದ್ದಿಲ್ಲ.

ಹೀಗಿರಲು, ಒಂದಾನೊಂದು ದಿನ ನಾನು ರಾಜಪುತ್ರಿಯೊಡನೆ ಉದ್ಯಾ ನದಲ್ಲಿ ತಿರುಗಾಡಲಿಕ್ಕೆ ಹೋಗಿದ್ದೆನು. ಅದು ವಸಂತಕಾಲವಿತ್ತು. ಇಳಿ ಹೊತ್ತು, ಉಪವನದೊಳಗಿನ ಗಿಡಗಳು ನವಪಲ್ಲವಗಳಿಂದ ಒಪ್ಪುತ್ತಲಿವೆ, ಸುಗಂಧ-ಪುಷ್ಪಗಳ ಸುವಾಸನೆಯು ದಿಕ್ಕು-ದಿಕ್ಕಿಗೆ ಹಬ್ಬಿದೆ, ಹಕ್ಕಿಗಳು ಆನಂದ ದಿಂದ ಶಬ್ದಮಾಡುತ್ತ ಗಿಡದಿಂದ-ಗಿಡಕ್ಕೆ ಹಾರುತ್ತಲಿವೆ, ಮಾವಿನಗಿಡಗಳು ತರತರದ ಬಣ್ಣದಕಾಯಿಗಳಿಂದ ಜಗ್ಗುತ್ತಲಿವೆ, ಮಂದಮಾರುತನು ಸುಗಂಧ ವನ್ನು ಹೊತ್ತುಕೊಂಡು ಮೆಲ್ಲನೆ ಸಂಚರಿಸತೊಡಗಿದ್ದಾನೆ. ಇಂಥ ಆನಂದ ದಾಯಕವಾದ ಸಮಯದಲ್ಲಿ ಒಂದು ಮನೋಹರವಾದ ಮಾವಿನ ಗಿಡದ ಮೇಲೆ ಆನಂದದಿಂದ ಮಾತಾಡುತ್ತ ಕುಳಿತಿದ್ದ ಒಂದು ಅರಗಿಳಿಯು ನಮ್ಮ ಕಣ್ಣಿಗೆ ಬಿತ್ತು. ಅದರ ಚಿತ್ರ-ವಿಚಿತ್ರವಾದ ಐದು ಬಣ್ಣಗಳೂ, ಸವಿಮಾತು ಗಳೂ ನಮ್ಮನ್ನು, ವಿಶೇಷವಾಗಿ ರಾಜಪುತ್ರಿಯನ್ನು ಮರುಳುಮಾಡಿದವು. ಆಗ ಅವಳು ನನ್ನನ್ನು ಕುರಿತು-ಮನಮೋಹನರೇ, ಈ ಗಿಳಿಯ ಚಂದವನ್ನು

ನೋಡಿದಿರಾ! ಅದರ ಮುದ್ದುಮಾತುಗಳನ್ನೂ, ಮೈ ಮಾಟವನ್ನೂ ನೋಡಿ ಯಾರು ಮೋಹಿಸಲಿಕ್ಕಿಲ್ಲ? ನಾನಂತು ಈ ಗಿಳಿಯನ್ನು ಬಿಟ್ಟು ಮುಂದಕ್ಕೆ ಹೆಜ್ಜೆಯನ್ನು ಇಡಲಾರೆನು. ಇದು ಮನೋರಂಜನದ ದೊಡ್ಡ ಸಾಧನವಾಗಿರುವದು. ಹೇಗಾದರೂ ಮಾಡಿ ಇದನ್ನು ನನಗೆ ಸಂಪಾದಿಸಿಕೊಡಬೇಕು, ಎಂದು ಹೇಳಿದನು. ರಾಜಪುತ್ರಿಯು ಈ ಮಾತುಗಳು ನನಗೆ ಅಸಮಂಜಸವಾಗಿತೋರಲಿಲ್ಲ. ನನ್ನ ಮನಸ್ಸಾದರೂ ಆ ಗಿಳಿಯ ಮೇಲೆ ಕುಳಿತಿತ್ತು. ಆದರಿಂದ ನಾನು ಮರವನ್ನೇರುವದಕ್ಕೆ ಟೊಂಕಕಟ್ಟಿದೆನು ಬರಿಗೈಗೆ ಗಿಳಿಯು ಸಿಗಲಾರದೆಂಬ ವಿಚಾರವು ನನ್ನಲ್ಲಿ ಉತ್ಪನ್ನವಾಗಲಿಲ್ಲ. ಗಿಳಿಯು ಗಿಡದಿಂದ ಗಿಡಕ್ಕೆ ಹಾರಿದಂತೆ ನಾನೂ ಗಿಡ–ಗಿಡ ಹತ್ತಿ ಅದನ್ನು ಹಿಡಿಯಲು ಯತ್ನಿಸಿದೆನು, ನನ್ನ ಯತ್ನವು ಸಫಲವಾಗುವ ಸಂಭವವು ಎಷ್ಟು ಮಾತ್ರವೂ ತೋರಲಿಲ್ಲ. ಆದರೆ ಗಿಳಿಯೇ ಕನಿಕರವಟ್ಟು ನನ್ನ ಕೈಗೆ ಸಿಕ್ಕಿತೆಂದು ಹೇಳಬಹುದು. ಆ ಸುಂದರವಾದ ಪಕ್ಷಿಯು ಹಾರಿ–ಹಾರಿ ದಣಿದಂತೆ ನಟಿಸಿ, ಗಿಡದ ದಟ್ಟವಾದ ಟೊಂಗೆಯಲ್ಲಿ ಅಡಗಿರಲು, ನಾನು ಅದನ್ನು ಹಿಡಿದೆನು. ಈ ದುಷ್ಟ ಗಿಳಿಯೇ ನನ್ನ, ಹಾಗೂ ನನ್ನ ಪ್ರಿಯಳ ವಿಯೋಗಕ್ಕೆಕಾರಣವಾಗುತ್ತದೆಂದು ಆಗ್ಗೆ ನನಗೆ ತಿಳಿಯಲಿಲ್ಲ. ನಾವು ಸಂತೋಷದಿಂದ ಅದನ್ನು ಮನೆಗೆ ಒಯ್ದು ಆಸ್ಥೆಯಿಂದ ಜೋಕೆಮಾಡಹತ್ತಿದೆವು.

ಆ ಅರಗಿಳಿಯು ಬರಬರುತ್ತ ನಮ್ಮ ಚಿತ್ತವನ್ನು ಪೂರ್ಣವಾಗಿ ಹರಣ ಮಾಡಿತು. ರಾಜಪುತ್ರಿಯಂತು ಅದನ್ನು ಅರಗಳಿಗೆ ಅಗಲುತ್ತಿದ್ದಿಲ್ಲ. ಅದಕ್ಕೆ ಹಣ್ಣುಹಂಪಲಗಳನ್ನೂ, ಕಾಳುಕಡಿಗಳನ್ನೂ ತಿನಿಸಿದಹೊರತು ಆಕೆಯುಊಟ ಮಾಡುತ್ತಿದ್ದಿಲ್ಲ. ಒಂದು ವೇಳೆ ತನ್ನ ಸುಖದಲ್ಲಿ ಕೊರತೆಯಾದರೂ ಆಕೆಯು ಅದನ್ನು ಲೆಕ್ಕಿಸದೆ ಆ ಗಿಳಿಯನ್ನು ತನ್ನ ಪ್ರಾಣಕ್ಕಿಂತಲೂ ಹೆಚ್ಚೆಂದು, ತಿಳಿದು ಜೋಕೆ ಮಾಡುತ್ತಿದ್ದಳು. ನಮ್ಮಿಬ್ಬರ ಮಿತಿಮೀರಿದ ಪ್ರೇಮವು ಅದರ ಮೇಲೆ ಕೂಡ್ರಲಿಕ್ಕೆ ಆ ಗಿಳಿಯಲ್ಲಿದ್ದ ಜ್ಞಾನಕಲೆಯೇ ಕಾರಣವು. ಅದು ಬೇರೆ ಗಿಳಿಗಳಂತೆ ಕಲಿಸಿದ ಮಾತುಗಳನ್ನು ಮಾತ್ರ ಆಡದೆ, ಮನೋವಿಕಾರಗಳಿಗನುಸರಿಸಿ ಮನುಷ್ಯರಂತೆ ಬೇರೆ ಬೇರೆ ಸ್ವರಗಳಿಂದ ಸ್ವತಂತ್ರವಾಗಿ ಮಾತಾಡುತ್ತಿತ್ತು. ಅದರ ವಿನೋದಪರಭಾಷಣಗಳನ್ನು ಕೇಳುವದಕ್ಕಾಗಿ ನಾನೂ ರಾಜಪುತ್ರಿಯೂ ಸರಿಯಾಗಿಯೇ ತವಕಿಸುತ್ತಿದ್ದೆವು. ಹೀಗಿರುವಲ್ಲಿ

ಒಂದು ದಿನ ಆ ಗಿಳಿಯು ನಮ್ಮಿಬ್ಬರನ್ನುದ್ದೇಶಿಸಿ ಅಂದಿತೇನಂದರೆ--ಮನೋಹರಸ್ವರೂಪಿಗಳಾದ ತರುಣದಂಪತಿಗಳೇ, ನಿಮ್ಮ ಸುಂದರರೂಪವನ್ನೂ, ಪರಸ್ಪರರಲ್ಲಿರುವ ಅಕೃತ್ರಿಮ ಪ್ರೇಮವನ್ನೂ ನೋಡಿ ನಾನು ಪರಮಹರ್ಷಿತಳಾಗಿದ್ದೇನೆ; ಆದರೆ ಮಾತಾ—ಪಿತೃಗಳ ವಿಯೋಗದುಃಖವು ನಿಮ್ಮಲ್ಲಿ ಕಿಂಚಿತ್ತಾದರೂ ಇಲ್ಲದ್ದನ್ನು ನೋಡಿ ನನಗೆ ಬಹಳ ಆಶ್ಚರ್ಯವಾಗುತ್ತದೆ. ನೀವು ನಿಮ್ಮ ಸುಖದಲ್ಲಿಯೇ ಮಗ್ನರಾಗಿರುವಿರಲ್ಲದೆ, ತಾಯಿ—ತಂದೆಗಳ ಸ್ಥಿತಿಯು ಏನಾಗಿರಬಹುದೆಂಬದನ್ನು ಸ್ವಲ್ಪವಾದರೂ ಆಲೋಚಿಸುವಂತೆ ತೋರುವದಿಲ್ಲ. ಬಹಳ ಶ್ರಮವನ್ನೂ, ದುಃಖವನ್ನೂ ಅನುಭವಿಸಿ, ಇಷ್ಟಿದ್ದಃರನ್ನು ಇಷ್ಟು ಮಾಡಿ, ಜ್ಞಾನಾಮೃತವನ್ನು ಕುಡಿಸಿ ಧನ್ಯರಾಗಮಾಡಿದ ಮಾತಾ-ಪಿತೃಗಳ ನಿರಾಕರಣವು ಇಷ್ಟರಮಟ್ಟಿಗೆ ಆಗಬೇಕೆ? ತಾವು ಜ್ಞಾನಿಗಳೆಂಬ ಹೆಮ್ಮೆಯಿಂದ ಸೆಟೆಸೆಟೆದು ಬೀಳುವ ಮನುಷ್ಯರ ಜ್ಞಾನದ ಪರಿಣಾಮವು ಈ ಸ್ಥಿತಿಗೆ ಬರುವದೆಂದರೆ, ಬಹಳ ಲಾಂಛನದ ಮಾತು. "ತಾಯಿಗಿಂತ ಹಿತವಂತರಿಲ್ಲ, ಉಪ್ಪಿಗಿಂತ ರುಚಿಯಿಲ್ಲ" ಎಂಬ ಗಾದೆಯು ವಿಷಯಾಸಕ್ತರಾದ ದಂಪತಿಗಳಿಗೆ ಹತ್ತುವದಿಲ್ಲೆಂಬಂತೆ ತೋರುತ್ತದೆ. ಇದು ನಿಜವಾದ ಪ್ರೇಮದ ಲಕ್ಷಣವಲ್ಲ. ಈಗಿನ ಸುಖವೇ ಕಡೆತನಕ ಇರುತ್ತದೆಂದು ತಿಳಿಯಬೇಡಿರಿ. ಸುಖದುಃಖಗಳು ಕ್ಷಣಿಕವಾದವುಗಳೆಂಬದನ್ನು ಚನ್ನಾಗಿ ನೆನಪಿನಲ್ಲಿಡಿರಿ. ನಿಮ್ಮ ಬಂಧುಮಿತ್ರರೂ,ರಾಜಕೋಶಗಳೂ ಒತ್ತಟ್ಟಿಗಿರಲು, ನೀವು ಪ್ರಾಯದಮದದಿಂದ ಮೈಮರೆತು ಈ ರಾಕ್ಷಸ-ಮಾಯಾ-ನಿರ್ಮಿತವಾದ ಸ್ಥಳದಲ್ಲಿ ಸುಖಾಸಕ್ತರಾಗಿ ಕಾಲಕ್ರಮಣ ಮಾಡುವದು ಹಿತವಲ್ಲ. ಮೇಘನಾದನೊಬ್ಬನು ಮರಣಹೊಂದಿದರೇನಾಯಿತು? ಅವನ ಆಪ್ತೇಷ್ಟರಾದ ಅಸಂಖ್ಯ ರಾಕ್ಷಸರಿಂದ ಶೋಣಿತಪುರವು ತುಂಬಿರುತ್ತದೆ. ಯಾವಕಾಲಕ್ಕೆ ಎಂಥ ಪ್ರಸಂಗವು ಒದಗೀತೆಂಬದರ ನಿಯಮವಿಲ್ಲ. ನೀವು ಇನ್ನು ಎಚ್ಚತ್ತು ನನ್ನ ಮಾತನ್ನು ಚನ್ನಾಗಿ ವಿಚಾರಿಸಿ ಬೇಗನೆ ಇಲ್ಲಿಂದ ಹೊರಡುವ ಯೋಚನೆ ಮಾಡಿರಿ. ಅದರಲ್ಲಿಯೇ ನಿಮ್ಮ ಕಲ್ಯಾಣವಿರುವದು.

ಮಿತ್ರನೇ, ಗಿಳಿಯ ಉಪದೇಶವು ಮುಂದೆ ನಮಗೆ ದುಃಖಕ್ಕೆ ಕಾರಣವಾದರೂ, ಅದು ಅಯೋಗ್ಯವಾದದ್ದೆಂದು ನಾನು ಹೇಳಲಾರೆನು. ಅದರ ಮಾತುಗಳನ್ನು ಕೇಳಿ ನಮ್ಮಿಬ್ಬರಿಗೂ ತಾಯಿ-ತಂದೆಗಳ ಸ್ಮರಣವಾಗಿ ಬಹಳ

ದುಃಖವಾಯಿತು; ಕಣ್ಣೀರುಗಳು ಸುರಿದವು; ರಮಣೀಯವಾಗಿ ತೋರುತ್ತಿದ್ದ ಗೃಹವಾಸವು ಬೇಸರಕ್ಕೆ ಕಾರಣವಾಯಿತು. ತಾಯಿ-ತಂದೆಗಳ ಬಳಿಗೆ ಹೋಗುವದನ್ನು ನಾವು ಅಂದೇ ನಿಶ್ಚಯಿಸಿದೆವು. ಊಟ—ಉಪಚಾರಗಳು ತೀರಿದ ಬಳಿಕ ಪ್ರವಾಸದ ಸಾಧನಗಳನ್ನು ಸಿದ್ಧಗೊಳಿಸಿದೆವು! ಪ್ರಾಯದ ಏರಿಕೆಯ ರಕ್ತದಲ್ಲಿ, ಚಟ್ಟನೆ ಕಾರ್ಯಪ್ರವೃತ್ತವಾಗುವದು ವಾಡಿಕೆಯಾಗಿರುವದು. ಅದರಂತೆ ನಾವು ಅಂದೇ ರಾತ್ರಿ ಚಂದ್ರೋದಯವಾದ ಬಳಿಕ ಹೊರಡುವದನ್ನು ನಿಶ್ಚಯಿಸಿದೆವು. ಅರಣ್ಯದ ಏಕಾಂತವಾಸದಲ್ಲಿ ಇದ್ದು ದಡ್ಡುಬಿದ್ದವ್ರರಿಂದ ನಮ್ಮ ಪದ್ಮನಯನೆಯೇ ಮೊದಲಾದ ಪ್ರಮದೆಯರ ಅಂಜಿಕೆಯು ಮುರಿದು ಹೋಗಿತ್ತು. ಪ್ರಯಾಣೋತ್ಸುಕರಾದ ನಮಗೆ ನಿದ್ದೆಯು ಬರಲಿಲ್ಲ. ಚಂದ್ರೋದಯವಾಯಿತು; ನಿಶಾಪತಿಯು ಮೆಲ್ಲಮೆಲ್ಲನೆ ಮೇಲಕ್ಕೇರತೊಡಗಿದನು. ನಾನು ಸುಮಧ್ಯಮೆಯನ್ನು ಎಬ್ಬಿಸಿ, ಉಳಿದ ದಾಸಿಯರನ್ನು ಎಬ್ಬಿಸಲು ಸೂಚಿಸಿದೆನು; ಆದರೆ ದಾಸಿಯರೊಬ್ಬರೂ ಕಣ್ಣಿಗೆ ಬೀಳಲಿಲ್ಲ. ನಮ್ಮ ಕುದುರೆಗಳೂ ಕಟ್ಟಿದಲ್ಲಿ ಇದ್ದಿಲ್ಲ. ಇದನ್ನು ನೋಡಿ ನಮಗೆ ಆಶ್ಚರ್ಯವಾದದ್ದಲ್ಲದೆ, ಭಯವೂ ಉತ್ಪನ್ನವಾಯಿತು. ಇದು ರಾಕ್ಷಸಚೇಷ್ಟೆಯಲ್ಲದೆ ಮತ್ತೊಂದಲ್ಲೆಂದು ನಾವು ನಿಶ್ಚಯಿಸಿದೆವು. ಸುಮಧ್ಯಮೆಯು ಕೇವಲ ನಮ್ಮ ಹಿತಕರ್ತಳಾದ್ದರಿಂದ ನಮ್ಮನ್ನಗಲಿ ಇರುತ್ತಿದ್ದಿಲ್ಲ. ಅವಳು ನಮ್ಮ ಶಯನಗೃಹದೊಳಗಿನದೊಂದು ಕೋಣೆಯಲ್ಲಿ ಮಲಗುತ್ತಿದ್ದಳು. ಉಳಿದ ದಾಸಿಯರು ಬೇರೆ ಕಡೆಗೆ ಮಲಗುತ್ತಿದ್ದರು. ಈ ಆಕಸ್ಮಿಕ ಪ್ರಸಂಗದಿಂದ ನಮ್ಮ ಪ್ರಯಾಣವು ತಡೆದು ನಿಂತಿತು. ನಾವು ಮುಂದುಗಾಣದಾದೆವು., ಬಗೆಬಗೆಯ ಕಲ್ಪನೆಗಳು ಹುಟ್ಟುತ್ತಿದ್ದವು—ಅಡಗುತ್ತಿದ್ದವು. ಮುಂದೇನು ಮಾಡಬೇಕೆಂಬ ವಿಚಾರದಲ್ಲಿ ಬೆಳಗಾಯಿತು. ಮೇಘನಾದನ ನಾಶಕ್ಕೆ ಕಾರಣವಾದ ಪ್ರಚಂಡ ಧನುಸ್ಸನ್ನು ನಾನು ಬಹಳ ಜಾಗ್ರತೆಯಿಂದ ಕಾಯುತ್ತಿದ್ದೆನು. ಈಗಂತು ಅದರ ಮಹತ್ವವು ವಿಶೇಷವಾಗಿ ತೋರಹತ್ತಿತು. ನಾವು ಹೀಗೆ ಚಿಂತಾಕ್ರಾಂತರಾಗಿ ಕುಳಿತಿರುವದನ್ನು ನೋಡಿ ಪಂಜರದೊಳಗಿದ್ದ ಗಿಳಿಯು—ಯಾಕೆ, ರಾಜಪುತ್ರಾ, ಚಿಂತಾಮಗ್ನನಾಗಿ ಕುಳಿತುಕೊಂಡೆ? ನನ್ನ ಮಾತಿನ ಅನುಭವವಾಯಿತೇ? ಮೇಘನಾದನನ್ನು ಕೊಂದಮಾತ್ರದಿಂದ ನೀನು ನಿಷ್ಕಂಟಕನಾಗಲಿಲ್ಲ. ಇನ್ನಾದರೂ ನನ್ನ ಮಾತನ್ನು ಮೀರಬೇಡ. ಸುಮಧ್ಯಮಾ—ಪದ್ಮನಯನೆಯರೊಡನೆ

ನೀನು ಬಂದ ಮಾರ್ಗದಿಂದ ಈಗಲೇ ಪ್ರಯಾಣ ಮಾಡು, ಎಂದು ಹೇಳಿತು.

ದ್ವಿಜೋತ್ತಮಾ, ಗಿಳಿಯ ಈ ಮಾತುಗಳು ನನಗೆ ಸಮಂಜಸವಾಗಿ ತೋರಿದವು. ನಾನುಸುಮಧ್ಯಮಾ–ಪದ್ಮನಯನೆಯರೂಡನೆಹೊರಟೆನು. ಸುಮಧ್ಯಮೆಯು ಗಿಳಿಯ ಪಂಜರವನ್ನು ಹಿಡಕೊಂಡಿದ್ದಳು ಗುಹೆಯನ್ನು ಪ್ರವೇಶಿಸಿ, ಸುರಕ್ಷಿತವಾಗಿ ನಾವು ಹೊರಬಿದ್ದೆವು. ರಾಕ್ಷಸನ ಮಾಯಾಪ್ರದೇಶದಿಂದ ಹೊರಬಿದ್ದು ಬಂದಪ್ಪಕ್ಕಾಗಿ ನಮಗೆ ಒಂದು ಬಗೆಯಿಂದ ಸಮಾಧಾನವಾಯಿತು. ತಾಯಿ–ತಂದೆಗಳನ್ನು ನೋಡುವ ಕುತೂಹಲವು ನಮ್ಮಲ್ಲಿ ಬಹಳ ಇದ್ದದ್ದರಿಂದ ಆದಷ್ಟು ದೊಡ್ಡ ಪ್ರಯಾಣಗಳನ್ನು ಮಾಡುತ್ತ, ಉತ್ತರಾಭಿಮುಖವಾಗಿಮಾರ್ಗಕ್ರಮಣಮಾಡಲು, ನಮಗೆ ಒಂದು ಬಯಲು ಪ್ರದೇಶವು ಹತ್ತಿತು. ಅಲ್ಲಿ ಉನ್ನತವಾದ ಗಿಡಗಳು ವಿರಲವಾಗಿದ್ದವು. ಮಧ್ಯಾಹ್ನದ ಸಮಯವಾಗಲು, ಬಿಸಿಲ ತಾಪವು ಹೆಚ್ಚಿತು. ತಣ್ಣೆಳಲಲ್ಲಿ ಕೆಲಹೊತ್ತು ವಿಶ್ರಾಂತಿಯನ್ನು ಹೊಂದಿ, ಬಿಸಿಲು ಇಳಿದ ಬಳಿಕ ಹೊರಡಬೇಕೆಂದು ಯೋಚಿಸಿ, ನನ್ನ ವಿಚಾರವನ್ನು ರಾಜಪುತ್ರಿಗೆ ತಿಳಿಸಿದೆನು. ಆ ಸುಕುಮಾರಿಗೂ ಅಷ್ಟೇ ಬೇಕಾಗಿತ್ತು. ಆಕೆಯು ಮಾರ್ಗಾಯಾಸದಿಂದ ಬಹಳವಾಗಿ ಬಳಲಿದ್ದಳು. ಆ ರಮಣೀಯವಾದ ಸ್ಥಳದಲ್ಲಿ ನಾವು ಕುಳಿತುಕೊಂಡಿರಲು, ಸುಮಧ್ಯಮಾ–ಪದ್ಮನಯನೆಯರು ಅಲ್ಲಿಯೇ ಒತ್ತಟ್ಟಿಗೆ ಅಡ್ಡಾಗಿ ಸುಖದಿಂದ ನಿದ್ದೆ ಮಾಡತೊಡಗಿದರು.

ರಾಜಪುತ್ರಿಯಾದ ಪದ್ಮನಯನೆಯು ನೆಲದ ಮೇಲೆಯೇ ಮಲಗಿಕೊಂಡು ಸುಖದಿಂದ ನಿದ್ದೆ ಮಾಡಹತ್ತಿದ್ದನ್ನು ನೋಡಿ, ನನಗೆ ಬಹಳ ವ್ಯಸನವಾಯಿತು. ಹಂಸತೂಲದ ಮೃದುವಾದ ತಲ್ಪದ ಮೇಲೆ ಯಾವಾಗಲೂ ಮಲಗುತ್ತಿದ್ದ ಆ ಸುಂದರಿಗೆ ತಗ್ಗುದಿನ್ನೆಗಳುಳ್ಳ ನೆಲವು ಸುಖಕರವಾಗುವದಕ್ಕೆ ಅವಳಿಗಾದ ಮಾರ್ಗಶ್ರಮವೇ ಕಾರಣವು. ಬಿಸಿಲಿನಿಂದ ಅವಳಮೈಬಣ್ಣವುಕಪ್ಪಾಗಿತ್ತು; ನಾಲ್ಕೂಕಡೆಗೆ ಅಸ್ತವ್ಯಸ್ತವಾಗಿ ಹಾರಾಡುತ್ತಿದ್ದ ಅವಳ ಸುಂದರ ನೀಲಾಲಕಗಳ ಮೇಲೆ, ಮಾರ್ಗದೊಳಗಿನ ಧೂಳಿಯು ಕುಳಿತಿತ್ತು. ಅವಳು ಹಣೆಯ ಮೇಲಿನ ಬೆವರನ್ನು ಮೇಲೆಮೇಲೆಒರಿಸಿಕೊಂಡದ್ದರಿಂದ, ಕಸ್ತೂರಿಯತಿಲಕವು ಸಂಪೂರ್ಣವಾಗಿನಾಶಹೊಂದಿರಲು,ಲಲಾಟವು ಸ್ವಚ್ಛವಾದ ಮಣಿಮುಕುರದಂತೆ ಕಂಗೊಳಿಸುತ್ತಿತ್ತು.ಧೂಳಿಯಿಂದ ಅವಳ ವಸ್ತ್ರಗಳು ಮಲಿನವಾಗಿದ್ದವು; ಹಸಿವೆ ಬಾಯಾ

ರಿಕೆಗಳಿಂದಲಿ ಸುಕುಮಾರಿಯ ಮುಖಕಮಲವು ಬಾಡಿತ್ತು. ಮಿತ್ರಾ, ಯಾವ ಸುಂದರಿಯು, ಲಜ್ಜಾ–ಮಾನಗಳ ಮೂಲಕವಾಗಿ ತನ್ನ ಶರೀರವನ್ನು ನಿದ್ರೆಯಲ್ಲಾದರೂ ಉತ್ತರೀಯದಿಂದ ಸಂಪೂರ್ಣವಾಗಿ ಆಚ್ಛಾದಿಸುತ್ತಿದ್ದಳೋ, ಅವೇ ಸುಂದರಿಯು ಮಾರ್ಗಾಯಾಸದಿಂದ ಕಂಗೆಟ್ಟು, ನಿದ್ರೆಯಿಂದ ಪರವಶಳಾಗಿ ಮಲಗಿರಲು, ಉತ್ತರೀಯವು ಅಸ್ತವ್ಯಸ್ತವಾದದ್ದರಿಂದ ಅವಳ ಸುಂದರವಾದ ಅವಯವಗಳು ಪ್ರೇಕ್ಷಕರ ಮನಸ್ಸನ್ನು ಮೋಹಗೊಳಿಸುವಂತೆ ಕಂಗೊಳಿಸುತ್ತಿದ್ದವು. ನನ್ನ ಪ್ರಿಯಳು ಎಚ್ಚತ್ತ ಬಳಿಕ ತಾನು ಅಮರ್ಯಾದೆಯಿಂದ ಮಲಗಿಕೊಂಡದ್ದಕ್ಕಾಗಿ, ಮನದಲ್ಲಿ ನೊಂದುಕೊಂಡಾಳೆಂಬ ಭಯದಿಂದ, ನನ್ನ ಮೈಮೇಲಿನ ಸೆಲ್ಲೆಯನ್ನು ಅವಳಿಗೆ ಹೊಚ್ಚಿ ನಾನು ಕುಳಿತ ಸ್ಥಳದಿಂದ ಎದ್ದು ಹೋದೆನು. ಭಯಂಕರವಾದ ಅರಣ್ಯದಲ್ಲಾದರೂ ತಗ್ಗು ದಿನ್ನೆಯಾದ ನೆಲದ ಮೇಲೆ ಸುಖದಿಂದ ನಿದ್ರೆಮಾಡುತ್ತಿದ್ದ ನನ್ನ ಪ್ರಿಯಳಿಗೊದಗಿದ ಶ್ರಮದ ಕಲ್ಪನೆಯಾಗಿ, ನನ್ನ ಕಣ್ಣೊಳಗಿಂದ ನೀರುಗಳು ತಾವೇ ಉದರಹತ್ತಿದವು. ತನಗೆ ನೀಗಲಾರದಷ್ಟು ಶ್ರಮವಾಗಿದ್ದರೂ, ಅದನ್ನು ನನ್ನ ಮುಂದೆ ಆಡದೆ ಯಾವಾಗಲೂ ಮೃದುಸ್ಮಿತೆಯಾಗಿ ಆನಂದವನ್ನು ಪ್ರಕಟಿಸುವ ನನ್ನ ಪ್ರಿಯಳ ನಿಜವಾದ ಪ್ರೇಮಕ್ಕೂ, ಸೌಜನ್ಯಕ್ಕೂ ನನ್ನ ಮನಸ್ಸು ಮತ್ತಿಷ್ಟು ವ್ಯಾಕುಲಗೊಂಡಿತು.

ಈ ಪ್ರಕಾರ ನನ್ನ ಸ್ಥಿತಿಯು ವಿಚಿತ್ರವಾಗಿರಲು, ನಿಃಶಬ್ದವಾದ ಅರಣ್ಯದಲ್ಲಿ ನನ್ನ ಮನಸ್ಸು ಅಸಮಾಧಾನ ಹೊಂದಿತು. ಆಗ ನಾನು ಸುವರ್ಣಪಂಜರದೊಳಗಿದ್ದ ಗಿಳಿಯನ್ನು ಮುಂದಿಟ್ಟುಕೊಂಡು ಅದರ ಕೂಡ ಮಾತಾಡಹತ್ತಿದೆನು. ಇಲ್ಲಿಯ ವರೆಗೂ ನಾವು ಅದನ್ನು ಪಂಜರದಿಂದ ಹೊರಗೆ ಬಿಟ್ಟಿದ್ದಿಲ್ಲ. ಈಗಾದರೂ ಅದನ್ನು ಹೊರಗೆ ಬಿಡುವ ಮನಸ್ಸು ನನಗಿದ್ದಿಲ್ಲ. ಆದರೆ ಗಿಳಿಯು ಕಕ್ಕುಲತೆಯಿಂದ ನನ್ನನ್ನು ಕುರಿತು— "ರಾಜಪುತ್ರಾ, ನಾನು ನಿಮ್ಮ ಬಳಿಯಲ್ಲಿರುವದಕ್ಕೆ ಆನಂದದಿಂದ ಸಮ್ಮತಿಸುತ್ತಿರಲು, ಸೆರೆಯವನಂತೆ ನನ್ನನ್ನು ಯಾಕೆ ಪಂಜರದೊಳಗೆ ಹಾಕಿದ್ದೀರಿ? ನಾನು ಎರಡನೆಯ ಗಿಳಿಗಳಂತೆ ಅಜ್ಞಾನಿಯಲ್ಲ; ಸುಜನರು ಯಾರು, ದುರ್ಜನರು ಯಾರು, ಯಾವ ಸ್ಥಳದಲ್ಲಿರುವದರಿಂದ ನನಗೆ ಅಪಾಯವು ಸಂಭವಿಸಲಿಕ್ಕಿಲ್ಲ, ಯಾವ ಸ್ಥಳದಲ್ಲಿರುವದರಿಂದ ನನ್ನ ಜೀವಕ್ಕೆ ಅಪಾಯವಾಗಬಹುದು, ಇವೇ ಮೊದಲಾದ ಸಂಗತಿಗಳನ್ನು ತಿಳಿಯುತ್ತೇನೆ. ನಾನು ದೇವರನ್ನು ಸ್ಮರಿಸಿ ಹೇಳುವದೇನಂದರೆ, ನೀನು

ನನ್ನನ್ನು ಸ್ವಲ್ಪ ವೇಳೆ ಆಡುವದಕ್ಕಾಗಿ ಪಂಜರದಿಂದ ಹೊರಗೆ ಬಿಟ್ಟರೆ, ನಿನಗೆ ವಿಶ್ವಾಸಘಾತ ಮಾಡದೆ ನಿನ್ನ ಆಜ್ಞಾನುಸಾರವಾಗಿಯೇ ನಾನು ವರ್ತಿಸುವೆನು. ನನ್ನ ಮಾತನ್ನು ಮಾತ್ರ ನಿರಾಕರಿಸಬೇಡ, ಎಂದು ಅಂಗಲಾಚಿ ಹೇಳಿಕೊಳ್ಳಲು, ನನಗೆ ದಯಹುಟ್ಟಿ ಪಂಜರದ ಬಾಗಿಲನ್ನು ತೆರೆಯಹೋದೆನು. ಆದರೆ ಅದಕ್ಕೆ ಬೀಗವನ್ನು ಹಾಕಿದ್ದರಿಂದ ನಾನು ನಿರುಪಾಯನಾಗಿರಲು, ಗಿಳಿಯು—"ರಾಜಪುತ್ರಾ, ಸ್ವಲ್ಪಕ್ಕಾಗಿ ನನ್ನ ಮಾತನ್ನು ಮುರಿಯಬೇಡ. ಅಗೋ ನೋಡು; ರಾಜಪುತ್ರಿಯ ಕೊರಳಲ್ಲಿ ಸುವರ್ಣದ ಸರಪಳಿಯಲ್ಲಿ ಈ ಪಂಜರಕ್ಕೆ ಹಾಕಿದ ಬೀಗದ ಕೈಯು ಕಾಣುತ್ತದೆ. ರಾಜಪುತ್ರಿಗೆ ಗಾಢ ನಿದ್ರೆಯು ಹತ್ತಿರುವದರಿಂದ ಅವಳಿಗೇನು ಎಚ್ಚರವಾಗುವ ಹಾಗಿಲ್ಲ. ಈ ಮನೋಹರವಾದ ವನದ ಸೊಬಗನ್ನೂ, ಮಧುರವಾದ ಫಲಗಳನ್ನೂ ನೋಡಿ ನನ್ನ ಮನಸ್ಸು ಹೊರಗೆ ಬರುವದಕ್ಕಾಗಿ ಬಹಳ ಆತುರಪಡುತ್ತಿರುವದರಿಂದ ನಾನು ಇಷ್ಟು ಹೇಳಿಕೊಳ್ಳುತ್ತೇನೆ. ಇದರ ಮೇಲೆ ನಿನ್ನ ಮನಸ್ಸು. ನಾನು ನಿಮಗೆ ಅಧೀನವಾಗಿರಲು, ಹೆಚ್ಚಿಗೆ ಆಗ್ರಹ ಮಾಡುವದಕ್ಕೆ ಹೇಗೆ ಬರುತ್ತದೆ? ವಿಚಾರಶೀಲನಾದ ನಿನಗೆ ನಾನು ಹೆಚ್ಚಿಗೆ ಹೇಳುವದಿಲ್ಲ."

ದ್ವಿಜವರ್ಯಾ, ಗಿಳಿಯ ಕಪಟದ ಮಾತುಗಳನ್ನು ನಂಬುವದಕ್ಕೆ ಬಲವತ್ತರ ಕಾರಣಗಳಿರದಿದ್ದರೂ "ವಿನಾಶ ಕಾಲೇ ವಿಪರೀತ ಬುದ್ಧಿಃ" ಎಂಬ ಉಕ್ತಿಯಂತೆ ನಾನು ರಾಜಪುತ್ರಿಯ ಕೊರಳೊಳಗಿದ್ದ ಕೀಲಿಯ ಕೈಯನ್ನು ಅವಳಿಗೆ ಎಚ್ಚರಾಗದಂತೆ ಬಹಳ ಮೆಲ್ಲಗೆ ತೆಗೆದುಕೊಂಡು, ಪಂಜರದ ಬೀಗವನ್ನು ತೆಗೆದು ಗಿಳಿಯನ್ನು ನನ್ನ ಮುಂಗೈ ಮೇಲೆ ಕುಳ್ಳಿರಿಸಿಕೊಂಡೆನು. ಆಗ ಅದು ತನ್ನ ಸವಿಮಾತುಗಳಿಂದ ನನ್ನನ್ನು ಬಹಳ ಆನಂದಗೊಳಿಸಿತು. ಆನಂದದ ಭರದಲ್ಲಿ ನಾನು ಪರವಶನಾಗಿ ಕುಳಿತಿರಲು, ಅದು ಒಮ್ಮೆಲೆ ನನ್ನ ಕೈಯಿಂದ ಮೇಲಕ್ಕೆ ಹಾರಿ, ಕೆಲವು ಅಂತರದಲ್ಲಿ ಭೂಮಿಯ ಮೇಲೆ ಕುಳಿತುಕೊಂಡಿತು. ಕೈಯಲ್ಲಿದ್ದ ಗಿಳಿಯು ಒಮ್ಮಿಂದೊಮ್ಮೆ ಇಲ್ಲದಂತೆ ಆದದ್ದನ್ನು ನೋಡಿ, ನನಗೆ ಬಹಳ ಅಸಮಾಧಾನವಾದದ್ದಲ್ಲದೆ, ಮೂರ್ಖತನದಿಂದ ಪಂಜರದೊಳಗಿದ್ದ ಗಿಳಿಯನ್ನು ಹೊರಗೆ ಬಿಟ್ಟದ್ದಕ್ಕಾಗಿ ನನಗೆ ಪಶ್ಚಾತ್ತಾಪವೂ ಆಯಿತು. ರಾಜಪುತ್ರಿಗೆ ಪ್ರಾಣಕ್ಕಿಂತಲೂ ಅಧಿಕಪ್ರಿಯವಾಗಿದ್ದ ವಸ್ತುವನ್ನು ನಾನು ಕಳೆದದ್ದರಿಂದ ಅವಳು ನನಗೆ ಏನು ಅನ್ನುವಳೋ, ಎಷ್ಟು ಶೋಕ ಮಾಡುವಳೋ, ಎಂದು

ನಾನು ತಳಮಳಗೊಂಡೆನು. ಗಿಳಿಯು ಸಮೀಪದಲ್ಲಿಯೇ ಕುಳಿತದ್ದನ್ನು ನೋಡಿ ನಾನು—“ಅರಗಿಳಿಯೇ, ಬಹಳ ತಡವಾಯಿತು. ರಾಜಪುತ್ರಿಯು ಎಚ್ಚತ್ತರೆ ತನ್ನನ್ನು ಕೇಳದೆ ನಿನ್ನನ್ನು ಹೊರಗೆ ಬಿಟ್ಟದ್ದಕ್ಕಾಗಿ ಅವಳು ವಿಪರೀತವನ್ನು ತಿಳಿಕೊಂಡಾಳು. ಬೇಗನೆ ಬಾ; ಮೊದಲಿನಂತೆ ನಿನ್ನ ಪಂಜರದಲ್ಲಿ ಕುಳಿತುಕೊ,” ಅನ್ನಲು ಗಿಳಿಯು—“ರಾಜಪುತ್ರಾ, ನಿಲ್ಲು; ಹೀಗೆ ಯಾಕೆ ಒತ್ತರಿಸುತ್ತೀ? ನೀನು ಹೀಗೆಯೇ ನನ್ನ ಮಾತು ಕೇಳಿದೆಯಾ? ಬಿಡುವವರೆಗೆ ನಿನ್ನ ಸ್ವಾಧೀನವು; ಇನ್ನು ಮೇಲೆ ನಾನು ಬಂದಾಗ್ಗೆ ಪಂಜರಕ್ಕೆ ಬೀಗವನ್ನು ಹಾಕುವೆಯಂತೆ. ರಾಜಪುತ್ರಿಗೆ ನೀನು ಇಷ್ಟು ಯಾಕೆ ಹೆದರುತ್ತೀ? ಅವಳೇನು ನಿನ್ನ ಮೇಲಧಿಕಾರಿಯೇ? ನಿಲ್ಲು; ಇನ್ನಿಷ್ಟು ವಿಶ್ರಾಂತಿಯನ್ನು ತೆಗೆದುಕೊಂಡು ಆ ಮೇಲೆ ಪಂಜರದೊಳಗೆ ಬರುತ್ತೇನೆ” ಎಂದು ಹೇಳಿ, ಅಲ್ಲಿಂದ ಮತ್ತೆ ಹಾರಿ ಕೆಲವು ಅಂತರದ ಮೇಲೆ ಹೋಗಿ ನೆಲದಮೇಲೆ ಕುಳಿತುಕೊಂಡಿತು. ಆದರೂ ನನಗೆ ಅದರ ಆವಶ್ಯಕತೆಯು ಹೆಚ್ಚು ಇದ್ದದ್ದರಿಂದ ಅದರ ಬೆನ್ನು ಹತ್ತಿ ತಿರುಗ ಹತ್ತಿದೆನು. ಗಿಳಿಯು ಸಮೀಪದಲ್ಲಿಯೇ ಕುಳಿತಂತೆ ತೋರಿಸಿ, ನಾನು ಹಿಡಿಯ ಹೋಗಲು, ಕೂಡಲೆ ಹಾರಿ ಮುಂದಕ್ಕೆ ಹೋಗುವದು. ಈ ಪ್ರಕಾರ ನಾನು ಗಿಳಿಯನ್ನು ಹಿಡಿಯವ ಹವ್ಯಾಸಕ್ಕೆ ಬಿದ್ದು, ಮೈಮೇಲೆ ಎಚ್ಚರಿಲ್ಲದೆ, ಸಂಜೆಯವರೆಗೆಹಾದಿಯನ್ನು ನಡೆದು ಎಷ್ಟೋ ಕಂದರಗಳನ್ನೂ, ಗುಡ್ಡಗಳನ್ನೂ, ಹೊಳೆಗಳನ್ನೂ ದಾಟಿದೆನು. ಮಾರ್ಗದ ಸ್ಮರಣವು ನನಗೆ ಎಷ್ಟು ಮಾತ್ರವೂ ಉಳಿಯಲಿಲ್ಲ. ನಾನುಹಾದಿಯನ್ನೂ ಹಿಡಿದು ಹೋಗಿದ್ದಿಲ್ಲ. ಹೊತ್ತುಮುಳುಗಿ ಕತ್ತಲೆ ಬಿದ್ದದ್ದನ್ನು ನೋಡಿ, ನನಗೆ ಪದ್ಮನಯನೆಯ ನೆನಪಾಯಿತು ಆದರೆ ಅವಳು ಕುಳಿತಿರುವಸ್ಥಳವು ಯಾವದಿಕ್ಕಿಗೆ ಎಷ್ಟು ದೂರ ಉಳಿಯಿತೆಂಬದರಕಲ್ಪನೆಯೇ ನನಗೆಹರಿಯಲಿಲ್ಲ. ಕತ್ತಲಾದದ್ದರಿಂದಗಿಳಿಯುಒಂದು ಎತ್ತರವಾದಮರದ ತುದಿಯಲ್ಲಿ ಕುಳಿತಿತು. ಇಷ್ಟು ಶ್ರಮಬಟ್ಟರೂ ನನ್ನ ಕೋರಿಕೆಯು ಕೊನೆಗಾಣದ್ದನ್ನು ನೋಡಿ ನನಗೆ ಬಹಳ ದುಃಖವಾಯಿತು. ಮರಳಿ ರಾಜಪುತ್ರಿಯ ಬಳಿಗೆ ಹೋಗಬೇಕೆಂಬ ವಿಚಾರವು ನನ್ನ ಮನದಲ್ಲಿ ಉತ್ಪನ್ನವಾದರೂ, ಮಾರ್ಗವು ಗೊತ್ತಿಲ್ಲದ್ದರಿಂದಲೂ, ಅವಳು ಕುಳಿತಿರುವ ಸ್ಥಳವು ದೂರ ಉಳಿದದ್ದರಿಂದಲೂ, ಬಹಳ ಕತ್ತಲಾದ್ದರಿಂದಲೂ ವಿಪರೀತಕಾಲಕ್ಕನುಸರಿಸಿ ಆ ವಿಚಾರವು ಕೂಡಲೆ ನಷ್ಟವಾಯಿತು. ನಾನು ಗಿಳಿಯು ಕುಳಿತಿದ್ದ ಮರದ ಕೆಳಗೇ ತಳಮಳಿಸುತ್ತ ಬೆಳಗಾಗುವವರೆಗೆ ಬಿದ್ದುಕೊಂಡೆನು.

ಮರುದಿವಸ ಮುಂಜಾನೆ ಆ ಗಿಳಿಯುಹಾರುವದಕ್ಕಿಂತ ಮೊದಲೇ ನಾನು ಎದ್ದು ಕುಳಿತು, ಅದು ಹಾರಿದ ಕೂಡಲೆ ಅದರ ಬೆನ್ನಹತ್ತಿ ಹೊರಟೆನು. ಆ ಹೊತ್ತಿನ ದಿನವೂ ಮುನ್ನಿನ ದಿನದಂತೆ ನಾನು ಸಂಜೆಯವರೆಗೆ ತಿರುಗಿದೆನು; ಅದರಿಂದ ಫಲವೇನೂ ಆಗಲಿಲ್ಲ. ಮಾರ್ಗದೊಳಗಿನ ಕೆಲವು ಹಣ್ಣು ಹಂಪಲಗಳನ್ನು ತಿಂದು, ನಿರ್ವಾಹಮಾಡುತ್ತ ಹೀಗೆ ಆ ದಿನವೂ ಗಿಳಿಯಬೆನ್ನುಹತ್ತಿ ತಿರುಗಿದೆನು. ಆದರೂ ನನ್ನ ಯತ್ನವೆಲ್ಲ ನಿಷ್ಫಲವಾಗಿ ಮುಂದೆ ಗಿಳಿಯು ಒಮ್ಮಿಂದೊಮ್ಮೆ ನನ್ನ ಕಣ್ಣಿಗೆ ಕಾಣದ ಹಾಗಾಯಿತು. ಮಿತ್ರಾ, ಸುಮತೀ! ಆಗ್ಗೆ ನನಗೆ ಒದಗಿದ ದುಃಖದ ಕಲ್ಪನೆಯನ್ನು ನೀನೇ ಮಾಡು, ನಾನು ನನ್ನ ಬಾಯಿಂದ ಅದನ್ನು ವರ್ಣಿಸಲಾರೆನು. ಘೋರಾರಣ್ಯದಲ್ಲಿ ರಾಜಪುತ್ರಿಯನ್ನು ಬಿಟ್ಟುಬಂದುಮೂರು ದಿನಗಳುಆಗಿಹೋದದ್ದರಿಂದ,ಅಲ್ಲಿ ಅವಳಗತಿಯು ಏನಾಗಿರುವದೋ, ಎಂದು ಮನದೊಳಗೆ ಚಿಂತಿಸಿದೆನು. ಏನು ಹೇಳಲಿ! ಅತ್ತ ರಾಜಪುತ್ರಿಯನ್ನೂ ಅಗಲಿದೆನು; ಇತ್ತ ಗಿಳಿಯೂ ಕಣ್ಮುಮರೆಯಾಯಿತು. ಮರಳಿ ರಾಜಪುತ್ರಿಯ ಕಡೆಗೆ ಹೋಗಬೇಕೆಂದರೆ ಅದೂ ಅಸಂಭವವಾಗಿ ತೋರಿತು. ತಾಯಿತಂದೆಗಳನ್ನಾದರೂ ಹೊಂದಬೇಕೆಂದರೆ ನನಗೆ ದಿಗ್ಭ್ರಮಣವಾಗಿ ಯಾವಕಡೆಗೆ ಹೋಗಬೇಕೆಂಬದುತಿಳಿಯದೆ ಹೋಯಿತು. ಈ ಪ್ರಕಾರ ಗಿಳಿಯ ಮೋಸದಿಂದನನಗಾದದುಃಖವನ್ನುವರ್ಣಿಸುವದುಅಶಕ್ಯವು. ಅಸಹ್ಯವಾದದುಃಖದಿಂದ ನನಗೆ ಜೀವವು ಬೇಸರವಾಯಿತು. ಮನಃಪ್ರಿಯಳಾದ ಪದ್ಮನಯನೆಯೊಡನೆ ಆ ಹೊತ್ತಿನವರೆಗೆ ಅನುಭವಿಸಿದ ಸುಖಗಳೆಲ್ಲ ಸ್ವಪ್ನದಲ್ಲಿಯ ಸುಖಗಳಂತೆ ತೋರಹತ್ತಿದವು. ಸುಖದಿಂದ ಕಳೆದ ಕಾಲವು ಬಹು ದೊಡ್ಡದಿದ್ದರೂ, ಅದು ಅಲ್ಪವಾಗಿ ತೋರುವದು. ಅದೇ ದುಃಖದಿಂದ ಕಳೆದ ಕಾಲವು ಅಲ್ಪವಾಗಿದ್ದರೂ, ಅದು ದೊಡ್ಡದಾಗಿ ಕಾಣುವದು. ಇದರಂತೆ ರಾಜಪುತ್ರಿಯೊಡನೆ ನಾನು ಬಹುಕಾಲ ಅನುಭವಿಸಿದ ಸುಖವು ಅಗೋಚರವಾಗಿ, ಸಾಂಪ್ರತಕ್ಕೆ ಒದಗಿದ ದುಃಖವು ದುಃಸಹವಾಯಿತು. ಪ್ರಾಣಕ್ಕಿಂತಲೂ ಅಧಿಕಳಾದ ಪ್ರಿಯಪದ್ಮನಯನೆಗೂ, ದುರ್ಲಭರಾದ ಮಾತಾ–ಪಿತೃಗಳಿಗೂ ದುಃಖ ಕೊಟ್ಟು ಈ ಜೀವವನ್ನು ಇಡುವದರಲ್ಲಿ ಸುಖವೂ, ಪುರುಷಾರ್ಥವೂ ಇಲ್ಲೆಂದು ತಿಳಿದು ನಾನು ಪ್ರಾಣತ್ಯಾಗ ಮಾಡುವದನ್ನು ನಿಶ್ಚಯಿಸಿದೆನು.

ಪ್ರಿಯಮಿತ್ರಾ, ದುಃಖದಿಂದ ವಿವೇಕ ಭ್ರಷ್ಟನಾದ ನಾನು ಪ್ರಾಣತ್ಯಾಗದ

ಕೆಲವು ಉಪಾಯಗಳನ್ನು ಚಿಂತಿಸತೊಡಗಿದೆನು. ಒಮ್ಮೆ ನನ್ನ ಬಳಿಯಲ್ಲಿದ್ದ ತೀಕ್ಷ್ಣವಾದ ಖಡ್ಗದಿಂದನನ್ನ ಶಿರಚ್ಛೇದವನ್ನುಮಾಡಿಕೊಳ್ಳುವದಕ್ಕೆಉದ್ಯೋಗಿಸಿದೆನು; ಆದರೆ ಈ ಕೃತಿಯಿಂದ ಪ್ರೇತವು ಅನಾಥವಾಗಿ, ಹದ್ದುಕಾಗೆಗಳ ಪಾಲಾಗುವದೆಂಬ ವಿಚಾರವು ನನ್ನ ಮನದೊಳಗೆ ಬಂದದ್ದರಿಂದ, ನಾನು ಆ ಸಾಹಸಕ್ಕೆ ಹೋಗದೆ, ಅಗ್ನಿ ಪ್ರವೇಶದಿಂದ ದೇಹತ್ಯಾಗ ಮಾಡುವದು ಯೋಗ್ಯವೆಂದು ತಿಳಿದು, ಆ ಅರಣ್ಯದೊಳಗಿನ ಒಣಗಿದ ಕಟ್ಟಿಗೆಗಳನ್ನು ಆರಿಸಹತ್ತಿದೆನು. ಸ್ವಲ್ಪ ಹೊತ್ತಿನಲ್ಲಿಯೇ ಕಟ್ಟಿಗೆಯ ರಾಶಿಯು ಪರ್ವತಪ್ರಾಯವಾಗಿ ನನ್ನ ಮುಂದೆ ಬಿದ್ದಿತು. ನಾನು ಚಕಮುಕಿಯಿಂದ ಅಗ್ನಿಯನ್ನು ಉತ್ಪನ್ನ ಮಾಡಿ ಮೈಮೇಲಿನ ವಸ್ತ್ರಗಳನ್ನು ಅದಕ್ಕೆ ಇಂಧನವಾಗಿ ಹಾಕಿ ಹೊತ್ತಿಸಿದೆನು. ಅದರಿಂದ ಅಗ್ನಿಯು ಹುತವಾಗಿ ಭಯಂಕರ ಜ್ವಾಲೆಯು ಉತ್ಪನ್ನವಾಯಿತು. ಅದನ್ನು ನೋಡಿ ನನ್ನ ಪ್ರಿಯಳ ಹಾಗು ಮಾತಾಪಿತೃಗಳ ಸ್ಮರಣವಾಗಿ ನನ್ನ ಕಣ್ಣುಗಳಿಂದ ಆಶ್ರುಗಳು ಧಾರಾಳವಾಗಿ ಸುರಿಯಹತ್ತಿದವು. ಮಿತ್ರಾ, ಪ್ರಾಣತ್ಯಾಗವು ಸುಲಭವಲ್ಲ. ನನಗೆ ಜೀವವು ಬೇಸರವಾಗಿದ್ದರೂ, ಅದನ್ನು ನಾಶ ಮಾಡುವ ಕಾಲವು ಪ್ರತ್ಯಕ್ಷವಾಗಿಬದಗಿದ್ದನ್ನು ನೋಡಿ, ನನಗೆಬಹಳ ದುಃಖವಾಯಿತು. ನಾನು ಆಕಾಶದ ಕಡೆಗೆ ಮುಖವೆತ್ತಿ, ದೀನಮುದ್ರೆಯಿಂದ ದೇವರನ್ನು ಕುರಿತು—ಜಗತ್ಪಾಲಕಾ, ಪರಮೇಶ್ವರಾ, ನಿನ್ನ ಲೀಲೆಯು ಅಗಾಧವಾದದ್ದು. ಪ್ರಾಣಿಮಾತ್ರಗಳ ರಕ್ಷಣ ಕರ್ತೃವೂ, ಕರುಣಾಸಮುದ್ರವೂ ನೀನಿದ್ದು, ಈ ದೆಸೆಗೇಡಿಯಾದ ಕಮಲಾಕ್ಷನ ಮೇಲೆ ಇಂಥ ದುರ್ಘಟ ಪ್ರಸಂಗವು ಯಾಕೆ ಬಂದಿರಬಹುದು? ನನ್ನಕರ್ಮವು ಬಲಿಷ್ಠವಾಗಿರುವವರೆಗೆ ಯಾರೇನು ಮಾಡುವರು? ಸಾವಿಗೆ ನಾನು ಹೆದರುವದಿಲ್ಲ. ಆದರೆ ನನ್ನ ತಾಯಿತಂದೆಗಳೂ, ಪ್ರಾಣಪ್ರಿಯಳಾದ ಪದ್ಮನಯನೆಯೂ ನನ್ನ ವಿಯೋಗದುಃಖಸಾಗರದ ಅಂತವನ್ನು ಎಂದೂ ಕಾಣುವದಿಲ್ಲೆಂಬದನ್ನು ನೆನಿಸಿ ನನಗೆ ಮಿತಿಮೀರಿ ದುಃಖವಾಗುತ್ತದೆ. ದಯಾನಿಧೆಯೇ, ನಿನ್ನ ಚರಣವನ್ನು ಹೊಂದಲಿಚ್ಛಿಸಿ, ಅಗ್ನಿಪ್ರವೇಶಮಾಡಲುದ್ಯೋಗಿಸಿದ್ದೇನೆ. ನನ್ನಿಂದ ದೋಷಾಸ್ಪದವಾದ ಕೃತಿಗಳು ಸಂಘಟಿಸಿದ್ದರೂ, ನೀನು ಕ್ಷಮಾಶೀಲನಾದದ್ದರಿಂದ ಅವುಗಳನ್ನು ಎಣಿಸದೆ ನನ್ನನ್ನು ನಿನ್ನ ಹತ್ತರ ಕರೆದುಕೋ. ನೀನಲ್ಲದೆ ನನ್ನ ಮೊರೆಯನ್ನು ಯಾರು ಕೇಳಬೇಕು? ತಂದೆಯೂ, ತಾಯಿಯೂ, ಆಪ್ತನೂ, ಮಿತ್ರನೂ ನೀನೇ. ನಿನ್ನ

ಹೊರತು ನನ್ನನ್ನು ದುಃಖಸಾಗರದಿಂದ ಮುಕ್ತನಾಗಮಾಡುವ ಸಮರ್ಥರು ಮತ್ತಾರಿದ್ದಾರೆ? ನನ್ನ ಮೇಲಿನ ನಿನ್ನ ದಯವು ಇರುವವರೆಗೆ ಮಾತ್ರ ನನ್ನ ತಂದೆ ತಾಯಿಗಳೂ, ಬಂಧು ಮಿತ್ರರೂ, ಪ್ರಾಣಕ್ಕಿಂತಲೂ ಅಧಿಕಳಾದ ಪದ್ಮನಯನೆಯೂ ನನ್ನ ಸುಖಕ್ಕೆ ಕಾರಣವಾದರು. ಈಗ ನನ್ನ ದುಷ್ಕರ್ಮ ಯೋಗದಿಂದ ನಿನ್ನ ದಯೆಯು ತಪ್ಪಿರಲು, ಯಾರಾದರೂ ಈ ಅನಾಥ ಕಮಲಾಕ್ಷನ ದುಃಖವನ್ನು ಕೇಳುವದಕ್ಕಾದರೂ ಬಂದಿರುವರೇ? ಶರಣಜನರಕ್ಷಕಾ, ಸೃಷ್ಟಿಸ್ಥಿತಿಲಯಾದಿಕರ್ತಾ, ನೀನು ನನ್ನನ್ನು ಉಪೇಕ್ಷಿಸಬೇಡ. ಮಾತಾಪಿತೃಗಳಿಗೂ, ಪ್ರಾಣಪ್ರಿಯಳಾದ ಪದ್ಮನಯನೆಗೂ ಚಿರಕಾಲ ಅಖಂಡ ಸುಖವನ್ನಿತ್ತು ರಕ್ಷಿಸೆಂಬ ನನ್ನ ವಿಜ್ಞಾಪನೆಯನ್ನಾಲಿಸಿ, ಗುರುವು ಶಿಷ್ಯನನ್ನೂ, ತಂದೆಯು ಮಗನನ್ನೂ ಪ್ರೀತಿಯಿಂದ ಆದರಿಸುವಂತೆ, ತಂದೆಯೂ, ಗುರುವೂ ಆದ ನೀನು ನನ್ನನ್ನು ಆದರಿಸು. ತಂದೆಯೇ, ನಿನ್ನ ದಯದಿಂದ ನನಗೆ ಪ್ರಾಪ್ತಳಾಗಿದ್ದ ಪದ್ಮನಯನೆಯು, ನನ್ನನ್ನಗಲಿ ಹೋದದ್ದರಿಂದ ನಾನು ಭ್ರಮಿಷ್ಟನಾಗಿರಲು, ವೇದಗಳಿಗೂ ಅಗೋಚರವಾದ ನಿನ್ನ ಮಹಿಮೆಯನ್ನು ಹೊಗಳಲು ಪಾಮರನಾದ ನಾನು ಹೇಗೆ ಸಮರ್ಥನಾಗುವೆನು? ತಾಯಿಯು ಮೂರ್ಖ ಮಗನನ್ನಾದರೂ ಮುದ್ದಾಡಿ ಆದರಿಸುವಂತೆ, ತಾಯಿಯತಾಯಿಯಾದ ನೀನು ನನ್ನನ್ನು ಆದರಿಸು. ಕರುಣಾಸಮುದ್ರವೇ, ನನ್ನ ಕರ್ಮಾನುಸಾರವಾಗಿ ಸುಖದುಃಖಗಳನ್ನೀಯುವದಕ್ಕೆ ಮಾತ್ರ ಕಾರಣರೂ, ಅಸ್ವಂತತ್ರರೂ, ನಾಶವಂತರೂ ಆದ ಬಂಧು ಮಿತ್ರರನ್ನೂ, ಪದ್ಮನಯನೆಯನ್ನೂ ನಂಬಿ, ಅನಿಮಿತ್ತ ಬಾಂಧವನೂ, ಸರ್ವತಂತ್ರಸ್ವತಂತ್ರನೂ, ನಾಶರಹಿತನೂ ಆದ ನಿನ್ನನ್ನು ಮರೆತುಬಿಟ್ಟ ನನ್ನ ಮೂರ್ಖತನಕ್ಕೆ ಎಣೆಯಿಲ್ಲ. ಅಯ್ಯೋ ದೇವಾ, ಏನು ಮಾಡಲಿ? ನನ್ನ ಮನೋವೃತ್ತಿಯ ಪ್ರವಾಹವು ಸಂಸಾರಸಾಗರವನ್ನು ಸೇರಿ ಮೋಹಬದ್ಧವಾಗಿರುವದರಿಂದ ಅದು ಮತ್ತೂ ನನ್ನ ಪ್ರಿಯಳನ್ನು ನೆನಿಸಿ ತೊಳಲುತ್ತದಲ್ಲದೆ, ಕರುಣಾಳುವಾದ ನಿನ್ನ ಪಾದಾರವಿಂದದಲ್ಲಿ ಸಿಲುಕಲೊಲ್ಲದು. ಹಾ! ಪದ್ಮನಯನೇ, ನಿನ್ನನ್ನೊಡಗೂಡಿರುವಾಗ ಈ ಕಮಲಾಕ್ಷನ ಐಶ್ವರ್ಯಕ್ಕೂ, ಸುಖಕ್ಕೂ ಎಣೆಯಿದ್ದಿಲ್ಲ. ಆದರೆ ಈಗ ನಿನ್ನನ್ನಗಲಿ ಅನಾಥನಾದದ್ದರಿಂದ ಅವನಿಗೊದಗಿದ ದುರ್ದಶೆಯನ್ನು ಎಷ್ಟೆಂತ ವರ್ಣಿಸಬೇಕು? ಯಾವ ನಿನ್ನ ಸುಗುಣಗಳೂ, ನಿಜವಾದ

ಪ್ರೇಮವೂ, ಸೌಜನ್ಯವೂ, ಸೌಕುಮಾರ್ಯವೂ, ಸೌಂದರ್ಯವೂ ನಿನ್ನ ಸಹವಾಸಿಯಾಗಿರುವಾಗ್ಗೆ ಕಮಲಾಕ್ಷನ ಆನಂದಾಭಿವೃದ್ಧಿಗೆ ಕಾರಣವಾಗಿದ್ದವೋ, ಅವೇ ಈಗ ನಿನ್ನನ್ನು ಅಗಲಿದ್ದರಿಂದ ಅವನಿಗೆ ವಿಷರೂಪವಾಗಿ ಬಾಧಿಸುತ್ತವೆ. ಕೋಮಲೇ, ನೀನು ಘೋರಾರಣ್ಯದಲ್ಲಿ ಅನಾಥಳಾಗಿ ಒಬ್ಬಳೇ ಕುಳಿತಿರುವದರಿಂದ ನಿನ್ನ ಗತಿಯು ಏನಾಗಿರಬಹುದು? ನಿನಗೆ ಮಾರ್ಗವೇನು? ನೀನು ಯಾರನ್ನು ಹೊಂದುವೆ? ನೀನು ಏಳುತಿಂಗಳ ಗರ್ಭಿಣಿಯಲ್ಲವೆ? ನನ್ನೊಡನೆ ಅರಣ್ಯದಲ್ಲಿ ಮಾರ್ಗಕ್ರಮಣ ಮಾಡುವಾಗ, ಗರ್ಭಭಾರದಿಂದ ಬಳಕುತ್ತ ಒಮ್ಮೊಮ್ಮೆ ನನ್ನ ಕೈಯನ್ನು ಹಿಡಿದು ಮೆಲ್ಲಮೆಲ್ಲನೆ ನಡೆಯುತ್ತಿದ್ದೆಯಲ್ಲ!! ಸುಂದರೀ, ಇನ್ನು ನಿನ್ನ ಮೊರೆಯನ್ನು ಯಾರು ಕೇಳಬೇಕು? ಸರ್ವಾಂಶದಿಂದ ನನ್ನನ್ನು ನಂಬಿ ಸರ್ವಸ್ವವನ್ನು ನನಗೆ ಒಪ್ಪಿಸಿ, ನನ್ನಾಧೀನಳಾದ ನಿನ್ನನ್ನು ಕಟುಕನಂತೆ ಕೆಟ್ಟಗಿಳಿಯ ಆಶೆಯಿಂದ ನಾನು ಅಗಲಿಬಿಟ್ಟೆನಲ್ಲ! ಸುಕುಮಾರೀ, ಗರ್ಭಲಾಂಛನಗಳಿಂದ ಮನೋಹರವಾಗಿ ಒಪ್ಪುತ್ತಿದ್ದ ನಿನ್ನ ಮುಖಕಮಲವು ಇನ್ನು ನನ್ನ ಕಣ್ಣಿಗೆ ಹೇಗೆ ಬೀಳುವದು? ನಿಷ್ಕಾರಣವಾಗಿ ನಿನ್ನನ್ನಗಲಿಸಿದ ನನ್ನ ಅವಿವೇಕ ಬುದ್ಧಿಗೆ ಧಿಕ್ಕಾರವಿರಲಿ!

ಮಿತ್ರಾ, ಸುಮತೀ, ಈ ಪ್ರಕಾರ ದುಃಖಿಸುತ್ತಿರುವಾಗ ನನ್ನ ಕುತ್ತಿಗೆಯ ಶಿರಗಳು ಬಿಗಿದು, ನೇತ್ರಗಳು ಅಶ್ರುಗಳಿಂದ ತುಂಬಿ ಮುಖದಿಂದ ಅಕ್ಷರಗಳೇ ಹೊರಡದ ಹಾಗಾಗಲು, ದೊಡ್ಡ ಧ್ವನಿಯಿಂದ ನಾನು ಅಳಹತ್ತಿದೆನು. ಕೆಲಹೊತ್ತು ಮನವಣೆಯೆ ಆತ್ಮನೋಲೆ ನನ್ನ ಮನಸ್ಸು ನಿರಾಶೆಯನ್ನು ಹೊಂದಿ ಅಗ್ನಿಪ್ರವೇಶಕ್ಕೆ ಸಿದ್ಧವಾಯಿತು. ಕಡೆಯ ಸಾರೆ ನಾನು ಮಾತಾಪಿತೃಗಳನ್ನೂ, ಪ್ರಿಯ ಪದ್ಮನಯನೆಯನ್ನೂ, ಜಗದ್ರಕ್ಷಕನಾದ ಪರಮೇಶ್ವರನನ್ನೂ ನೆನಿಸಿ, ಯಜ್ಞೇಶ್ವರನಿಗೆ ಪ್ರದಕ್ಷಿಣೆ ಮಾಡಿ ಹಾರಿಕೊಳ್ಳುವ ಸಂಧಿಯಲ್ಲಿ ದೂರ ಯಾರೋ—“ ರಾಜಪುತ್ರಾ, ನಿಲ್ಲು ನಿಲ್ಲು, ಮೂರ್ಖತನದಿಂದ ಇಂಥ ಸಾಹಸ ಕೃತ್ಯವನ್ನು ಮಾಡಬೇಡ. ಇಗೋ ನೋಡು ಬಂದೆನು; ” ಎಂದು ಉಚ್ಚಸ್ವರದಿಂದ ಒದರಿದ್ದು ನನ್ನ ಕಿವಿಗೆ ಬೀಳಲು, ನಾನು ಚಕಿತನಾಗಿ ನಾಲ್ಕೂಕಡೆಗೆ ನೋಡಹತ್ತಿದೆನು. ಆಗ ಒಬ್ಬ ಋಷಿಯು ಕೈಸನ್ನೆಯಿಂದ “ ನಿಲ್ಲುನಿಲ್ಲು ” ಎಂದು ಹೇಳುತ್ತ ಲಗಬಗೆಯಿಂದ ಬರುವದು ನನ್ನ ಕಣ್ಣಿಗೆ ಬಿತ್ತು. ಅದರಿಂದ ಅಗ್ನಿಪ್ರವೇಶ ಮಾಡತೊಡಗಿದ ನಾನು, ಮೂರ್ಖತನ

ವೇನಾಯಿತೆಂದು ತಿಳಿಯುವ ಕಾಂಕ್ಷೆಯಿಂದ ಋಷಿಯ ಮಾರ್ಗಪ್ರತೀಕ್ಷೆ ಮಾಡುತ್ತ, ಸುಮ್ಮನೆ ನಿಂತುಕೊಂಡೆನು. ಋಷಿಯು ಸಮೀಪಕ್ಕೆ ಬರಲು, ನಾನು ಆತನಿಗೆ ಸಾಷ್ಟಾಂಗನಮಸ್ಕಾರವನ್ನು ಮಾಡಿದೆನು. ಆಗ ಆತನು—" ರಾಜಪುತ್ರಾ, ಆಯುಷ್ಮಂತನಾಗು" ಎಂದು ಆಶೀರ್ವದಿಸಿ, ತನ್ನ ವರದಹಸ್ತವನ್ನು ನನ್ನ ತಲೆಯಮೇಲೆ ಇಟ್ಟನು. ಆ ಮೇಲೆ ನಾನು ಮೇಲಕ್ಕೆ ಎದ್ದು ಕೈ ಜೋಡಿಸಿಕೊಂಡು ಎದುರಿಗೆ ನಿಂತುಕೊಂಡದ್ದನ್ನು ನೋಡಿ, ಆ ಋಷಿಯು ನುಡಿದನೇನಂದರೆ—" ಪ್ರತಾಪಿಯೇ, ನೀನು ರಾಜಪುತ್ರನಿರುವೆಯೆಂಬವನ್ನೂ. ನಿನಗೆ ಯಾವ ಯಾವ ಸಂಕಟಗಳು ಒದಗಿದವೆಂಬವನ್ನೂ ನಾನು ಆಗಲೇ ನನ್ನ ಜ್ಞಾನದೃಷ್ಟಿಯಿಂದ ತಿಳಕೊಂಡೆನು. ಮಾತಾ—ಪಿತೃಗಳ, ಹಾಗು ಪ್ರಿಯಳ ವಿಯೋಗದುಃಖಕ್ಕಾಗಿ ನೀನು ಪ್ರಾಣಕೊಟ್ಟರೆ, ನಿನ್ನ ಹಿತವನ್ನು ಮಾತ್ರ ನೋಡಿದಂತೆ ಆಗುತ್ತದಲ್ಲದೆ, ಅನ್ಯರ ದುಃಖದ ನಿವಾರಣದ ಕಡೆಗೆ ನೀನು ಮನಸ್ಸು ಮಾಡಿದಂತೆ ಆಗುವದಿಲ್ಲ. ಸ್ವಂತದ ಹಿತವನ್ನು ಮಾತ್ರ ಸಾಧಿಸಿಕೊಳ್ಳುವವರು ನೀಚವರ್ಗದ ಜನದೊಳಗೆ ಸೇರಿಸಲ್ಪಡುತ್ತಾರೆ. ಪ್ರಾಣತ್ಯಾಗವು ನಿನ್ನ ಮಾತಾಪಿತೃಗಳ, ಇಲ್ಲವೆ ನಿನ್ನ ಪ್ರಿಯಳ ಸಮಾಗಮ ನಿಮಿತ್ತವಾಗಲಿ, ದರ್ಶನೋಪಾಯವಾಗಲಿ ಆಗುವದೋ? ಪ್ರಾಣಿಗಳ ಮಾರ್ಗಗಳು ಅವವುಗಳ ಕರ್ಮಾನುಸಾರವಾಗಿ ಬೇರೆ ಬೇರೆಯಾಗಿರುವವರಿಂದ ಒಬ್ಬರನ್ನೊಬ್ಬರು ಹಿಂಬಾಲಿಸಲಾರರು. ಯಾವ ಪ್ರಯೋಜನವೂ ಇಲ್ಲದೆ ಇಂಥ ಸಾಹಸಮಾಡುವದು ಮೂರ್ಖತನವಲ್ಲವೆ? ಮನುಷ್ಯ ಶರೀರವು ಸುಲಭವಾಗಿ ದೊರೆಯತಕ್ಕದ್ದಲ್ಲ. ಅದನ್ನು ಪುಣ್ಯರೂಪವಾದ ದೊಡ್ಡಬೆಲೆಕೊಟ್ಟು ಕೊಳ್ಳಬೇಕಾಗುತ್ತದೆ. ಮೋಕ್ಷವು ಈ ಶರೀರದ ಯೋಗದಿಂದಲೇ ದೊರೆತರೆ ದೊರೆಯಬೇಕು. ಹೀಗಿರಲು, ದುರ್ಲಭವಾದ ನಿನ್ನ ಶರೀರದ ಮಹತ್ವವು ನಿನಗೆ ಏನೂ ತೋರುವದಿಲ್ಲವೆ? ಇತ್ತಬಾ. ಮೂರ್ಖನಂತೆ ಅಸಂಗತ ಕೆಲಸಮಾಡಬೇಡ. ಇನ್ನು ಸ್ವಲ್ಪ ಕಾಲದಲ್ಲಿಯೇ ನಿನ್ನ ಪ್ರಿಯಳ, ಹಾಗು ಮಾತಾ—ಪಿತೃಗಳ ಸಮಾಗಮ ಸುಖವು ನಿನಗೆ ದೊರೆಯುವದು. ನಾನು ಹೇಳುವ ಮಾತನ್ನು ಸ್ವಲ್ಪಲಕ್ಷ ಗೊಟ್ಟು ಕೇಳು. ಯಾವ ಪ್ರಯತ್ನವನ್ನೂ ಮಾಡದೆ ಹೆಂಗಸಿನಂತೆ ಜೀವ ಕೊಡುವದು ಪೌರುಷವಲ್ಲ. ಯತ್ನಮಾಡಿಯೂ ಸಾಧ್ಯವಾಗದಿದ್ದರೆ, ಅಲ್ಲಿ ಯಾವ ದೋಷವೂ ಇಲ್ಲ. ಯತ್ನಮಾಡುತ್ತಿರುವದು ಪುರುಷಧರ್ಮವಾಗಿರುವದು.

ಈ ಪ್ರಕಾರ ಆ ಋಷಿಯು ನನಗೆ ಉಪದೇಶಮಾಡಿ, ಮತ್ತೆ ಹೇಳಿದನೇ ನಂದರೆ—"ರಾಜಪುತ್ರಾ, ನೀನು ಎರಡನೆಯ ವಿಚಾರವನ್ನು ಮಾಡದೆ, ಇಲ್ಲಿಂದ ನೆಟ್ಟಗೆ ಪೂರ್ವಾಭಿಮುಖವಾಗಿ ಮುಂದಕ್ಕೆ ಸಾಗು; ಸ್ವಲ್ಪ ದಿನಗಳಲ್ಲಿಯೇ ಒಂದು ಶಿವಾಲಯವು ನಿನಗೆ ಹತ್ತುವದು. ಅಲ್ಲಿ ಶಿವಾರಾಧನೆಯಲ್ಲ ಹತ್ತು ದಿನಗಳನ್ನು ಕಳೆಯುವದರೊಳಗಾಗಿ ಸುಮತಿಯೆಂಬಒಬ್ಬ ಬ್ರಾಹ್ಮಣನು ಅಲ್ಲಿಗೆ ಬರುವನು. ಅವನ ಸಹಾಯದಿಂದ ನಿನ್ನ ಪ್ರಿಯಳನ್ನು ಹುಡುಕುವ ಪ್ರಯತ್ನ ಮಾಡಿದರೆ ನಿಶ್ಚಯವಾಗಿ ಯಶಸ್ಸುದೊರೆಯುವದು. "ಮಿತ್ರಾ, ಋಷಿಯು ಈ ಪ್ರಕಾರ ಭವಿಷ್ಯವನ್ನು, ಮುಖ್ಯವಾಗಿ ನನ್ನ ಪ್ರಿಯಳು ದೊರೆಯುವಳೆಂಬದನ್ನು ಹೇಳಿದ್ದರಿಂದ ನನ್ನ ಮನಸ್ಸು ಆಗಲೇ ಅಗ್ನಿಪ್ರವೇಶವನ್ನು ನಿರಾಕರಿಸಿತು. ಋಷಿಗೆ ನಾನು ಭಯ-ಭಕ್ತಿಯಿಂದ ಸಾಷ್ಟಾಂಗ ನಮಸ್ಕಾರಮಾಡಿ ಮೇಲಕ್ಕೆ ಎದ್ದು ನೋಡಲು, ಆತನು ಅಲ್ಲಿ ಇದ್ದಿಲ್ಲ. ಒಮ್ಮಿಂದೊಮ್ಮೆ ಋಷಿಯು ಅದೃಶ್ಯನಾದದ್ದನ್ನು ನೋಡಿ, ಆತನ ವಿಷಯವಾಗಿಯೂ, ಆತನ ಭವಿಷ್ಯದ ವಿಷಯವಾಗಿಯೂ ನನ್ನಲ್ಲಿ ಪೂಜ್ಯಬುದ್ಧಿಯೂ, ನಂಬಿಗೆಯೂ ಉಂಟಾದವು. ಕೂಡಲೆ ನಾನು ಪೂರ್ವದಿಕ್ಕನ್ನು ಹಿಡಿದು ಮಾರ್ಗಕ್ರಮಣ ಮಾಡಿ ಈ ಶಿವಾಲಯಕ್ಕೆ ಬಂದೆನು. ಹೇಳಿಕೆಯಂತೆ ಈಹೊತ್ತೇ ಹತ್ತನೆಯ ದಿವಸವಿರಲು, ನೀನು ಬಂದಿರುತ್ತೀ; ಅಂದಬಳಿಕ ಋಷಿಯು ಮಾತಿನಂತೆ ಇನ್ನು ಸ್ವಲ್ಪ ದಿವಸದೊಳಗೆ ನನ್ನ ಪ್ರಿಯಪದ್ಮನಯನೆಯ ಶೋಧವು ಆಗಬಹುದಲ್ಲವೆ! ಅನ್ನಲು ಅದಕ್ಕೆ ಸುಮತಿಯು—"ರಾಜಪುತ್ರಾ, ಅದ್ಭುತವಾದ ನಿನ್ನ ಚರಿತ್ರವನ್ನು ಕೇಳಿ ನನಗೆ ಬಹಳ ಆಶ್ಚರ್ಯವಾಯಿತು. ನಿನಗೆ ಭವಿಷ್ಯವನ್ನು ಹೇಳಿದ ಋಷಿಯು ನನ್ನ, ಹಾಗೂ ಪದ್ಮನಯನೆಯ ಗುರುವಾದ ಕಪಿಂಜಲಋಷಿಯೆಂಬದಕ್ಕೆ ಸಂದೇಹವಿಲ್ಲ. ಆ ಋಷಿಯು ನಿನಗೆ ಪ್ರತ್ಯಕ್ಷವಾಗಿ ಭವಿಷ್ಯವನ್ನು ಹೇಳಿದಂತೆ, ನನ್ನ ಸ್ವಪ್ನದಲ್ಲಿಯೂ ಬಂದುಶಿವಾಲಯಕ್ಕೆ ಹೋಗಹೇಳಿದನು. ಇರಲಿ, ಅರಣ್ಯದಲ್ಲಿ ಪದ್ಮನಯನೆಯ ವ್ಯವಸ್ಥೆಯು ಏನಾಯಿತೋ, ಆಕೆಯು ಎಷ್ಟು ಕಷ್ಟಗಳನ್ನನುಭವಿಸುತ್ತಿರುವಳೋ, ಪರಮೇಶ್ವರನೇ ಬಲ್ಲ! ಆದಮಾತಿಗೆ ಸುಮ್ಮನೆ ವ್ಯಸನಬಟ್ಟು ಪ್ರಯೋಜನವೇನು? ಗುರುವಿನ ಮಾತಿನಮೇಲಿಂದ ಅವಳಿಗೆ ಮರಣದ ಭಯವಿಲ್ಲೆಂದು ನಾನು ನಂಬಿದ್ದೇನೆ. ಸದ್ಗುರುವು ರಾಜಪುತ್ರಿಯ ರಕ್ಷಣಮಾಡಲಿಕ್ಕೆ ಸಮರ್ಥನಿರಲು, ನೀನೂ ನಾನೂ

ಯಾಕೆ ಚಿಂತಿಸಬೇಕು? ಏಳು, ತಡವೇಕೆ? ರಾಜಪುತ್ರಿಯ ಶೋಧಕ್ಕಾಗಿ ಹೊರ ಡೋಣ" ಅನ್ನಲು, ಅದಕ್ಕೆ ರಾಜಪುತ್ರನಾದ ಕಮಲಾಕ್ಷನು ಸಮ್ಮತಿಸಿದ್ದ ರಿಂದ ಅವರು ಪದ್ಮನಯನೆಯ ಶೋಧಕ್ಕೆ ಉಪಕ್ರಮಿಸಿದರು.



## ೧೧ ನೆಯ ಪ್ರಕರಣ.

# ದುಃಖ—ಪರಂಪರೆ.



ವಾಚಕರೇ, ಯೋಗ್ಯಮಿತ್ರನಾದ ಸುಮತಿಯ ಸಹವಾಸದಿಂದ, ಕೆಲಮ ಟ್ಟಿಗೆ ಸಮಾಧಾನವನ್ನು ಹೊಂದಿದ ಕಮಲಾಕ್ಷನನ್ನು ಬಿಟ್ಟು, ನಾವು ಅನಾ ಥಳಾದ ಪದ್ಮನಯನೆಯ ಸಮಾಚಾರವನ್ನು ತೆಗೆದುಕೊಳ್ಳೋಣ ನಡೆಯಿರಿ. ಅರಣ್ಯದಲ್ಲಿ ಮಲಗಿಕೊಂಡಿದ್ದ ಪದ್ಮನಯನೆಯು ಕೆಲವು ಹೊತ್ತಿನಮೇಲೆ ಎಚ್ಚತ್ತು ಕಣ್ದೆರೆದು ನೋಡಲು, ರಾಜಪುತ್ರನೂ, ಗಿಳಿಯೂ ಇದ್ದಿಲ್ಲ; ಅದ ರಿಂದ ಅವಳು ಮನದಲ್ಲಿ ಬೆದರಿದಳು. ಕೂಡಲೆ ಆಕೆಯು ಸುಮಧ್ಯಮೆ ಯನ್ನು ಎಬ್ಬಿಸಿ—"ಸುಮಧ್ಯಮೇ, ಗಿಳಿಯೂ, ಪ್ರಾಣದೊಡೆಯರೂ ಎಲ್ಲಿ ದ್ದಾರೆ," ಎಂದು ಕೇಳಲು, ಅವಳು ಗಾಬರಿಯಾಗಿ ಮುಂದುಗಾಣದೆ ತತ್ತರಿಸು ತ್ತ—"ಒಡೆಯಳೇ, ಈ ದಾಸಿಯಿಂದ ದೊಡ್ಡ ಅಪರಾಧವಾಗಿದೆ. ಏನು ಮಾಡಲಿ? ನಾನು ಮಾರ್ಗಶ್ರಮದಿಂದ ಬಳಲಿದವಳಾದ ಕಾರಣ, ಈ ಬಿಸಿಲಿನ ತಾಪದಿಂದ ಕಣ್ಣಿಗೆ ಮಬ್ಬುಬಂದಂತಾಯಿತು. ಅದರಿಂದ ನೀನು ಮಲಗಿದ ಕೂಡಲೆ ನಾನೂ ಮಲಗಿಕೊಂಡೆನು. ನಾನು ಮಲಗುವಾಗ್ಗೆ ರಾಜಪುತ್ರರು ಯಾವದೋ ವಿಚಾರದಲ್ಲಿ ತೊಡಗಿದ್ದರು. ಮುಂದೆ ಅವರು ಏನು ಮಾಡಿ ದರು, ಎಲ್ಲಿಗೆ ಹೋದರು, ಎಂಬದು ನನಗೆ ಗೊತ್ತಿಲ್ಲ. ನನ್ನಿಂದಾದ ಅಪ ರಾಧವನ್ನು ಕ್ಷಮಿಸಬೇಕು." ಎಂದು ಹೇಳಿಕೊಳ್ಳಲು, ರಾಜಪುತ್ರಿಯು— "ಅವ್ವಾ, ಒಬ್ಬರನ್ನೊಬ್ಬರು ಶಿಕ್ಷಿಸುವದಕ್ಕೂ, ಒಬ್ಬರ ಅಪರಾಧವನ್ನೊಬ್ಬರು ಕ್ಷಮಿಸುವದಕ್ಕೂ ಮನುಷ್ಯರು ಸ್ವತಂತ್ರರಲ್ಲ. ಹೀಗಿರಲು, ನನಗೆ ನೀನೇಕೆ

ಇಷ್ಟು ಹೇಳಿಕೊಳ್ಳುತ್ತೀ? ರಾಜಪುತ್ರರೊಬ್ಬರನ್ನೇ ಕುಳ್ಳಿರಿಸಿ, ನಾವು ಸುಖದಿಂದ ನಿದ್ದೆ ಮಾಡಿದ ಅಪರಾಧಕ್ಕಾಗಿ ದೇವರು ನಮ್ಮಿಬ್ಬರನ್ನೂ ಶಿಕ್ಷಿಸಿರುತ್ತಾನೆ" ಎಂದು ಹೇಳಿ, ಪದ್ಮನಯನೆಯು ಮನಸ್ಸಿನಲ್ಲಿ ವಿಚಾರಮಾಡಿದಳೇನಂದರೆ— "ರಾಜಪುತ್ರರು ಬಹಳಮಾಡಿ ಗಿಳಿಯನ್ನು ಹೊರಗೆ ಬಿಟ್ಟಿರಬಹುದು; ಅದು ಅವರ ಕೈಮೀರಿ ಹೋಗಿದ್ದರೂ ಹೋಗಿರಬಹುದು; ಆದರೆ ನನಗಿಂತಲೂ ಆ ಗಿಳಿಯೇನು ಅವರಿಗೆ ಹೆಚ್ಚಿನದಲ್ಲ. ಅರಣ್ಯದಲ್ಲಿ ನನ್ನನ್ನು ಬಿಟ್ಟು ಗಿಳಿಯ ಬೆನ್ನು ಹತ್ತಿ ಹೋಗಲಿಕ್ಕೆ ಅವರೇನು ತಿಳಿಗೇಡಿಗಳೇ? ಛೆಛೆ, ಹೀಗೆ ಹೇಗಾದೀತು? ಹೊತ್ತು ಮುಣುಗುವದರೊಳಗಾಗಿ ರಾಜಪುತ್ರರು ಎಲ್ಲಿದ್ದರೂ ಬಂದೇ ಬರುವರು. ಇಂಥ ಭಯಂಕರವಾದ ನಿರ್ಜನ ಪ್ರದೇಶದಲ್ಲಿ, ಅಬಲೆಯರಾದ ನಮ್ಮಿಬ್ಬರನ್ನೇ ಬಿಟ್ಟು ಹೋಗಲಿಕ್ಕೆ ಅವರ ಕಾಲುಗಳಾದರೂ ಹೇಗೆ ಎದ್ದಾವು? ನಾವು ಸುಮ್ಮನೆ ಮನಸ್ಸಿನಲ್ಲಿ ಇಲ್ಲದ್ದೊಂದು ಕುವಿಚಾರ ಮಾಡುತ್ತ ಕುಳಿತುಕೊಳ್ಳುವದು ಸರಿಯಲ್ಲ. ಸಮಾಧಾನದಿಂದ ಅವರ ಮಾರ್ಗಪ್ರತೀಕ್ಷೆ ಮಾಡುತ್ತ ಕುಳಿತುಕೊಳ್ಳಬೇಕು."

ಈ ಪ್ರಕಾರ ರಾಜಪುತ್ರಿಯು ಸಮಾಧಾನಮಾಡಿಕೊಂಡರೂ ಅವಳ ಜೀವಕ್ಕೆ ಸೊಗಸಾಗಲಿಲ್ಲ. ಹೊತ್ತು ಮುಣುಗುತ್ತ ಬಂದಹಾಗೆ ಅವಳ ಮನಸ್ಸು ಹೆಚ್ಚು ಹೆಚ್ಚು ಅಸಮಾಧಾನಪಡುತ್ತ ಹೋಯಿತು. ಹೊತ್ತು ಮುಳುಗಿ ಕತ್ತಲಾದರೂ ಕಮಲಾಕ್ಷನು ಬಾರದ್ದನ್ನು ನೋಡಿ ಅವಳು, ದುಃಖದಿಂದ ಮೈಮರೆತುಬಿದ್ದಳು. ಕೂಡಲೆ ಸುಮಧ್ಯಮೆಯು ಶೀತೋಪಚಾರಗಳಿಂದ ಆಕೆಯನ್ನು ಎಚ್ಚರಗೊಳಿಸಿದಳು. ನಿಶ್ಶಬ್ದವಾದ ಅರಣ್ಯದಲ್ಲಿ ಕತ್ತಲೆಯು ಸದ್ದಿಲ್ಲದೆ ಹಬ್ಬಿ, ಒಬ್ಬರ ಮೋರೆಯು ಮತ್ತೊಬ್ಬರಿಗೆ ಕಾಣದಹಾಗಾಯಿತು! ಸುತ್ತುಮುತ್ತಲಿನ ಗಿಡಗಳಲ್ಲಿ ಒಂದು ಜಾತಿಯ ಹುಳಗಳು "ಜಿರ್ ಜಿರ್" ಎಂದು ಶಬ್ದ ಮಾಡಹತ್ತಿದವು! ಗೂಗೆಗಳ ಅಮಂಗಲವಾದ ಧ್ವನಿಗಳೂ, ಸಿಂಹ, ಹುಲಿ, ನರಿ ಮುಂತಾದ ವನ್ಯ ಮೃಗಗಳ ಭಯಂಕರವಾದ ಸಬ್ದಗಳೂ ಕೇಳಹತ್ತಿದವು! ಎಡಬಲಗಳಲ್ಲಿ ಹುಳ-ಹುಪ್ಪಡಿಗಳು "ಸಳ ಸಳ" ಓಡಾಡಹತ್ತಿದವು! ತೊಗಲಬಾವುಲಿ, ಗೂಗೆ ಮುಂತಾದ ರಾತ್ರಿಯಲ್ಲಿ ಸಂಚಾರ ಮಾಡುವ ಪಕ್ಷಿಗಳು "ಫರ್ ಫರ್" ಎಂದು ರೆಕ್ಕೆಗಳ ಸಪ್ಪಳಮಾಡುತ್ತ ಒಂದು ಗಿಡದಿಂದ ಮತ್ತೊಂದು ಗಿಡಕ್ಕೆ ಹಾರಹತ್ತಿದವು. ವಾಚಕರೇ, ಇಂಥ ಪ್ರಸಂಗ

ದಲ್ಲಿ ಭೀರುಗಳಾದ ಆ ಅಬಲೆಯರ ಸ್ಥಿತಿಯು ಏನಾಗಿರಬಹುದೆಂಬವನ್ನು ನೀವೇ ವಿಚಾರಮಾಡತಕ್ಕದ್ದು. ಅದನ್ನು ವರ್ಣಿಸುವ ಯೋಗ್ಯತೆಯು ನನಗಿಲ್ಲ. ಸುತ್ತುಮುತ್ತು ಏನಾದರೂ ಸಪ್ಪಳವಾದಕೂಡಲೆ ಭಯಭ್ರಾಂತರಾದ ಆ ಪ್ರಮದೆಯರು ಕಮಲಾಕ್ಷನೇ ಬಂದನೆಂದು ತಿಳಿದು ನಾಲ್ಕೂಕಡೆಗೆ ನೋಡಲು, ನಿರಾಶಪಟ್ಟು ಅವರ ಮನಸ್ಸು ಮತ್ತಿಷ್ಟು ನೋಯುವದು. ಭಯದಮೂಲಕ ಗಟ್ಟಿಯಾಗಿ ಉಸುರುಸಹ ಬಿಡದೆ, ಆಕಳ ಕರುವು ಮುಚ್ಚಂಜೆಯಲ್ಲಿ ತನ್ನ ತಾಯಿಯ ಕಾಲಸಪ್ಪಳವನ್ನಾಲಿಸುವಂತೆ, ನಮ್ಮ ಪದ್ಮನಯನಾ—ಸುಮಧ್ಯಮೆಯರು ಕಮಲಾಕ್ಷನ ಕಾಲಸಪ್ಪಳವನ್ನಾಲಿಸುತ್ತಿದ್ದರು. ಇದರಿಂದ ಅವರಿಗೆ ಅರಣ್ಯದೊಳಗಿನ ಭಯಂಕರವಾದ ಸಣ್ಣ ದೊಡ್ಡ ಸಪ್ಪಳಗಳು ಸ್ಪಷ್ಟವಾಗಿ ಕೇಳಹತ್ತಲು, ಅವರು ಮತ್ತಿಷ್ಟು ಭಯಪಡುತ್ತಿದ್ದರಲ್ಲದೆ, ಹೆಚ್ಚಿನ ಪ್ರಯೋಜನವೇನೂ ಆಗುತ್ತಿದ್ದಿಲ್ಲ.

ಪದ್ಮನಯನೆಯು ಕಡೆಗೆ ನಿರಾಶೆಪಟ್ಟು, ಭಯವನ್ನು ಬಿಟ್ಟು, ದುಃಖದಿಂದ ಆಕ್ರೋಶಮಾಡಹತ್ತಿದಳು. ಆಗ ಸುಮಧ್ಯಮೆಯು ಅವಳನ್ನು ಎದೆಗವಚಿಕೊಂಡು ಸಮಾಧಾನ ಮಾಡತೊಡಗಲು, ಪದ್ಮನಯನೆಯು—"ಸುಮಧ್ಯಮೇ, ಹತಭಾಗ್ಯಳಾದ ಈ ಪದ್ಮನಯನೆಗೆ ಇಷ್ಟುಯಾಕೆ ಉಪಚಾರ ಮಾಡುತ್ತೀ? ದುಃಖದಿಂದ ಕೊರಗುತ್ತ ಸಾಯುವದಕ್ಕಿಂತ ಒಮ್ಮೆಲೆ ಪ್ರಾಣಹೋದರೆ ಲೇಸಾಗುವದು. ನನ್ನದುರ್ದೈವವನ್ನು ಎಷ್ಟೆಂತವರ್ಣಿಸಲಿ! ನನ್ನ ಘೋರವಾದ ದುಃಖವು ರಾಜಪುತ್ರರಿಂದ ದೂರವಾಗಿ, ನಾನು ಅವರ ಸಮಾಗಮಸುಖವನ್ನನುಭವಿಸುತ್ತಿರುವಷ್ಟರಲ್ಲಿಯೇ, ನನ್ನ ಕೆಟ್ಟದೈವವು ಅದಕ್ಕೆ ವಿಘ್ನತಂದಿತು. ಇಲ್ಲ; ಸುಖಾನುಭವವೇ ನನ್ನ ದೈವದಲ್ಲಿಲ್ಲ. ನನ್ನ ಮೃತ್ಯುರೂಪವಾದ ಗಿಳಿಯು ಎಲ್ಲಿಕುಳಿತಿತ್ತೋ, ಅದರಮೇಲೆ ನನ್ನ ಪ್ರೇಮವು ಅಷ್ಟು ಯಾಕೆ ಬೆಳೆದಿತ್ತೊ ತಿಳಿಯದು. ಅಯ್ಯೋ! ಎಷ್ಟು ಜನರು ಗಿಳಿಯನ್ನು ಸಾಕುವದಿಲ್ಲ? ಅವರಿಗೆಲ್ಲ ಇದೇಪ್ರಕಾರದ ಭವಣೆಯು ಆಗುತ್ತದೇನು? ಗಿಳಿಯೇನು ಮಾಡೀತು? ನನ್ನ ಪ್ರಾರಬ್ಧವು! [ದೈನ್ಯದೊಡನೆ ಏಕದೃಷ್ಟಿಯಿಂದ ನೋಡಿ ಕಣ್ಣೀರು ಸುರಿಸುತ್ತ]—ಅಯ್ಯೋ ದೈವವೇ! ಸವಿಮಾತುಗಳಿಂದ ಮನಸ್ಸನ್ನು ಆನಂದಗೊಳಿಸುವ ಕೆಟ್ಟ ಗಿಳಿಗಾಗಿ, ಎಲ್ಲರೀತಿಯಿಂದಲೂ ಮನಸ್ಸನ್ನು ಆನಂದಗೊಳಿಸುವ ರಾಜಪುತ್ರರೆಂಬ ಅರಗಿಳಿಯನ್ನು ಕಳಕೊಂಡೆನಲ್ಲ!! ಇನ್ನು ಮುಂದೆ ನನ್ನ ಗತಿ

ಯೇನು? ಎಷ್ಟು ಮಾಡಿದರೂ ನನ್ನಸ್ಥಿತಿಯು ಮೊದಲಿನ ಮನೆಗೇ ಬಂದಿತು. ಹಾ! ರಾಜಪುತ್ರಾ, ಮನಮೋಹನಾ, ಈ ಅನಾಥಳ ಗತಿಯನ್ನು ಚಿಂತಿಸದೆ ಕಠಿಣ ಹೃದಯರಂತೆ ನನ್ನನ್ನು ಅಗಲಿ ಹೋದದ್ದು ಯೋಗ್ಯವೆ? ನನ್ನ ಸಲುವಾಗಿ ನೀನು ಬಹಳ ಕಷ್ಟಪಟ್ಟು, ದೊಡ್ಡ ದೊಡ್ಡ ಸಂಕಟಗಳಿಂದ ಮುಕ್ತನಾದೆ; ಆದರೆಉಪಯೋಗವೇನು? ಕಡೆಗೂ ಈ ನೀಚಳಾದ ಪದ್ಮನಯನೆಯು ನಿನಗೆ ದುಃಖಕೊಡುವದಕ್ಕೆ ಟೊಂಕಕಟ್ಟಿಕೊಂಡು ನಿಂತಿದ್ದಾಳೆ; ನೀನಾದರೂ ಏನುಮಾಡಿ. [ದುಃಖದ ಆವೇಶದಿಂದ] ಛೇ, ಅಂಥ ಕ್ರೂರನಾದ ಮೇಘನಾದ ದೈತ್ಯನ ಸಾಮರ್ಥ್ಯವನ್ನು ಲೆಕ್ಕಿಸದ ವೀರನು ನೀನು, ನನ್ನಂಥ ಅಬಲೆಯ ಪ್ರಯತ್ನಕ್ಕೆ ಒಳಗಾಗುತ್ತೀಯಾ? ಅರಗಳಿಗೆಯಾದರೂ ನನ್ನನ್ನು ಅಗುಲದವನು ಇಷ್ಟು ಹೊತ್ತಿನವರೆಗೂ ಯಾಕೆ ತಡೆದಿರುತ್ತೀ? ಮರೆಗೆ ನಿಂತು ನನ್ನ ಉಪಹಾಸಮಾಡಬೇಕೆಂದು ನೀನು ಯೋಚಿಸಿದ್ದರೆ ನಿನ್ನ ಕೋರಿಕೆಯು ನಿಶ್ಚಯವಾಗಿ ಕೈಗೂಡಿತು. ನೀನು ಇಲ್ಲದ್ದರಿಂದ ನಾನು ಭ್ರಮಿಷ್ಠಳೂ, ಶೋಕಮಗ್ನಳೂ ಆಗುವದೇ ನಿಜವು. ಹಿಗ್ಗುವ ಪದಾರ್ಥವನ್ನು ಹರಿಯುವವರೆಗೆ ಜಗ್ಗಬಾರದು. ಸಾಕು; ದುಃಖಾಗ್ನಿಯು ಸಂತಾಪಗೊಳಿಸುತ್ತದೆ. ನಿನ್ನ ದರ್ಶನರೂಪವಾದ ಜಲದಿಂದ ಅದನ್ನು ಶಾಂತಮಾಡು. ಅಯ್ಯೋ! ಪ್ರಿಯಾ, ಕತ್ತಲಾಯಿತು. ಇದೇ ಹೊತ್ತಿನಲ್ಲಿ ದಿನಾಲು ನಾನೂ ನೀನೂ ಕೂಡಿ, ಗುಹೆಯೊಳಗಿದ್ದ ಮಂದಿರದಲ್ಲಿ ತರತರದ ವಾದ್ಯಗಳನ್ನು ಬಾರಿಸುತ್ತ, ವಿನೋದಮಾಡುತ್ತ ಆನಂದದಿಂದ ಕಾಲಕಳೆಯುತ್ತಿದ್ದಿಲ್ಲವೇ? ಹಾ! ಪರಮೇಶ್ವರಾ, ಈ ಅನಾಥಳ ಮೇಲೆ ಇಷ್ಟು ಯಾಕೆ ಮುನಿದೆ!

ಈ ಪ್ರಕಾರ ರಾಜಪುತ್ರಿಯು, ಶೋಕಮಾಡುತ್ತ ಕುಳಿತಿರಲು, ಮಧ್ಯರಾತ್ರಿಯಾಯಿತು. ಅಷ್ಟರಲ್ಲಿ ಒಂದು ಭಯಂಕರವಾದ ಸರ್ಪವು ಭೋರ್ಗರೆಯುತ್ತ ಆವಳ ಸಮೀಪಕ್ಕೆ ಬಂದಿತು. ಆದರೆ ಆವಳು ದುಃಖದಿಂದ ಜೀವದ ಆಶೆ ಬಿಟ್ಟವಳಾದಕಾರಣ, ತನ್ನಲ್ಲಿಧನುರ್ಬಾಣಗಳೂ, ಹೊಡೆಯುವ ಸಾಮರ್ಥ್ಯವೂ ಇದ್ದರೂ ಮನಃಪೂರ್ವಕವಾಗಿಯೇ ಆ ಸರ್ಪವನ್ನು ಬರಗೊಟ್ಟಳು. ಸರ್ಪದ ಪ್ರಚಂಡವಾದ ಫೂತ್ಕಾರವೂ, ಕೆಂಡದಂತೆ ಹೊಳೆಯುತ್ತಿದ್ದ ಆದರ ಕಣ್ಣುಗಳೂ ಸುಮಧ್ಯಮೆಯನ್ನು ಮೂರ್ಛೆಗೊಳಿಸಿದವು. ಸರ್ಪವು ರಾಜಪುತ್ರಿಯನ್ನು ತಡವದೆ ಸಮೀಪದಲ್ಲಿ ಮೈ ಮರೆತು ಬಿದ್ದಿದ್ದ ಸುಮಧ್ಯಮೆಯನ್ನು ಮೆಲ್ಲಮೆ

ಲ್ಲನೆ ನುಂಗಹತ್ತಿತು. ಪದ್ಮನಯನೆಯು ಪತಿಯಧ್ಯಾನದಲ್ಲಿ ಮಗ್ನಳಾಗಿದ್ದುದರಿಂದ ತನ್ನ ದಾಸಿಯು ಪ್ರಾಣಸಂಕಟದಲ್ಲಿ ಬಿದ್ದದ್ದು ಅವಳ ಲಕ್ಷ್ಯಕ್ಕೆ ಬರಲಿಲ್ಲ. ಕಡೆಯಲ್ಲಿ ಸರ್ಪವು ಸುಮಧ್ಯಮೆಯನ್ನು ಪೂರ್ಣವಾಗಿ ನುಂಗಿ, ಒಂದು ಮರಕ್ಕೆ ಸುತ್ತುಹಾಕಲು, ಅದರ ಹೊಟ್ಟೆಯಲ್ಲಿ ಸುಮಧ್ಯಮೆಯ ಎಲುವುಗಳು ಮುರಿದು ಚೂರು-ಚೂರಾದವು. ಆ ಮೇಲೆ ಸರ್ಪವು ಭಯಂಕರವಾದ ಧ್ವನಿಮಾಡುತ್ತ, ಆ ಎಲುವುಗಳನ್ನು ಕಾರಹತ್ತಲು, ರಾಜಪುತ್ರಿಯು ಬೆದರಿ ಸುತ್ತು ಮುತ್ತು ನೋಡಹತ್ತಿದಳು. ಆಗ ತನ್ನ ದಾಸಿಯು ಎಲ್ಲಿಯೂ ಕಣ್ಣಿಗೆ ಬೀಳದ್ದನ್ನೂ, ಸರ್ಪದ ಬಾಯಿಂದ ಹೊರಬೀಳುವ ಶುಭ್ರವಾದ ಎಲುವುಗಳನ್ನೂ ನೋಡಿ, ಸುಮಧ್ಯಮೆಯು ಸರ್ಪಕ್ಕೆ ಆಹುತಿಯಾದಳೆಂದು ತಿಳಿದು ಆ ರಾಜಪುತ್ರಿಯು ಬಹಳ ವ್ಯಸನಪಟ್ಟಳು. ಅವಳು ದೇವರನ್ನು ಕುರಿತು—"ಪರಮೇಶ್ವರಾ, ಪ್ರಾಣಕ್ಕಿಂತಲೂ ಅತ್ಯಧಿಕನಾದ ಪತಿಯನ್ನೂ, ಅತಿಪ್ರಿಯಳಾದ ದಾಸಿಯನ್ನೂ ಕಳಕೊಂಡು, ಈ ಚಾಂಡಾಲಿಯಾದ ಪದ್ಮನಯನೆಯು ಜೀವದಿಂದಿರುವದು ನಿನಗೆ ನ್ಯಾಯ್ಯವಾಗಿ ತೋರುತ್ತದೋ? ಬೇಗನೆ ನನ್ನನ್ನು ಈ ಶೋಕಸಾಗರದಿಂದ ಮುಕ್ತಳಾಗಮಾಡು. ಇನ್ನೂ ನಾನು ಯಾವ ಯಾವ ಸಂಕಟಗಳನ್ನನುಭವಿಸಬೇಕಾಗಿದೆಯೆಂಬದನ್ನು ನೀನೇ ಬಲ್ಲಿ. ನನ್ನ ಸುಖವು ಹಾಳಾಯಿತೆಂದು ನಾನು ಇಷ್ಟು ಶೋಕಿಸುವದಿಲ್ಲ. ನಿನ್ನ ಪ್ರಸಾದದಿಂದ ದೊರೆತಿದ್ದ ದುರ್ಲಭನಾದ ಪತಿಯನ್ನು ವಿಶ್ವಾಸದಿಂದ ಸೇವಿಸದೆ, ಆತನನ್ನು ಹಲವುತರದ ಸಂಕಟಗಳಿಗೆ ಗುರಿಮಾಡಿ, ಪರಂಪರೆಯಿಂದ ಬಳಲಿಸಿ, ಕಡೆಯಲ್ಲಿ ಕೆಟ್ಟಗಿಳಿಯ ನೆವದಿಂದ ಆತನನ್ನು ದೇಶಭ್ರಷ್ಟನಾಗಮಾಡಿದ್ದಕ್ಕಾಗಿ ದುಃಖಿಸುತ್ತೇನೆ."

ಈ ಪ್ರಕಾರ ರಾಜಪುತ್ರಿಯು ದೇವರಿಗೆ ಮೊರೆಯಿಟ್ಟಳು! ದುಃಖವೇಗವನ್ನು ತಾಳಲಾರದೆ ಅವಳು ಮನದಣಿಯೆ ಅತ್ತು ದುಃಖವನ್ನು ಕೆಲಮಟ್ಟಿಗೆ ಕಡಿಮೆಮಾಡಿಕೊಂಡಳು. "ದೈವವು ಪ್ರತಿಕೂಲವಾಯಿತೆಂದರೆ ಸಂಕಟಗಳು ಮೇಲಿಂದಮೇಲೆ ಒದಗುತ್ತವೆ." ಪದ್ಮನಯನೆಯು ಈ ಪ್ರಕಾರ ಶೋಕಮಾಡುತ್ತ ಒಂದು ಬಂಡೆಯ ಮೇಲೆ ಕುಳಿತಿರಲು, ಆ ಬಂಡೆಯ ಕೆಳಗೆ ಮತ್ತೊಂದು ಹಾವು ಮಲಗಿತ್ತು. ಅದನ್ನು ಅವಳು ತನ್ನ ದುಃಖದಲ್ಲಿ ನೋಡಿದ್ದಿಲ್ಲ. ರಾಜಪುತ್ರಿಯ ಇಳಿಬಿದ್ದ ಕಾಲನ್ನು, ಸರ್ಪವು ಹಿಡಿದು ಮೆಲ್ಲನೆ ನುಂಗಹ

ತ್ರಿತು. ರಾಜಪುತ್ರಿಯು ಗಾಬರಿಯಾಗಿ ಕೆಳಗೆ ಬಗ್ಗಿನೋಡಲು, ಬೃಹದ್ದೇಹಿ ಯಾದ ಸರ್ಪವು ಅವಳ ಕಣ್ಣಿಗೆ ಬಿತ್ತು. ಎಂಥ ದುಃಖದಲ್ಲಿಯೇ ಆಗಲಿ, ಪ್ರಾಣಿಗಳಿಗೆ ಜೀವದ ಮೇಲಿನ ಬಲವಾದ ಆಶೆಯು ತಪ್ಪುವದಿಲ್ಲ. ಅದರಂತೆ ಅನಾಥಳಾದ ಪದ್ಮನಯನೆಯು ಅಂಥ ದುಃಸ್ಥಿತಿಯಲ್ಲಾದರೂ ಮೋರೆಯನ್ನು ಮೇಲಕ್ಕೆತ್ತಿ—"ದೇವರೆ, ಈಗ ನನ್ನನ್ನು ಈ ಸಂಕಟದಿಂದ ಪಾರಮಾಡ ಲಿಕ್ಕೆ ನಿನ್ನ ಹೊರತು ಯಾರೂ ಇಲ್ಲ, "ಎಂದು ಪ್ರಾರ್ಥಿಸಿದಳು; ಆದರೆ ದುಃಸ ಹವಾದ ದುಃಖವು ಅವಳ ಮನಸ್ಸನ್ನು ಕೂಡಲೆ ತಿರುಗಿಸಿತು. ಆಗ ರಾಜ ಪುತ್ರಿಯು ತನ್ನ ಮನಸ್ಸಿನಲ್ಲಿ—"ನಾನು ಎಂಥ ತಿಳಿಗೇಡಿಯು! ಈ ಅಪರಿ ಹಾರ್ಯವಾದ ಸಂಕಟದೊಳಗಿಂದ ನಾನು ಪಾರಾಗಬಹುದೇ? ಒಂದು ವೇಳೆ ಪಾರಾದರೂ ಈ ಸ್ಥಿತಿಯಲ್ಲಿ ನಾನು ಬದುಕಿ ಮಾಡುವದೇನು? ಮರಣದ ಹೊರತು ದುಃಖನಿವಾರಣೋಪಾಯವು ನನಗೆ ಮತ್ತೊಂದಿಲ್ಲ. ಮರಣವು ಪ್ರತ್ಯ ಕ್ಷವಾಗಿ ಬಾಯ್ದೆರೆದು ನಿಂತಿರುತ್ತದೆ. ಹೀಗಿರಲು, ನಾನು ದೇವರಿಗೆ ಮೊರೆ ಯಿಟ್ಟದ್ದು ಹುಚ್ಚುತನವು. ನನ್ನ ಕರ್ಮಕ್ಕೆ ದೇವರೇನು ಮಾಡುವನು? ಯಾರೂ ಗಿಳಿಯನ್ನು ಸಾಕುವದಿಲ್ಲವೇ? ನನ್ನ ತಂದೆಯ ಮನೆಯಲ್ಲಿ ಎಷ್ಟೋ ಗಿಳಿಗಳು ಇರುತ್ತವೆ; ಆದರೆ ಅವುಗಳಲ್ಲಿ ಒಂದಾದರೂ ಇಂಥ ದುರ್ಘಟ ಪ್ರಸಂಗವನ್ನು ತಂದಿಲ್ಲ. ಇದಲ್ಲದೆ ಪಕ್ಷಿಗಳಿಗೆ ವಿಚಾರಶಕ್ತಿಯೂ, ಸ್ವತಂತ್ರ ವಾಗಿ ಮನುಷ್ಯರಂತೆ ಮಾತಾಡುವ ಸಾಮರ್ಥ್ಯವೂ ಇದ್ದದ್ದನ್ನು ನಾನು ಎಲ್ಲಿಯೂ ಕೇಳಿಲ್ಲ. ಇದರಿಂದ ವಿಚಾರಮಾಡಲು, ನಾನು ಸಾಕಿದ್ದು ಗಿಳಿ ಯಲ್ಲ; ನನ್ನ ದುರ್ದೈವವು ಗಿಳಿಯರೂಪದಿಂದ ನನ್ನಲ್ಲಿ ವಾಸಮಾಡಿ, ಕಡೆಗೆ ನನಗೆ ಈ ಭವಣಿಯನ್ನುಂಟುಮಾಡಿತು." ಈ ಪ್ರಕಾರ ರಾಜಪುತ್ರಿಯು ವಿಚಾರಮಾಡಿ, ಅಜಗರವನ್ನು ಕುರಿತು—"ಉರಗೇಂದ್ರನೇ, ನಿನಗೆ ನಾನು ಪ್ರತಿಬಂಧ ಮಾಡುವದಿಲ್ಲ. ಯಥೇಚ್ಛವಾಗಿ ನನ್ನನ್ನು ನುಂಗಿಬಿಡು, ನಾನು ನಿನ್ನ ಹೊಟ್ಟೆಯಲ್ಲಿ ಸಮಾಧಾನದಿಂದ ಜೀವಬಿಡುವೆನು. ದಯಮಾಡಿ ಬೇಗನೆ ನನ್ನನ್ನು ನುಂಗು." ಈ ಪ್ರಕಾರ ಪದ್ಮನಯನೆಯು, ತನಗೆ ಒದಗಿದ ಸಂಕಟ ವನ್ನು ನೀಗುವದಕ್ಕಾಗಿ ಮರಣಕ್ಕೆ ಸಿದ್ಧಳಾಗಿ ಅಜಗರನ ಬಾಯೊಳಗೆ ಕಾಲು ಸಡಿಲುಬಿಟ್ಟು ಕಣ್ಣುಮುಚ್ಚಿಕೊಂಡು ಪತಿಯನ್ನು ನೆನಿಸುತ್ತ, ಸಮಾಧಾನ ದಿಂದ ಕುಳಿತುಕೊಂಡಳು. ಆದರೆ ಪರಮೇಶ್ವರನಿಗೆ ಅವಳ ಮರಣವು

ಮಾನ್ಯವಾಗಲಿಲ್ಲೆಂದು ತೋರುತ್ತದೆ. ಅಷ್ಟರಲ್ಲಿ ಒಬ್ಬ ರಾಕ್ಷಸನು ಅಜಗರವನ್ನು ಕೊಂದು, ಪದ್ಮನಯನೆಯನ್ನು ಸಾವಿನ ದವಡೆಯೊಳಗಿಂದ ಬಿಡಿಸಿದನು.

ರಾಜಪುತ್ರಿಯು ತನ್ನ ಕಾಲ ಎಳತವು ಒಮ್ಮೆಲೆ ನಿಂತದ್ದನ್ನು ತಿಳಿದು ಬೆರಗಾಗಿ ಕಣ್ದೆರೆದು ನೋಡಲು, ಮೇಘನಾದನನ್ನು ಹೋಲುವ ಒಬ್ಬ ರಾಕ್ಷಸನು ಅವಳ ಕಣ್ಣಿಗೆ ಬಿದ್ದನು. ಕೂಡಲೆ ಅವಳು ಮೇಘನಾದನೇ ಬಂದ ನೆಂಬ ಭಯದಿಂದ ಮೂರ್ಛೆಹೊಂದಿದಳು. ಕೆಲವು ಹೊತ್ತಿನ ಮೇಲೆ ಪದ್ಮನ ಯನೆಯು ಚೇತರಿಸಿ ಎದ್ದು ಕುಳಿತುಕೊಳ್ಳಲು, ರಾಕ್ಷಸನು ಕೋಪಾವಿಷ್ಟ ನಾಗಿ ನುಡಿದನೇನಂದರೆ —" ವಿಶ್ವಾಸಘಾತಕಳೇ, ನನ್ನ ಅಣ್ಣನನ್ನು ಮೋಸ ದಿಂದ ಕೊಲ್ಲಿಸಿ ನೀನು ನಿರಾತಂಕಳಾದೆಯಾ? ಇನ್ನು ಹೇಗೆ ನನ್ನ ಕೈಯೊಳ ಗಿಂದ ಪಾರಾಗಿ ಹೋಗುತ್ತೀ ಹೋಗು. ನಿನಗೆ ಹಲವು ತರದ ಸುಖಗಳನ್ನಿತ್ತ ನಿನ್ನ ಪತಿಯಾದ ಆ ನೀಚ ಕಮಲಾಕ್ಷನ ಕೈಯಿಂದ ನನ್ನನ್ನು ಕೊಲ್ಲಿಸು. ಉದ್ಧಟಳೇ, ನಿನ್ನ ಪ್ರಾಣವನ್ನು ಇಷ್ಟರಲ್ಲಿ ಹರಣ ಮಾಡುತ್ತಿದ್ದೆನು. ಆದರೆ ನಿನ್ನ ಅಪರಾಧಕ್ಕೆ ಅದು ಸರಿಯಾದ ಶಿಕ್ಷೆಯಾಗುವದಿಲ್ಲೆಂದು ತಿಳಿದು ಬಿಟ್ಟಿದ್ದೇನೆ. ನನ್ನ ಅಣ್ಣನಾದ ಮೇಘನಾದನು ನಿನ್ನನ್ನು ತನ್ನ ಪ್ರಾಣ ಕ್ಕಿಂತಲೂ ಹೆಚ್ಚೆಂದು ತಿಳಿದು ನೀನು ಬಯಸಿದ ಬಯಕೆಗಳನ್ನೆಲ್ಲ ಪೂರ್ಣ ಮಾಡುತ್ತಿರಲು, ಅವನಿಗೆ ಅಪಾಯಕರವಾದ ಬಯಕೆಗಳನ್ನು ಬಯಸಿದೆಯಾ? ಒಳ್ಳೇದು, ನಿನ್ನ ವಿಶ್ವಾಸಘಾತಕತನಕ್ಕೂ, ಕ್ರೂರತನಕ್ಕೂ ಯೋಗ್ಯವಾದ ಶಿಕ್ಷೆಯನ್ನು ಮಾಡುವದಕ್ಕೆ ಮೇಘನಾದನ ತಮ್ಮನಾದ ಈ ಸಿಂಹನಾದನು ಸ ಮರ್ಥನಿದ್ದಾನೆ. ನೀನು ನನ್ನ ಅಣ್ಣನಿಗೆ ಮಾಡಿದ ಮೋಸದ ಮುಯ್ಯಕ್ಕಾಗಿ ನಾನು ಗಿಳಿಯಾಗಿ ನಿನ್ನನ್ನು ಮೋಸಗೊಳಿಸಿದೆನು; ಸುಮಧ್ಯಮೆಯ ಹೊರ ತು ಉಳಿದ ದಾಸಿಯರನ್ನೂ, ನಿಮ್ಮ ಕುದುರೆಗಳನ್ನೂ ಸ್ಥಾನಭ್ರಷ್ಟ ಮಾಡಿಸಿ ದೆನು. ನಮ್ಮ ರಾಕ್ಷಸಕುಲಕ್ಕೆ ಮೃತ್ಯುಸ್ವರೂಪವಾಗಿದ್ದ ಈ ಪ್ರಚಂಡಧನುಸ್ಸ ನ್ನು ಅಪಹರಿಸಿದೆನು. ಆ ಧನುಸ್ಸಿನ ಭಯದಿಂದಲೇ ನಾನು ಇಷ್ಟು ಕಷ್ಟಪ ಡಬೇಕಾಯಿತು. ನೀನು ಮನಃಪೂರ್ವಕವಾಗಿ ಕೊಟ್ಟ ಹೊರತು, ಅಥವಾ ಉದಾಸೀನಭಾವದಿಂದ ಅದನ್ನು ಚಲ್ಲಿಕೊಟ್ಟ ಹೊರತು ಅದು ನನ್ನ ಕೈಸೇ ರುವ ಹಾಗಿದ್ದಿಲ್ಲ. ಇಗೋ ನೋಡು, ಪತಿಯ ವಿಯೋಗ ದುಃಖದಿಂದ ನೀನು ಅದನ್ನು ಚಲ್ಲಿಕೊಟ್ಟಿರಲು, ನಾನು ಸ್ವೀಕರಿಸಿದ್ದೇನೆ. ಇನ್ನು ಮೇಲೆ ನಿನ್ನ ವಿಷಯ

ವಾಗಿ ನನಗೆ ಎಳ್ಳಷ್ಟು ಭಯವಿಲ್ಲ. ನಿನ್ನ ಪ್ರಾಣಪ್ರಿಯನಾದ ಕಮಲಾಕ್ಷನನ್ನು ಈ ಮೊದಲೇ ಕೊಂದೆನು. ಇನ್ನು ಮೇಲೆ ನನ್ನ ನಿಜರೂಪದಿಂದ ನಿನ್ನನ್ನು ಹಲವು ಬಗೆಯಾಗಿ ಪೀಡಿಸಿ, ಮಾನಭಂಗ ಮಾಡಿ, ಅನಸ್ಯ ವೇದನೆಗಳನ್ನನುಭವಿಸಹಚ್ಚುತ್ತೇನೆ. ಆದರೆ ಈ ಎಲ್ಲ ಕೃತಿಗಳು ಶೋಣಿತಪುರದಲ್ಲಿ ಎಲ್ಲರ ಸಮಕ್ಷಮದಲ್ಲಿ ಆಗಬೇಕಾಗಿರುವದರಿಂದ ಇಲ್ಲಿ ನಾನು ನಿನ್ನ ಕೂದಲು ಸಹ ಕೊಂಕಿಸುವದಿಲ್ಲ." ಎಂದು ಹೇಳಿ, ಸಿಂಹನಾದನು ಪದ್ಮನಯನೆಯನ್ನು ಬಲಾತ್ಕಾರದಿಂದ ಹರಣ ಮಾಡಿ, ಆಕಾಶದಲ್ಲಿ ಉಡ್ಡಾಣ ಮಾಡಿದನು. ಆಗ ರಾಜಪುತ್ರಿಗೆ ಒದಗಿದ ದುಃಖವನ್ನು ಪರಮೇಶ್ವರನೇ ಬಲ್ಲ. ಅವಳು ತನ್ನ ಮರಣಕ್ಕಾಗಿ ವ್ಯಸನಬಡುತ್ತಿದ್ದಿಲ್ಲ. ಮಾನಭಂಗ ಮಾಡುವೆನೆಂದೂ, ಕಮಲಾಕ್ಷನನ್ನು ಕೊಂದೆನೆಂದೂ ಸಿಂಹನಾದನು ಆಡಿದ್ದನ್ನು ಕೇಳಿ, ಅವಳಿಗೆ ಬಹಳ ವ್ಯಸನವಾಯಿತು. ಅವಳು ತನಗೆ ಮುಂದೆ ಒದಗಬಹುದಾದ ದುಃಖದ ಕಲ್ಪನೆ ಮಾಡಿ, ಮನದಲ್ಲಿ ಮರುಗುತ್ತ ಕಣ್ಣೀರು ಸುರಿಸುತ್ತಿದ್ದಳು. ಆಗ ಕಮಲಾಕ್ಷನೂ, ಸುಮುಖ್ಯಮೆಯೂ ರಾಜಪುತ್ರಿಯ ಕಣ್ಣಮುಂದೆ ಕಟ್ಟಿದಂತೆ ಆಗಿ, ಅವಳ ಶೋಕವು ವೃದ್ಧಿಂಗತವಾಯಿತು.

ಈ ಪ್ರಕಾರ ಸಿಂಹನಾದನು ಪದ್ಮನಯನೆಯನ್ನು ನಿಷ್ಕರುಣನಾಗಿ ಬಲಾತ್ಕಾರದಿಂದ ಹರಣಮಾಡಿ ಒಯ್ಯುತ್ತಿರಲು, ಮಾರ್ಗದಲ್ಲಿ ಉಗ್ರದಂಷ್ಟ್ರನೆಂಬ ಮತ್ತೊಬ್ಬ ರಾಕ್ಷಸನು ಅವನಿಗೆ ಎದುರಾದನು. ಉಗ್ರದಂಷ್ಟ್ರನು ಸಿಂಹನಾದನ ಓರಿಗೆಯವನಿದ್ದು, ಅವರಿಬ್ಬರೊಳಗೂ ತಮ್ಮ ತಮ್ಮ ಸಾಮರ್ಥ್ಯದ ಸಂಬಂಧದ ವೈರವು ಬಹಳ ದಿವಸಗಳಿಂದ ಇತ್ತು. ಅವರು ಎಷ್ಟೋ ಸಾರೆ ತಮ್ಮ ತಮ್ಮೊಳಗೆ ಯುದ್ಧ ಮಾಡಿದ್ದರೂ ಯಾವನೂ ಪರಾಜಿತನಾಗಿದ್ದಿಲ್ಲ. ಉಗ್ರದಂಷ್ಟ್ರನು ಸಿಂಹನಾದನನ್ನು ಕುರಿತು—“ಏನೋ, ಎಲ್ಲಿಗೆ ಹೋಗಿದ್ದಿ? ಬಹಳ ಅವಸರದಿಂದ ಹೊತ್ತುಕೊಂಡು ಹೋಗುವ ಪದಾರ್ಥವು ಯಾವದು? ಸ್ವಲ್ಪ ನಿಲ್ಲು; ನಿನ್ನ ಸಾಮರ್ಥ್ಯದ ಸೊಕ್ಕಿನಿಂದಲೇ ಮೆರೆಯಬೇಡ. ನಿನ್ನ ವೈರಿಯಾದ ಉಗ್ರದಂಷ್ಟ್ರನು ಎದುರಾದದ್ದನ್ನು ನೋಡು." ಅನ್ನಲು, ಸಿಂಹನಾದನು—“ನಾನು ಹೋಗುವದನ್ನು ತೆಗೆದುಕೊಂಡು ನೀನೇನು ಮಾಡುತ್ತೀ? ನಾನು ಹೊತ್ತುಕೊಂಡ ಪದಾರ್ಥವು ಏನಿದ್ದ ಭಾಗ್ಯವು ನಿನಗೇನು? ನಿನ್ನ ಮಾತಿನಿಂದ ನಿಂತುಕೊಳ್ಳಲಿಕ್ಕೆ ನಾನೇನು ಅಷ್ಟುರವನಲ್ಲ. ಉಗ್ರದಂಷ್ಟ್ರನ ವೈರವೂ, ಸಾಮರ್ಥ್ಯವೂ

ಬಹಳ ನಾರಿ ನನ್ನಿಂದ ಪರೀಕ್ಷಿಸಲ್ಪಟ್ಟಿವೆ. ಸುಮ್ಮನೆ ನಿನ್ನ ಹಾದಿಯ ಹಿಡಿದು ಹೋಗು." ಅನ್ನಲು, ಉಗ್ರದಂಷ್ಟ್ರನು ಸಿಂಹನಾದನ ಉದ್ಧಟತನದ ಬಿರಿಮಾತುಗಳಿಗಾಗಿ ಸಿಟ್ಟಾಗಿ ಕೂಡಲೆ ಅವನು ಆವೇಶದಿಂದ ಸಿಂಹನಾದನ ವಕ್ಷಸ್ಥಳಕ್ಕೆ ಕಸುವಿನಿಂದ ಒದ್ದನು. ಅದರಿಂದ ಸಿಂಹನಾದನು ಕೆರಳಿದ ಕೇಸರಿಯಂತೆ ಭಯಂಕರವಾದ ಧ್ವನಿಯಿಂದ ಗರ್ಜಿಸಿ, ಪದ್ಮನಯನೆಯನ್ನು ಒತ್ತಟ್ಟಿಗೆ ಕುಳ್ಳಿರಿಸಿ, ಉಗ್ರದಂಷ್ಟ್ರನ ಸಂಗಡ ಯುದ್ಧಕ್ಕೆ ನಿಂತನು.

ಪ್ರಾಯಸ್ಥರಾದ ಉಗ್ರದಂಷ್ಟ್ರ-ಸಿಂಹನಾದರು ಮದ್ದಾನೆಗಳಂತೆ ಮಲೆತು ನಿಂತು ಹೊಡೆದಾಡಿದರು. ನೆರೆಹೊರೆಯ ಮರಗಳೂ, ಕಲ್ಲು-ದುಂಡೆಗಳೂ, ಅವರ ಹೊಡೆದಾಟಕ್ಕೆ ನಾಲಿಲ್ಲ. ಅವರು ಒಮ್ಮೆ ಭುಜದಿಂದ ಭುಜಕ್ಕೆ ಹಾಯುವರು; ಒಮ್ಮೆ ಟಗರುಗಳಂತೆ ತಲೆಗಳಿಂದ ಕಾದಾಡುವರು; ಮತ್ತೊಮ್ಮೆ ಮಲ್ಲಯುದ್ಧದಿಂದ ಒಬ್ಬರನ್ನೊಬ್ಬರು ನೆಲಕ್ಕೆ ಅಪ್ಪಳಿಸುವರು. ಈ ಪ್ರಕಾರ ರಾಕ್ಷಸರು ಮೂರುತಾಸುಗಳವರೆಗೆ ಜಯಾಭಿಲಾಷೆಯಿಂದ ಛಲದೊಡನೆ ಕಾದಿದರೂ, ಅವರ ಜಯಾಪಜಯಗಳ ನಿರ್ಣಯವಾಗಲಿಲ್ಲ. ಅವರ ಭಯಂಕರವಾದ ಯುದ್ಧವನ್ನು ನೋಡಿ ಪದ್ಮನಯನೆಯು ಬೆರಗಾಗಿದ್ದಳು. ಅವಳು ಮನದಲ್ಲಿ ಆಲೋಚಿಸಿದಳೇನಂದರೆ—"ಈ ಖಲರು ಇಬ್ಬರೂ ಇಷ್ಟು ಛಲದಿಂದ ಕಾದುತ್ತಿರುವ ಕಾರಣ, ಇವರಲ್ಲಿ ಒಬ್ಬರಿಗಂತು ಮರಣವು ಒದಗುವದು ನಿಶ್ಚಯವೇ; ಆದರೆ ಯಾರು ಬದುಕಿದ ಭಾಗ್ಯವು ನನಗೇನು? ಹೇಗಿದ್ದರೂ ನನಗೆ ಒದಗುವ ಅಪಮಾನವು ದೂರವಾಗುವ ಸಂಭವವು ಇಲ್ಲ. ಬದುಕಿದವನು ನನ್ನ ರೂಪಕ್ಕೆ ಮೋಹಗೊಂಡು ಕೆಟ್ಟ ಹಾದಿಯನ್ನು ಹಿಡಿಯುವದು ನಿಶ್ಚಯವು! ಪರಮೇಶ್ವರಾ, ನನ್ನನ್ನು ಈ ಸಂಕಟದೊಳಗಿಂದ ಪಾರ ಮಾಡಲು ನೀನೇ ಸಮರ್ಥನು. ನೀನು ಅನಾಥರಿಗೆ ನಾಥನಲ್ಲವೆ?

ಈ ಪ್ರಕಾರ ರಾಜಪುತ್ರಿಯು ಪ್ರಸನಬಟ್ಟು ದೇವರನ್ನು ಮರೆ ಹೊಗುತ್ತಿರಲು, ಅವರಿಬ್ಬರೂ ರಾಕ್ಷಸರು ಯುದ್ಧ ಮಾಡುತ್ತ ಮಾಡುತ್ತ ಮಿತಿಮೀರಿ ಸಿಟ್ಟಿಗೆದ್ದು ಭಯಂಕರವಾಗಿ ಗರ್ಜಿಸಿ ಧನುಸ್ಸಿಗೆ ಬಾಣಗಳನ್ನು ಹೂಡಿ ಗುರಿನೋಡಿ ಒಬ್ಬರಮೇಲೊಬ್ಬರು ಬಿಟ್ಟರು. ಆಗ ಅವರಿಬ್ಬರ ಬಾಣಗಳು ಪರಸ್ಪರರ ಹೃದಯಕ್ಕೆ ತಗಲಿ ಇಬ್ಬರೂ ಭೂಮಿಯಮೇಲೆ ಬಿದ್ದು ಪ್ರಾಣ ಬಿಟ್ಟರು. ಆಗ ರಾಜಪುತ್ರಿಯು ತನಗೊದಗಿದ ಸಂಕಟದ ನಿವಾರಣವು ತನ್ನಿಂದ

ತಾನೇ ಆದದ್ದನ್ನು ನೋಡಿ ದೇವರನ್ನು ಕೊಂಡಾಡಿದಳು. ಮಾನಹಾನಿಯಾಗುವ ಪ್ರಸಂಗವು ತಪ್ಪಿದ್ದರಿಂದ ಅವಳಿಗೆ ಮೊದಲು ಸ್ವಲ್ಪ ಆನಂದವಾಯಿತು. ಆದರೆ ಪತಿಯ ವಿಯೋಗದ ಸ್ಮರಣವಾದಕೂಡಲೆ ಮಿತಿಮೀರಿ ವ್ಯಸನವಾಯಿತು. ಅವಳು ಮನದಲ್ಲಿ—"ನಾನು ಇನ್ನು ಪ್ರಾಣವನ್ನು ಯಾವ ಆಶೆಯಿಂದ ಇಡಬೇಕು? ಹೀಗೆ ದೆಸೆಗೇಡಿಯಾಗಿ ಬದುಕುವದಕ್ಕಿಂತ ಪ್ರಾಣತ್ಯಾಗ ಮಾಡಿಕೊಳ್ಳುವದೇ ತಕ್ಕದ್ದು. ನನ್ನ ದುಃಖದ ಭೋಗವು ಇನ್ನೂ ಮುಗಿದಂತೆ ತೋರುವದಿಲ್ಲ. ಇನ್ನೂ ಯಾವಯಾವ ಸಂಕಟಗಳನ್ನನುಭವಿಸಬೇಕಾಗಿದೆಯೋ ದೇವರೇ ಬಲ್ಲ. ಕಾಗೆಗಳು ಬೀದಿಯಲ್ಲಿ ಬಿದ್ದ ಮಾಂಸದ ಕರಣಿಯನ್ನು ಇಚ್ಛಿಸುವಂತೆ, ದುರ್ಜನರು ಅನಾಥ ಸ್ತ್ರೀಯನ್ನು ಇಚ್ಛಿಸುತ್ತಿರುವದರಿಂದ ಮಾನಹಾನಿಯ ಭಯವು ನನಗೆ ಮೇಲೆ ಮೇಲೆ ಒದಗತಕ್ಕದ್ದೇ; ಕಾರಣ ಇಂಥ ದುರವಸ್ಥೆಯಲ್ಲಿ ಬದುಕಿ ಸುಖವಿಲ್ಲ. ಅಪಮಾನವು ಮರಣಕ್ಕಿಂತ ಅಸಹ್ಯವಲ್ಲವೆ! ಎಂದು ಆಲೋಚಿಸಿ, ಆತ್ಮಘಾತಮಾಡಿಕೊಳ್ಳುವದನ್ನು ನಿಶ್ಚಯಿಸಿದಳು. ಆದರೆ ಅವಳು ಗರ್ಭಿಣಿ ಇದ್ದದ್ದರಿಂದ ಅವಳ ಮನಸ್ಸು ಆ ವಿಚಾರಕ್ಕೆ ಒಡಂಬಡಲಿಲ್ಲ. ಸೀತೆ, ಶಕುಂತಲೆ ಮುಂತಾದ ಸತಿಯರು, ಕೆಲವೊಂದು ಕಾರಣದಿಂದ ಪತಿಯ ನಿರಾಕರಣಕ್ಕೆ ಗುರಿಯಾಗಿ ಅನಾಥರಾದರೂ, ದೈವಸಹಾಯದಿಂದ ಅವರು ತಮ್ಮ ಗರ್ಭಭಾರವನ್ನು ಅನಾಯಾಸವಾಗಿ ಇಳಿಸಿಕೊಂಡು ಮುಂದೆ ಅಖಂಡವಾದ ಸುಖವನ್ನೂ, ಕೀರ್ತಿಯನ್ನೂ ಹೊಂದಿದ್ದು ಅವಳಿಗೆ ನೆನಪಾಯಿತು. ಹೊರತು ತಾನು ಆತ್ಮಘಾತ ಮಾಡಿಕೊಂಡರೆ ಗರ್ಭದಲ್ಲಿದ್ದ ಶಿಶುವಿನ ನಾಶವಾಗಿ, ಬಾಲಹತ್ಯದ ದೋಷವು ತನ್ನ ಪಾಲಿಗೆ ಬರುವದೆಂಬದನ್ನು ತಿಳಿದು ಆಕೆಯು ಪಾಪಕ್ಕೆ ಅಂಜಿ ಹಿಂದಕ್ಕೆ ಸರಿದಳು. ಈ ಮೇರೆಗೆ ಪದ್ಮನಯನೆಯು ಅಪತ್ಯವಾತ್ಸಲ್ಯದಿಂದ ಬದುಕುವ ಆಶೆಹಿಡಿದು, ಎಲ್ಲಿಯಾದರೂ ಜನವಸತಿಯುಳ್ಳ ಪ್ರದೇಶವು ಕಣ್ಣಿಗೆ ಬಿದ್ದರೆ ನೋಡಬೇಕೆಂದು ಯೋಚಿಸಿ, ಸುತ್ತುಮುತ್ತು ನೋಡಹತ್ತಿದಳು. ಆದರೆ ನೋಡಿದತ್ತೆಲ್ಲ ಭಯಂಕರವಾದ ಅರಣ್ಯವೇ ಕಣ್ಣಿಗೆ ಬೀಳುತ್ತಲಿದ್ದಿತೆ, ಜನವಸತಿಯ ಕುರುಹುಗಳೇನೂ ಕಾಣಲಿಲ್ಲ. ಮುಂದೆ ಬರಬರುತ್ತ ಉಗ್ರಶ್ವಾಪದಗಳೂ ಅವಳ ಕಣ್ಣಿಗೆ ಬೀಳಹತ್ತಿದವು. ಆದರೂ ಅವಳು ಹೆದರದೆ ಧೈರ್ಯದಿಂದ ಒಂದು ಸ್ಥಳಹಿಡಿದು ವಿಚಾರಮಾಡುತ್ತ ಕುಳಿತುಕೊಂಡಳು. ಒಮ್ಮೆ ಅವಳ ಮನದಲ್ಲಿ ಸಂತಾನದ ಯೋಗ

ದಿಂದ ಒದಗುವ ಸುಖದ ಕಲ್ಪನೆಯಾಗಿ ಅವಳು ಆನಂದಪಡುತ್ತಿದ್ದಳು; ಒಮ್ಮೆ ಪತಿಯ ವಿಯೋಗದ ಸ್ಮರಣವಾಗಿ ಅವಳು ದುಃಖದಿಂದ ಕಣ್ಣೀರು ಸುರಿಸುವಳು; ಮತ್ತೊಮ್ಮೆ ತನ್ನ ದುರವಸ್ಥೆಯನ್ನು ನೆನಸಿ ನಿರಾಶೆ ಪಡುವಳು!

ಈ ಪ್ರಕಾರ ರಾಜಪುತ್ರಿಯ ಮನದಲ್ಲಿ ತರತರದ ಕಲ್ಪನಾತರಂಗಗಳು ಉದ್ಭವಿಸಿ ಕೂಡಲೆ ಅವು ನಾಶಹೊಂದುತ್ತಿರಲು, ಅವಳು ಕುಳಿತಿರುವ ದಿಕ್ಕಿನ ಕಡೆಗೆ ಕಲಕಲಾಟವಾಗುವದನ್ನು ಅವಳು ಕೇಳಿದಳು. ಅದು ನಾಯಿಗಳ ಹಾಗು ಮನುಷ್ಯರ ಧ್ವನಿಗಳಿಂದ ಆಗುತ್ತಿತ್ತು. ಅದರಿಂದ ಅವಳು ಯಾರೋ ಮೃಗಯಾರ್ಥ ಬಂದಿರುವರೆಂದು ತರ್ಕಿಸಿದಳು. ರಾಜಪುತ್ರಿಯ ತರ್ಕವು ಅಕ್ಷರಶಃ ನಿಜವಿತ್ತು. ಮುಂದೆ ಸ್ವಲ್ಪ ವೇಳೆಯಲ್ಲಿಯೇ ಅಸಂಖ್ಯ ಜನರೂ, ನಾಯಿಗಳೂ ಅವಳಿಗೆ ಕಂಡದ್ದಲ್ಲದೆ, ಅವರೆಲ್ಲರೂ ತನ್ನ ಕಡೆಗೇ ಬರುವದನ್ನು ನೋಡಿ ಅವಳು ಸಮಾಧಾನ ಪಟ್ಟಳು. ಆ ದಂಡಿನವರು ಬೇಟೆಯಾಡುತ್ತಾಡುತ್ತ, ಪದ್ಮನಯನೆಯಿದ್ದೆಡೆಗೆ ಬಂದರು ಅವರಲ್ಲಿ ಕೆಲವರು ರಾಜಪುತ್ರಿಯನ್ನು ನೋಡಿ ಅವಳ ಲಾವಣ್ಯಕ್ಕೆ ಬೆರಗಾಗಿ ತಮ್ಮ ಒಡೆಯನಾದ ಸಿಂಹಕೇತುರಾಜನಿಗೆ ಈ ಸಂಗತಿಯನ್ನು ತಿಳಿಸಲು, ಕೂಡಲೆ ಅವನು ರಾಜಪುತ್ರಿಯು ಕುಳಿತಲ್ಲಿಗೆ ಬಂದನು. ಸಿಂಹಕೇತುವು ಪದ್ಮನಯನೆಯ ರೂಪಕ್ಕೂ, ಅವಳ ಅರಣ್ಯವಾಸಕ್ಕೂ ಬೆರಗಾದದ್ದಲ್ಲದೆ, ಆಕೆಯ ದೀನ ಮುದ್ರೆಯನ್ನು ನೋಡಿ, ಕನಿಕರಪಟ್ಟನು. ಆತನು ವಿಚಾರಿಯೂ, ಸುಶೀಲನೂ, ಪರನಾರೀಸೋದರನೂ, ಕರುಣಿಯೂ ಇದ್ದನು. ಅವನು ರಾಜಪುತ್ರಿಯನ್ನು ಕುರಿತು—"ತಂಗೀ, ನೀನು ಯಾರು? ಇಂಥ ಘೋರಾರಣ್ಯದಲ್ಲಿ ಒಬ್ಬಳೇ ಕುಳಿತಿರುವ ಕಾರಣವೇನು? ಬೆದರಬೇಡ. ನಿನ್ನ ಮುಖಚರ್ಯೆದರ್ಶನದಿಂದಲೇ ನಾನು ನಿನ್ನ ಸುಗುಣಗಳನ್ನೂ, ಕುಲೀನತೆಯನ್ನೂ, ದುಃಸಹವಾದ ದುಃಖವನ್ನೂ ಅರಿತಿದ್ದೇನೆ. ನನ್ನಿಂದ ನಿನಗೆ ಯಾವ ಸಂಕಟವೂ, ತೊಂದರೆಯೂ ಒದಗುವಹಾಗಿಲ್ಲ. ನಾನು ನಿನ್ನ ಒಡುಹುಟ್ಟಿದವನೆಂದು ತಿಳಿದು ನನ್ನ ಸಂಗಡ ಮಾತಾಡು" ಅನ್ನಲು, ರಾಜಪುತ್ರಿಯು ಸಿಂಹಕೇತುವಿನ ಪ್ರಾಯವನ್ನು ನೋಡಿ ಆತಂಕಪಟ್ಟವಳಾಗಿದ್ದರೂ, ಅವನ ನಿಷ್ಕಲಂಕವಾದ ಭಾಷಣವನ್ನು ಕೇಳಿ ನಿಃಶಂಕೆಯಿಂದ ಅವನೊಡನೆ ಮನಬಿಚ್ಚಿ ಮಾತಾಡಲುದ್ಯೋಗಿಸಿದಳು. ಆದರೆ ಶೋಕಗ್ರಸ್ತನಾದ ಮನುಷ್ಯನ ದುಃಖವು ಸ್ವಕೀಯರ ದರ್ಶನದಿಂದ ಉಕ್ಕೇರು

ವಂತೆ, ಸಿಂಹಕೇತುವಿನ ದರ್ಶನದಿಂದ ರಾಜಪುತ್ರಿಯ ದುಃಖವು ಅವಳ ಉದರ ವನ್ನು ಅತಿಕ್ರಮಿಸಿ, ಅಶ್ರುರೂಪದಿಂದ ನೇತ್ರಗಳ ಮಾರ್ಗವಾಗಿ ಹೊರಚಲ್ಲ ಹತ್ತಿತು. ಅವಳ ಕುತ್ತಿಗೆಯ ಶಿರಉಬ್ಬಿ, ಮಾತುಗಳು ಹೊರಡದಾದವು. ಕಡೆಗೆ ರಾಜಪುತ್ರಿಯು ತನ್ನ ದುಃಖವನ್ನು ಕೆಲಮಟ್ಟಿಗೆ ಕಡಿಮೆ ಮಾಡಿ ನುಡಿದಳೇನೆಂದರೆ " ತಂದೆಯು ಮಗಳ ಕಷ್ಟವನ್ನು ನೋಡಿ ಕಳವಳಿಸುವಂತೆ ನನ್ನ ಹಡೆದ ತಂದೆಯಂತಿದ್ದ ನೀವು, ನನ್ನ ಸ್ಥಿತಿಯನ್ನು ನೋಡಿ ಕಳವಳಿಸು ವದಕ್ಕಾಗಿ ನಾನು ಕೃತಜ್ಞಳಾಗಿರುವೆನು. ಅನಾಥಳಾದ ನನ್ನನ್ನು ನಿಷ್ಕಾಮ ಪ್ರೀತಿಯಿಂದ ಆದರಿಸುವ ನಿಮಗೆ ದೇವರು ಉದ್ದಂಡವಾದ ಆಯುಷ್ಯವನ್ನೂ, ಅಖಂಡವಾದ ಐಶ್ವರ್ಯವನ್ನೂ ಕೊಡಲಿ. ಅನಾಥರೂ, ಮುಗ್ಧೆಯರೂ ಆದ ಸ್ತ್ರೀಯರನ್ನು ನಿಷ್ಕಾಮಪ್ರೀತಿಯಿಂದ ಆದರಿಸುವ ಪುಣ್ಯವಂತರು ವಿರಲ. ನಿಮ್ಮ ಈ ಸದ್ವರ್ತನವು ನನ್ನ ದುಃಖವನ್ನು ಅರ್ಧ ಕಡಿಮೆ ಮಾಡಿತು. ಮಹಾ ತ್ಮರ ದರ್ಶನ ಲಾಭವೇ ಅಂಥಾದ್ದು. ಈಪೊತ್ತಿಗೆ ನನ್ನ ದುಃಖಪರಂಪರೆಯು ಮುಗಿಯಿತೆಂದು ನಾನು ಭಾವಿಸುವೆನು.

## ೧೨ ನೆಯ ಪ್ರಕರಣ

## ಅಂತರ್ಧಾನ.



ಈ ಪ್ರಕಾರ ಸಿಂಹಕೇತುವು ತನ್ನನ್ನು ಆದರಿಸಿದ್ದಕ್ಕಾಗಿ ರಾಜಪುತ್ರಿಯು ಕೃತಜ್ಞತೆಯಿಂದ ಅವನ ಹಿತಚಿಂತನ ಮಾಡಿ, ಹಲವು ಬಗೆಯಾಗಿ ಆತನನ್ನು ಕೊಂಡಾಡಿದಳು. ಪ್ರಸವಕಾಲವು ಸಮೀಪಿಸಿರಲು, ತನಗೊದಗಿದ ಮಹದಾ ಪತ್ತಿಯಕ್ಕಾಗಿ ಅವಳು ಭಕ್ತಿಯಿಂದ ದೇವರನ್ನು ಸ್ತುತಿಸಿದಳು. ಭಾವೀಸುಖದ ಕಲ್ಪನೆಯಿಂದ ಸಮಾಧಾನ ತಾಳಿದ ಆ ಅಬಲೆಯು, ತನ್ನ ದುಃಖಕರವಾದ ಸಂಗತಿಯನ್ನು ಸ್ವಲ್ಪದರಲ್ಲಿ ಸಿಂಹಕೇತುವಿಗೆ ಹೇಳಲು, ಆತನು—ಅಮ್ಮಾ, ಸಾರ್ವಭೌಮ ಕುವರೀ, ನಿನ್ನ ವೃತ್ತಾಂತವನ್ನು ಕೇಳಿ ನನಗೆ ಬಹಳ ದುಃಖ

ವಾಗಿದೆ. ನಿನ್ನ ಶಾಸ್ತ್ರ–ಪ್ರಸಂಗಾವಧಾನ–ಸುವಿಚಾರಗಳು, ಬಾಲ್ಯದಲ್ಲಿ
ನೀನು ಸತ್ಸಮಾಗಮದ ಯೋಗದಿಂದ ಸಂಪಾದಿಸಿದ ಜ್ಞಾನದ ಫಲಗಳಾಗಿವೆ.
ನಿನ್ನಂಥ ಮಹಾತ್ಮಳಿಗೆ ಇಂಥ ಕಷ್ಟಕಾಲವು ಬರಬಾರದು. ಇರಲಿ, ಪ್ರಾರ
ಬ್ಧಭೋಗವು ಯಾರಿಗೂ ಬಿಟ್ಟಿಲ್ಲ. ಮನುಷ್ಯರ ಸತ್ವಪರೀಕ್ಷೆಗೆ ದುಃಖಪರಂ
ಪರೆಯು ಒರೆಗಲ್ಲಾಗಿರುವದು. ನಿನ್ನ ಸತ್ಸಮಾಗಮದ ಪುಣ್ಯವು ಬಲವತ್ತ
ರವಾಗಿರುವದರಿಂದಲೇ ಇಲ್ಲಿಯವರೆಗೆ ನಿನ್ನ ಪಾತಿವ್ರತ್ಯದ ರಕ್ಷಣವಾಗಿರು
ತ್ತದೆ. ಕಪಿಂಜಲ ಋಷಿಗಳ ಪುಣ್ಯಪ್ರತಾಪವೂ, ಸಾಮರ್ಥ್ಯವೂ ಪ್ರಕಟವಾ
ಗಲಿಕ್ಕೆ ನಿಮ್ಮಂಥ ಸಚ್ಛಿಷ್ಯರೇ ಮಾರ್ಗವಾಗಿರುವರು. ಅಮ್ಮಾ, ನಿನ್ನ ದರ್ಶ
ನದಿಂದ ನಾನು ಧನ್ಯನಾದೆನು. ಈಗ ನೀನು ತುಂಬಾ ಗರ್ಭಿಣಿಯಿರುತ್ತೀ.
ಹೀಗೆ ಅಡವಿಯಲ್ಲಿ ಕುಳಿತುಕೊಂಡರೆ ನಿನ್ನ ಗತಿಯೇನಾಗಬೇಕು? ನಾನು
ಪಾಂಡ್ಯದೇಶದ ರಾಜನಾದ ಸಿಂಹಕೇತುವಿದ್ದೇನೆ. ನನ್ನ ರಾಜಧಾನಿಯಾದ
ಮಧುರಾಪಟ್ಟಣವು ಇಲ್ಲಿಂದ ಸಮೀಪದಲ್ಲಿಯೇ ಇರುತ್ತದೆ. ನೀನು ಯಾವ
ಸಂಶಯವನ್ನೂ ತೆಗೆದುಕೊಳ್ಳದೆ ನನ್ನ ಸಂಗಡ ಬಂದರೆ, ನನ್ನ ಯೋಗ್ಯತಾನು
ಸಾರವಾಗಿ ನಿನ್ನ ಆರಯ್ಕೆ ಮಾಡುವೆನು; ನಿನ್ನ ಪತಿಯ ಶೋಧಾರ್ಥವಾಗಿ
ದೂತರನ್ನು ದೇಶದೇಶಗಳಿಗೆ ಕಳಿಸುವೆನು. ನಿನ್ನ ಮಾವನಾದ ಸುಲೋಚನ
ರಾಜನೂ, ತಂದೆಯಾದ ವೀರವರ್ಮರಾಜನೂ ಸಾಧಾರಣ ಅರಸರೊಳಗಿನವ
ರಲ್ಲ. ಅವರ ಕೈಕೆಳಗೆ ನಮ್ಮಂಥ ಎಷ್ಟೋ ಜನ ಮಾಂಡಲಿಕ ಅರಸರಿದ್ದಾರೆ.
ಅನಾಯಾಸವಾಗಿಯೇ ನಿನ್ನ ಯೋಗದಿಂದ ಅವರ ಸ್ನೇಹಲಾಭವು ನನಗಾಗು
ತ್ತಿರಲು, ನೀನು ನನ್ನ ಮಾತನ್ನು ನಿರಾಕರಿಸಬೇಡ.

ಪದ್ಮನಯನೆಯು ಸಿಂಹಕೇತುವಿನ ಮೃದುವಚನಗಳನ್ನು ಕೇಳಿ,
ಸಂತೋಷಪಟ್ಟು—ಮಹಾತ್ಮರೇ, ದೇವರು ನಿಮಗೆ ಬಹುಜನ ಹೆಣ್ಣುಮಕ್ಕ
ಳನ್ನೂ, ಗಂಡುಮಕ್ಕಳನ್ನೂ ಕೊಡಲಿ; ನಿಮ್ಮ ಐಶ್ವರ್ಯವೂ, ರಾಜ್ಯವೂ ಅಭಿ
ವೃದ್ಧಿಯನ್ನು ಹೊಂದಲಿ. ಮಾವನೂ, ತಂದೆಯೂ, ಪತಿಯೂ ಸಮರ್ಥ
ರಿದ್ದರೂ , ಈಗಿನ ನನ್ನ ಕಷ್ಟವನ್ನು ದೂರುಮಾಡುವದಕ್ಕೆ ಯಾರಾದರೂ
ಬಂದಿರುವರೇ? ಈಹೊತ್ತಿಗೆ ನೀವೇ ನನ್ನ ಹಡೆದ ತಂದೆಯು. ನಿಮ್ಮ ಹೆಸ
ರಿನ ಮೂರ್ತಿಯನ್ನು ಮಾಡಿಸಿ ಪ್ರತಿನಿತ್ಯ ಪೂಜಿಸಿದರೂ, ನಿಮ್ಮ ಉಪಕಾರವು
ತೀರಲಾರದು. ಅಪರಿಚಿತರೂ, ಪರಕೀಯರೂ ಆದ ನೀವು ಕೇವಲ ಉಪ

ಕಾರಬುದ್ಧಿಯಿಂದಲೇ ನನ್ನ ಹಿತವನ್ನು ಬಯಸುತ್ತಿರಲು, ನಿಮ್ಮ ಮಾತಿಗೆ ನಾನು ಪ್ರತಿಕೂಲಳಾಗುವೆನೇ? ಈ ಕಾಲಕ್ಕೆ ನೀವು ಇಲ್ಲಿಗೆ ಬರದಿದ್ದರೆ ಈ ಅನಾಥ-ಪದ್ಮನಯನೆಯನ್ನು ಯಾರು ಕೇಳುತ್ತಿದ್ದರು? ಸ್ವಾಭಾವಿಕವಾಗಿಯೇ ನಾನು ಅಡವಿಯ ಪಾಲಾಗುತ್ತಿದ್ದೆನು. ನಿಮ್ಮ ಉಪಕಾರವು ನನಗೆ ದುಃಸ್ಸಹವಾಗಿರಲು, ತಿರುಗಿ ನೀವೇ ನನಗೆ ಹೇಳಿಕೊಳ್ಳುವದೆಂದರೆ ನಿಮ್ಮ ಔದಾರ್ಯಕ್ಕೆ ನೆಲೆಯಿಲ್ಲದಾಯಿತು. ಈಗ ನಾನು ಸಂತೋಷದಿಂದ ನಿಮ್ಮೊಡನೆ, ಮಥುರೆಗೆ ಬರುತ್ತೇನೆ. ಪರದೇಸಿಯಾದ ನನ್ನನ್ನು ನಿರಾಕರಿಸದೆ, ನಿಮ್ಮ ಒಡಹುಟ್ಟಿದವಳೆಂದು ತಿಳಿದು ನನ್ನನ್ನು ರಕ್ಷಿಸಿ, ಅಖಂಡವಾದ ಕೀರ್ತಿಯನ್ನು ಸಂಪಾದಿಸಿರಿ. ಅನ್ನಲು, ಕೂಡಲೆ ಸಿಂಹಕೇತುವಿನ ಅಪ್ಪಣೆಯಿಂದ ಸಾರಥಿಯು ಒಂದು ಉತ್ತಮವಾದ ರಥವನ್ನು ಸಿದ್ಧಮಾಡಿದನು. ಆ ಮೇಲೆ ಸಿಂಹಕೇತುವು ಪದ್ಮನಯನೆಯನ್ನು ಆ ರಥದಲ್ಲಿ ಕುಳ್ಳಿರಿಸಿ, ತಾನು ಅಶ್ವಾರೂಢನಾಗಿ ರಥದಹಿಂದೆ ಹೊರಟು ಸ್ವಲ್ಪ ವೇಳೆಯಲ್ಲಿಯೇ ಸಕಲಸೈನ್ಯದೊಡನೆ ಪದ್ಮನಯನೆಯನ್ನು ಕರಕೊಂಡು ಮಥುರೆಗೆ ಮುಟ್ಟಿದನು. ಪೌರರೂ, ರಾಜಗೃಹವಾಸಿಗಳೂ ಪದ್ಮನಯನೆಯನ್ನು ನೋಡಿ ಆಶ್ಚರ್ಯಪಟ್ಟು ಹಲವು ಪ್ರಕಾರದ ತರ್ಕಗಳನ್ನು ಮಾಡಹತ್ತಿದರು. ಸಿಂಹಕೇತುವು ರಾಜಪುತ್ರಿಯನ್ನೊಡಗೊಂಡು ನೆಟ್ಟಗೆ ತನ್ನ ಪ್ರಿಯಪತ್ನಿಯಾದ ಮಂಜುಘೋಷೆಯು ಇರುವ ಅಂತಃಪುರಕ್ಕೆ ಹೋದನು. ನೀಲಶಂಕೆಯಿಂದ ಸಖಿಯರೊಡನೆ ವಿನೋದಮಾಡುತ್ತ ಆನಂದದಿಂದ ಕುಳಿತಿದ್ದ ಮಂಜುಘೋಷೆಯು, ತನ್ನ ರಮಣನು ಅಪರಿಚಿತಳಾದ ಸ್ತ್ರೀಯನ್ನೊಡಗೊಂಡು ಆಕಸ್ಮಾತ್ತಾಗಿ ಬರುವದನ್ನು ನೋಡಿ, ಅಸ್ತವ್ಯಸ್ತವಾದ ಉತ್ತರೀಯವನ್ನು ಲಗಬಗೆಯಿಂದ ಸಾವರಿಸಿಕೊಳ್ಳುತ್ತ ಯಾವತ್ತೂ ವ್ಯವಸ್ಥೆಯನ್ನು ಮಾಡುವದಕ್ಕಾಗಿ ದಾಸಿಯರಿಗೆ ಹೇಳಿ, ತಾನು ಪತಿಯನ್ನು ಪ್ರೇಮಕಟಾಕ್ಷಗಳಿಂದ ಆನಂದಗೊಳಿಸುವ ಅಭಿಲಾಷೆಯಿಂದ ಒತ್ತಟ್ಟಿಗೆ ಸಖಿಯರ ಮರೆಗೆ ನಿಂತುಕೊಂಡಳು. ಅವಳು ಸಮಯೋಚಿತವಾಗಿ ತನ್ನ ದೃಷ್ಟಿಯನ್ನು ಪತಿಯ ದೃಷ್ಟಿಗೆ ಮೇಲನ ಮಾಡಲು ಯತ್ನಿಸಿ, ತನ್ನ ಬಾಗಿದ ಮುಖವನ್ನು ಸ್ವಲ್ಪ ಮೇಲಕ್ಕೆ ಎತ್ತುತ್ತ ಊರ್ಧ್ವದೃಷ್ಟಿಯೊಡನೆ ಬಾರಿಬಾರಿಗೆ ಪತಿಯ ಮಾರ್ಗ ಪ್ರತೀಕ್ಷೆ ಮಾಡುತ್ತಿದ್ದಳು. ಸಿಂಹಕೇತುವು ಗಾಂಭೀರ್ಯದಿಂದ ಮಂದಿರವನ್ನು ಪ್ರವೇಶಿಸಿ, ದರ್ಶನೋ

ತ್ಕಂಠಿತಳಾದ ಸತಿಯ ಮನದಾಸೆಯನ್ನು ಪ್ರೇಮಪೂರ್ವಕವಾಗಿ ಪೂರಯಿಸಿ, ಯೋಗ್ಯಾಸನದಲ್ಲಿ ವಿಶ್ರಮಿಸಿ ಪದ್ಮನಯನೆಯನ್ನು ಕುರಿತು—“ ಅಮ್ಮಾ, ಪದ್ಮನಯನೇ, ಇಲ್ಲಿ ನೆರೆದವರೆಲ್ಲರೂ ಅಪರಿಚಿತರೆಂದು ತಿಳಿದು ಶಂಕಿಸಬೇಡ. ಅಪರಿಚಿತಳಾದ ನಿನ್ನ ಮುಂದೆ ನನ್ನ ಗೌರವವನ್ನು ಕಾಯುವದಕ್ಕಾಗಿ,ಅಧಿಕ ಲಜ್ಜೆಯೊಡನೆ ಸಖಿಯರ ತಂಡದಲ್ಲಿ ತಲೆವಾಗಿ ನಿಂತುಕೊಂಡಿದ್ದ ನನ್ನ ಪ್ರಿಯಳು ನಿನ್ನ ಅತ್ತಿಗೆಯೆಂದು ತಿಳಿ. ಸಮವಯಸ್ಕರಾದ ನೀವಿಬ್ಬರೂ ಪರಮಸ್ನೇಹಿತರಾಗಿ ಇರುವದನ್ನು ನೋಡುವ ನಾನೇ ಧನ್ಯನು. ನಿನ್ನಂಥ ಸಚ್ಚರಿತ್ರಳ ಸೇವೆಮಾಡುವ ಪ್ರಸಂಗವು ನನಗೆ ಬಂದದ್ದರಿಂದ ನನ್ನ ಪುಣ್ಯಕ್ಕೆ ಜೋಡಿಲ್ಲ.” ಎಂದು ಹೇಳಿದನು.

ಈ ಪ್ರಕಾರ ಸಿಂಹಕೇತುವು ಆಡಿದಮಾತುಗಳನ್ನು ಕೇಳಿ, ಕೂಡಲೆ ಮಂಜುಘೋಷೆಯು ಅತ್ಯಾನಂದದಿಂದ ಪದ್ಮನಯನೆಯ ಕೈಹಿಡಿದು ಹತ್ತರ ಕರಕೊಂಡಳು. ಆಗ ಪದ್ಮನಯನೆಯು ಸಿಂಹಕೇತುವನ್ನು ಕುರಿತು—“ಅಣ್ಣಾ” ಇಂದಿಗೆ ನಾನೇ ಧನ್ಯಳು. ನಿನಗಿಂತಲೂ ನನಗೆ ನನ್ನ ಅತ್ತಿಗೆಯು ಪ್ರಿಯ ಳಿದ್ದಾಳೆ. ನಿನ್ನ ಹಿತವನ್ನು ಚಿಂತಿಸುತ್ತ, ಆನಂದದಿಂದ ನಿನ್ನ ಮನೆಯಲ್ಲಿ ರುತ್ತೇನೆ. ನೀನು ನನ್ನ ಸಲುವಾಗಿ ಬಹಳ ದಣಿದೆ. ಬೇಟೆಯಾಡಿ ನಿನಗೆ ಬಹಳ ಹಸಿವೆಯಾಗಿದ್ದೀತು. ಇದಲ್ಲದೆ ಓರಿಗೆಯವರಾದ ರಾಜಪುತ್ರರು ಅರ ಮನೆಯ ಬಾಗಿಲಲ್ಲಿ ನಿನ್ನ ಹಾದಿಯಕಾಯುತ್ತ ನಿಂತುಕೊಂಡಿದ್ದಾರು, ನಾನೇನು ಇಂದಿದ್ದು ನಾಳೆ ಹೋಗುವವಳಲ್ಲ. ನಿನ್ನಿಂದ ಸಂಪೂರ್ಣವಾಗಿ ಸೇವೆಯನ್ನು ತೆಗೆದುಕೊಳ್ಳಲಿಕ್ಕೆ ಬಂದಿದ್ದೇನೆ. ನೀನು ರಾಜಗೃಹಕ್ಕೆ ಹೋಗಿ, ಭೋಜನಮಾಡಿ ಸ್ವಸ್ಥಚಿತ್ತನಾಗಿ ಬಂದರೆ, ನನ್ನ ಜೀವಕ್ಕೆ ಸೊಗಸಾಗುತ್ತದೆ” ಎನ್ನಲು, ಸಿಂಹಕೇತುವು ಆಕೆಯನ್ನು ಉದ್ದೇಶಿಸಿ—ಅಮ್ಮಾ, ನಿನಗಿಂತ ನನಗೆ ಹೆಚ್ಚು ಶ್ರಮವಾಗಿರುವದಿಲ್ಲ. ಅನ್ನ ನೀರುಗಳಿಲ್ಲದೆ ನೀನು, ಬಳಲಿರುವಷ್ಟು ನಾನು ಬಳಲಿರುವದಿಲ್ಲ. ರಾಜಪುತ್ರರು ನನ್ನ ಹಾದಿಯನ್ನು ನೋಡುವದಂತು ಇರಲಿ, ನಿನ್ನ ಸೇವೆಯನ್ನು ಭಕ್ತಿಪೂರ್ವಕವಾಗಿ ಮಾಡುವವರನ್ನು ಅನು ಗ್ರಹಿಸುವದಕ್ಕಾಗಿ ಸಾಕ್ಷಾತ್ ಕಪಿಂಜಲಋಷಿಗಳು ಹಾದಿಯನ್ನು ನೋಡುತ್ತಿ ರುವರು. ಸತೀಮಣಿಯೇ, ಈ ಮನೆಯು ನಿನ್ನದದೆ, ನಾವೆಲ್ಲರೂ ನಿನ್ನವ ರಿದ್ದೇವೆ. ಯಾವದಕ್ಕೂ ಸಂಕೋಚಪಡದೆ, ಸತ್ಸೇವೆಯ ಲಾಭವನ್ನು ಒದ

ಗಿಸಿಕೊಟ್ಟು, ನಮ್ಮನ್ನು ಧನ್ಯರಾಗಮಾಡತಕ್ಕದ್ದು, ಎಂದು ಹೇಳಿ ಹೆಂಡತಿಯನ್ನು ಪ್ರೀತಿಪೂರ್ವಕವಾಗಿ ನೋಡಿ, ಪದ್ಮನಯನೆಯ ಅನುಮತಿಯಿಂದ ಹೊರಟು ಹೋದನು.

ಇತ್ತ ಮಂಜುಘೋಷೆಯು ತನ್ನ ಪತಿಯ ಸೌಜನ್ಯಕ್ಕೂ, ಔದಾರ್ಯಕ್ಕೂ ಸಂತೋಷಪಟ್ಟು ದಾಸಿಯರಿಗೆ ಭೋಜನದ ಸಿದ್ಧತೆಯನ್ನು ಮಾಡಹೇಳಿ ಪೂಜ್ಯಭಾವದಿಂದ ಪದ್ಮನಯನೆಯ ಕೈಹಿಡಿದು ಆದರದಿಂದ ಮೇಲೆ ಕುಳ್ಳಿರಿಸಿಕೊಂಡು ನುಡಿದಳೇನೆಂದರೆ —“ನಿಮ್ಮ ಸೌಂದರ್ಯ, ಸದ್ಗುಣಗಳ ವರ್ಚಸ್ಸು, ದೈನ್ಯಭಾವ ಇವು ಕಠಿಣಹೃದಯವನ್ನಾದರೂ ಕರಗಿಸದೆ ಬಿಡವು. ನಿಮ್ಮ ಯಾವ ಸುದ್ದಿಯನ್ನೂ ಅರಿಯದ ನನ್ನ ಮನಸ್ಸಿನಲ್ಲಿ, ನಿಮ್ಮ ಬಗ್ಗೆ ಅನಿರ್ವಾಚ್ಯವಾದ ಪೂಜ್ಯಬುದ್ಧಿಯುಂಟಾಗಿದೆ. ಅಕಲ್ಪಿತವಾಗಿ ದೊರೆತ ಸತ್ಸಂಗದಿಂದ ನಾನು ಕೃತಾರ್ಥಳಾಗಿದ್ದೇನೆ. ನೀವು ಯಾರೆಂಬದನ್ನು ತಿಳಿಯುವ ಉತ್ಕಂಠೆಯು ನನಗೆ ಬಹಳವಿದ್ದರೂ, ಪಥಶ್ರಮದಿಂದ ಬಳಲಿದವರಾದ ನಿಮಗೆ ನಾನು ಈಗ ಆಗ್ರಹ ಮಾಡುವದಿಲ್ಲ. ಈ ಮನೆಯು ನಿಮ್ಮದಿದೆ. ಯಾವ ಸಂಶಯವನ್ನೂ ತೆಗೆದುಕೊಳ್ಳದೆ ನಿಶ್ಚಿಂತೆಯಿಂದ ಇರಬೇಕು. ಬಹಳ ಹೇಳುವದರಿಂದೇನು ಪ್ರಯೋಜನವು? ನನ್ನನ್ನು ನಿಮ್ಮ ಒಡಹುಟ್ಟಿದ ತಂಗಿಯಂತೆ ಭಾವಿಸಿ ನಡಿಸಿಕೊಳ್ಳಿರಿ.” ಈ ಪ್ರಕಾರ ಮಂಜುಘೋಷೆಯು ಉಚಿತವಾದ ಸವಿಮಾತುಗಳಿಂದ ಪದ್ಮನಯನೆಯನ್ನು ಶ್ಲಾಘಿಸುತ್ತಿರಲು, ದಾಸಿಯರು ಭೋಜನದ ಸಿದ್ಧತೆಯಾಯಿತೆಂದು ತಿಳಿಸಿದರು. ಆಗ ಮಂಜುಘೋಷೆಯು ಪದ್ಮನಯನೆಯನ್ನು ಭೋಜನಶಾಲೆಗೆ ಕರಕೊಂಡು ಹೋಗಿ, ತಾನೂ ಅವಳೊಡನೆ ಭೋಜನಕ್ಕೆ ಕುಳಿತಳು.

ಪದ್ಮನಯನೆಯು ಮಂಜುಘೋಷೆಯ ಆದರಕ್ಕೂ, ಸುಗುಣಗಳಿಗೂ ಪ್ರಸನ್ನಳಾಗಿ ಅವಳನ್ನು ಹಲವುಬಗೆಯಾಗಿ ಸ್ತುತಿಸುತ್ತ ತನ್ನ ಯಾವತ್ತೂ ಸಂಗತಿಯನ್ನು ತಿಳಿಸಿ ನುಡಿದಳೇನೆಂದರೆ —“ಮಂಜುಘೋಷಾ, ಇನ್ನು ಮೇಲೆ ನಾನು ಪರಕೀಯಳೆಂದು ತಿಳಿಯದೆ, ನಿನ್ನ ಒಡಹುಟ್ಟಿದವಳೆಂಬ ಭಾವದಿಂದ ನನ್ನನ್ನು ನಡಿಸಿಕೋ. ನಿನ್ನ ಶುದ್ಧ ಮನಸ್ಸನ್ನು ತಿಳಿದ ನಾನು, ಎಲ್ಲರೀತಿಯಿಂದಲೂ ನಿನ್ನವಳಾಗಿದ್ದೇನೆ. ನಿನ್ನನ್ನೂ, ನಿನಗೆ ಎಲ್ಲರೀತಿಯಿಂದಲೂ ತಕ್ಕವನಾಗಿರುವ ನಿನ್ನ ಪತಿಯನ್ನೂ ನೋಡಿ ನನಗೆ ಬಹಳ ಸಂತೋ

ಷವಾಗಿದೆ. ಸ್ವಲ್ಪ ದಿನಗಳ ಹಿಂದೆ ಪತಿಯೊಡನೆ ಆನಂದದಿಂದ ರಮಿಸುತ್ತಿದ್ದ ನಾನು, ಚಕೋರನನ್ನಗಲಿದ ಚಕೋರಿಯಂತೆ "ಪತಿ ಪತಿ" ಎಂದು ಹಲುಬುತ್ತ ನಿನ್ನನ್ನು ಹೊಂದಿದ್ದೇನೆ." ಎಂದು ಹೇಳಿ, ಪದ್ಮನಯನೆಯು ಕಣ್ಣೀರು ಸುರಿಸಿದಳು. ಅವಳ ದುಃಖಕಾರಕ ಸಂಗತಿಯನ್ನೂ, ವಿನಯವನ್ನೂ ನೋಡಿ ಮಂಜುಘೋಷೆಗೂ ಅಲ್ಲಿ ನೆರೆದಿದ್ದ ಎಲ್ಲ ದಾಸಿಯರಿಗೂ ಬಹಳ ದುಃಖವಾಗಿ ಅವರ ಸೆರಗುಗಳು ಅಶ್ರುಗಳಿಂದ ತೊಯ್ದುವು. ಮಂಜುಘೋಷೆಯು ದುಃಖದಿಂದ ಪದ್ಮನಯನೆಯನ್ನು ಕುರಿತು—"ಅಮ್ಮಾ, ಪದ್ಮನಯನಾ, ನಿನ್ನ ದುಃಖವನ್ನು ಶಾಂತಮಾಡು. ನೀನು ಅಲೌಕಿಕ ಸ್ತ್ರೀಯಿರುತ್ತೀ. ಸ್ವಲ್ಪ ದಿನಗಳಲ್ಲಿಯೇ ದೇವರ ದಯದಿಂದ ನೀನು ನಿನ್ನ ಪತಿಯನ್ನು ಕೂಡುವೆಯೆಂದು ನಾನು ಖಂಡಿತವಾಗಿ ಹೇಳುತ್ತೇನೆ. ಗರ್ಭವತಿಯಾದ ನೀನು ಹೀಗೆ ಶೋಕಮಾಡುವದು ನೆಟ್ಟಗಲ್ಲ. ಬಿಡು, ಇನ್ನು ಕಣ್ಣೀರು ಹಾಕಬೇಡ." ಎಂದು ಹೇಳಿ ಅವಳು ತನ್ನ ಸೆರಗಿನಿಂದ ಪದ್ಮನಯನೆಯ ಕಣ್ಣೀರುಗಳನ್ನು ಒರಸಿದಳು.

ಇರಇರುತ್ತ ಸಮವಯಸ್ಕರಾದ ಮಂಜುಘೋಷಾ–ಪದ್ಮನಯನೆಯರ ಸಖ್ಯವು ಹೆಚ್ಚುತ್ತ ಹೋಯಿತು. ಸಿಂಹಕೇತುವಾದರೂ ಪದ್ಮನಯನೆಯ ಬಯಕೆಗಳನ್ನು ಪೂರ್ಣಮಾಡುವದರಲ್ಲಿ ತತ್ಪರನಾಗಿದ್ದನು. ಈ ಪ್ರಕಾರ ರಾಜಪುತ್ರಿಯು ತನ್ನ ಸುಗುಣಗಳಿಂದ ಬಹುಜನರ ಆದರಕ್ಕೆ ಪಾತ್ರಳಾಗಿ, ಸುಖದಿಂದ ಕಾಲಹರಣಮಾಡುತ್ತಿಲು, ಅವಳಿಗೆ ನವಮಾಸಗಳು ಪೂರ್ಣವಾಗಿ ಒಳ್ಳೇ ಮುಹೂರ್ತದಲ್ಲಿ ಆಕೆಯು ಗಂಡುಮಗುವನ್ನು ಹೆತ್ತಳು. ಆಗ ಮಂಜುಘೋಷೆಗೂ, ಸಿಂಹಕೇತುವಿಗೂ ಬಹಳಸಂತೋಷವಾದದ್ದಲ್ಲದೆ, ಕೂಸಿನ ರೂಪವನ್ನೂ, ವರ್ಚಸ್ಸನ್ನೂ ನೋಡಿ ಅವರೆಲ್ಲರು ಬೆರಗಾದರು. ಕಮಲಾಕ್ಷನ ರೂಪವನ್ನು ಅಚ್ಚಳಿಯದೆ ಹೋಲುತ್ತಿದ್ದ ಪುತ್ರನ ರೂಪವನ್ನು ನೋಡಿ, ಪದ್ಮನಯನೆಯು ಆನಂದಸಾಗರದಲ್ಲಿ ಮುಳುಗಹತ್ತಿದಳು. ಜ್ಯೋತಿಷಿಗಳು ಆ ಕೂಸಿನ ಸಾಮುದ್ರಿಕ ಲಕ್ಷಣಗಳನ್ನೂ, ಜನನಕಾಲದ ಮಹದಶೆಯನ್ನೂ ನೋಡಿ ಅದಕ್ಕೆ ವಿಕ್ರಮಾರ್ಕನೆಂದು ಹೆಸರಿಡುವದಕ್ಕೆ ಹೇಳಿದರು. ವಿಕ್ರಮಾರ್ಕನು ದಿನದಿನಕ್ಕೆ ಬೆಳೆಯುತ್ತ ಹೋದಂತೆ ಅವನ ಬಾಲಕ್ರೀಡೆಗಳು ತಾಯಿಯಾದ ಪದ್ಮನಯನೆಯ ದುಃಖವನ್ನು ನಾಶಮಾಡುತ್ತ ಹೋದವು.

ಅವಳು ಮಂಜುಘೋಷೆಯ ಮುಂದೆ ತನ್ನ ಪತಿಯ ಗುಣಗಳನ್ನು ಹೊಗಳುತ್ತ, ಆತನು ವಿಕ್ರಮಾರ್ಕನ ಬಾಲಕ್ರೀಡೆಗಳನ್ನು ನೋಡಲಿಲ್ಲೆಂದು ಯಾವಾಗಲೂ ದುಃಖಪಡುತ್ತಿದ್ದಳು. ಇತ್ತ ಸಿಂಹಕೇತುವು ಕಮಲಾಕ್ಷನ ಶೋಧಾರ್ಥವಾಗಿ ಬಹಳ ಯತ್ನಿಸಿದರೂ, ಅದೆಲ್ಲ ನಿಷ್ಫಲವಾದ್ದರಿಂದ ಅವನು ಕುಂಠಿತನಾದನು.

ವಿಕ್ರಮಾರ್ಕನು ದಿನದಿನಕ್ಕೆ ದೊಡ್ಡವನಾಗಹತ್ತಿದನು, ಅವನ ತೇಜಸ್ಸು, ಚಾಪಲ್ಯ, ಸೌಂದರ್ಯ ಇವು ಜನರ ಚಿತ್ತವನ್ನು ಆಕರ್ಷಿಸುತ್ತಿದ್ದವು. ಅವನಿಗೆ ಒಂದು ವರ್ಷ ತುಂಬಿತು, ಅವನು ಎರಡು ವರ್ಷದವನಾದನು, ಅವನ ವಯಸ್ಸು ನಾಲ್ಕು ವರ್ಷದ್ದಾಯಿತು. ಒಂದುದಿನ ಪದ್ಮನಯನೆಯು ತನ್ನ ಮಂದಿರದಲ್ಲಿ ಕುಳಿತುಕೊಂಡಿದ್ದಾಳೆ, ಮಧ್ಯಾಹ್ನದಸಮಯ, ಬಿಸಿಲು ರಣಗುಟ್ಟಿ ಸುರಿಯುತ್ತಲಿದೆ, ವಿಕ್ರಮಾರ್ಕನು ಬಳಿಯಲ್ಲಿ ಮಲಗಿಕೊಂಡು ನಿದ್ದೆಮಾಡುತ್ತಲಿದ್ದಾನೆ, ಸುಂದರವಾದ ಜಾವಳಗಳಿಂದಲೂ, ಬಾಲದೊಡಿಗೆಗಳಿಂದಲೂ ಅವನ ಮುಖವು ಮುದ್ದುಸುರಿಯುತ್ತಲಿದೆ, ತುಂಟತನದಿಂದಹುಡಿಯಲ್ಲಿ ಆಡಿದ್ದರಿಂದ ಅವನ ಮೈಗೆ ಅಲ್ಲಲ್ಲಿ ಧೂಲಿಯು ಹತ್ತಿದೆ, ಅವನ ಆಟದ ಒಡವೆಗಳು ಅತ್ತೊಂದು ಇತ್ತೊಂದು ಬಿದ್ದವೆ, ಆಡಲಿಕ್ಕೆ ತಕ್ಕೊಂಡಿದ್ದ ಚಿಕ್ಕ ಧನುಸ್ಸು ಅವನ ಎಡಗೈಯಲ್ಲಿ ಒಪ್ಪುತ್ತಲಿದೆ, ಬಲಅಂಗೈಯಲ್ಲಿ ಸಾರ್ವಭೌಮ ಚಿನ್ಹಗಳು ಸ್ಪಷ್ಟವಾಗಿ ಕಾಣುತ್ತಲಿವೆ, ಅವನು ಹೊಚ್ಚಿದ್ದ ಸೂಕ್ಷ್ಮವಾದ ಶಾಲನ್ನು ಕಾಲಿನಿಂದ ಒದ್ದು ಸರಿಸಿದ್ದಾನೆ, ಇಂಥ ದುರ್ಲಭನಾದ ಪುತ್ರನನ್ನು ಸಾಭಿಲಾಷೆಯಿಂದ ಎವೆಯಿಕ್ಕದೆ ನೋಡುತ್ತಿದ್ದ ಪದ್ಮನಯನೆಯ ಕಣ್ಣುಗಳೊಳಗಿಂದ ಎರಡೆಂದರೆ ಎರಡೇ ಆನಂದಬಾಷ್ಪದ ಹನಿಗಳು ಉದುರಿದವು. ಅವಳು ಮಮತೆಯಿಂದ ಮಗನ ಮೈಮೇಲೆ ಕೈಯಾಡಿಸಿ, ಜಾರಿಹೋದ ಶಾಲನ್ನು ಮೆಲ್ಲನೆ ಮೈಮೇಲೆ ಎಳೆದು ಆನಂದದಭರದಿಂದ—"ವಿಕ್ರಮಾರ್ಕಾ, ನಿನ್ನ ಹಡೆದವರು ಎಲ್ಲಿ?" ಎಂದು ತಟ್ಟನೆ ನುಡಿದಳು. ಅದೇ ಆಕೆಯ ನುಡಿಯು, ಆಕೆಯ ಕರ್ಣರಂಧ್ರದ್ವಾರದಿಂದ ಆಕೆಯ ಹೃದಯವನ್ನು ಪ್ರವೇಶಿಸಿ ಅಲ್ಲಿದ್ದ ದುಃಖಾಗ್ನಿಯನ್ನು ಜಾಗ್ರುತಗೊಳಿಸಿತು. ಆ ಅಗ್ನಿಗೆ, ವಿಕ್ರಮಾರ್ಕನ ರೂಪಸಾದೃಶ್ಯದಿಂದ ಅವಳ ಸ್ಮೃತಿಪಟಲದ ಮೇಲೆ ಮೂಡಹತ್ತಿದ ಕಮಲಾಕ್ಷನ ಸುಂದರರೂಪವೂ, ಆಸುಂದರರೂಪಕ್ಕೆ ಅಲಂಕಾರ ಭೂತವಾದಅವನ ಸದ್ಗುಣಗಳೂ, ಆ ಸದ್ಗುಣಗ

ಳ ತೇಜಸ್ಸನ್ನು ವೃದ್ಧಿಗೊಳಿಸುವ ಅದ್ವಿತೀಯವಾದ ಪರಾಕ್ರಮವೂ, ಆ ರೂಪ–ಗುಣ–ಪರಾಕ್ರಮಗಳಿಗೆ ಲುಬ್ಧಳಾಗಿ ತಾನು ಅವನೊಡನೆ ಮಾಡಿದ ಲೀಲೆಗಳೂ ಉರವಲವಾಗಿ, ಆ ಅಗ್ನಿಯು ಭುಗಿಭುಗಿಲೆಂದು ಪ್ರಜ್ವಲಿಸಿತು. ಆ ದುಃಖಾಗ್ನಿಜ್ವಾಲೆಯಿಂದ ಆಕೆಯ ಕರುಣಾರಸವು ಕಾದು ಉಕ್ಕೇರಿ ಅಶ್ರುರೂಪದಿಂದ ಹೊರಬೀಳಹತ್ತಿತು.

ಪ್ರಿಯವಾಚಕರೆ, ಸಾಂಸಾರಿಕರಾದ ನಮ್ಮ ವಿಚಿತ್ರ ಸ್ಥಿತಿಯನ್ನು ಮನಸ್ಸಿನಲ್ಲಿ ತಂದಿರೇನು? ನಮ್ಮ ದುರ್ಬಲ ಮನಸ್ಸು ಕ್ಷಣದಲ್ಲ ಆನಂದಮಯವಾಗಿ ನೇತ್ರಗಳು ಬಾಷ್ಪಪೂರಿತವಾದರೆ, ಮತ್ತೊಂದು ಕ್ಷಣದಲ್ಲಿ ಅದೇ ಮನಸ್ಸು ದುಃಖಮಯವಾಗಿ ಅವೇ ನೇತ್ರಗಳು ದುಃಖಾಶ್ರುಪೂರ್ಣವಾಗುವವು. ಪದ್ಮನಯನೆಯ ಸ್ಥಿತಿಯಾದರೂ ಹೀಗೆಯೇ ಆಯಿತು. ಆಕೆಯು ಮಗನ ಸುಂದರರೂಪವನ್ನು ನೋಡಿ ಆನಂದಬಾಷ್ಪಗಳನ್ನು ಉದರಿಸುತ್ತಿರುವಷ್ಟರಲ್ಲಿ, ಪತಿಯ ಸ್ಮರಣವಾಗಲು, ಆ ಬಾಷ್ಪಗಳು ಅಶ್ರುರೂಪವನ್ನು ಹೊಂದಿದವು. ಹೀಗೆ ಸಾಂಸಾರಿಕರ ಮನಸ್ಸು ಆಗಾಗ್ಗೆ ಕಾಯುತ್ತ ತಂಪಾಗುತ್ತ ಹೋಗುವದರಿಂದ ಅವರು ನುಗ್ಗಾಗುತ್ತಿದ್ದರೂ, ಅವರ ಆ ಕೋಮಲ ಮನಸ್ಸು ಈಶನಿರ್ಮಿತ ಸೃಷ್ಟಿರೂಪವಾದ ರಂಗಭೂಮಿಯಲ್ಲ ಬೋಧಪ್ರದವಾದ ಸುಂದರ ನಾಟಕಗಳ ಉತ್ಪತ್ತಿಗೆ ಕಾರಣವಾಗಿರುತ್ತದೆಂಬದನ್ನು ಮರೆಯಲಾಗದು. ಮಹಾಭಾರತ–ರಾಮಾಯಣಾದಿ ವೇದತುಲ್ಯಗ್ರಂಥಗಳಲ್ಲಿ ಆ ಕೋಮಲ ಮನಸ್ಸಿನಿಂದಾದ ನಾಟಕಗಳೇ ವರ್ಣಿಸಲ್ಪಟ್ಟವೆ. ಇರಲಿ, ಈಗ ಪದ್ಮನಯನೆಯ ಮನಸ್ಸು ಪುತ್ರ–ದರ್ಶನಾನಂದದಿಂದ ತಂಪಾಗಿ, ಕೂಡಲೆ ಅದು ಪತಿಯ ವಿಯೋಗಸ್ಮರಣದಿಂದ ಕಾದದ್ದರಿಂದ ಆಕೆಯು ತೀರ ಹಣ್ಣಾದಳು. ಮಧ್ಯಾಹ್ನದ ಬಿಸಿಲು ರಣಗುಟ್ಟಿ ಸುರಿಯುತ್ತಿರಲು, ಆಗ ಆಕೆಯ ಬಳಿಗೆ ಯಾರೂ ಬರುವಂತೆ ಇದ್ದಿಲ್ಲ; ಆದ್ದರಿಂದ ಆಕೆಯು ನಿಶ್ಶಂಕೆಯಿಂದ ಕಣ್ಣೀರು ಸುರಿಸುತ್ತ ತನ್ನ ಕಂದನು ಎಚ್ಚತ್ತಾನೆಂಬ ಅಂಜಿಕೆಯಿಂದ ಕುತ್ತಿಗೆಯೊಳಗೆ ಅಳುತ್ತ–"ಬಾಳಾ, ಏನು ನನ್ನ ದುರ್ದೈವವಿದು? ಬಾಲಮಾರ್ತಾಂಡನಂತೆ ಇದ್ದ ನಿನ್ನ ಪೋಷಣವನ್ನು ಮಾಡಲಿಕ್ಕೆ ನಡುವಗಲ ಮಾರ್ತಂಡನೇ ಸಮರ್ಥನಲ್ಲದೆ, ನನ್ನಂಥ ತೇಜೋಹೀನಳು ಸಮರ್ಥಳೇ? ದೈವಹೀನೆಯ ಹೊಟ್ಟೆಯಲ್ಲ ಹುಟ್ಟಿದ್ದರಿಂದ ನೀನು ಪರದೇಶಿಯಾಗಿ ಬಾಳಬೇಕಾಯಿತಲ್ಲ? ಶಿವ ಶಿವ! ಬಾಳಾ, ನಾನು ನಿನಗೆ ಏನು ಮಾಡುವಹಾ

ಗಿಷ್ಟೇನೆ? ನಿನ್ನ ಯೋಗ್ಯವಾದ ಲಾಲನ ಪಾಲನಗಳನ್ನು ಮಾಡಲಿಕ್ಕೆ ಅಬಲೆಯಾದ ನನಗೆ ಸಬಲರ ಸಥಿಯ ಸಹಾಯವಿಲ್ಲ; ನಿನ್ನ ಜ್ಞಾನವನ್ನು ಹೆಚ್ಚಿಸಲಿಕ್ಕೆ ನಾನು ಜ್ಞಾನಿಯಲ್ಲ; ಪೌರುಷವನ್ನು ಹೆಚ್ಚಿಸಲಿಕ್ಕೆ ನಾನು ಪುರುಷಳಲ್ಲ; ವೈಭವನ್ನು ಹೆಚ್ಚಿಸಲಿಕ್ಕೆ ನಾನು ವೈಭವಶಾಲಿಯಲ್ಲ! ನನ್ನಂಥ ಅನಧಿಕಾರಿಯಾದ ಅಬಲೆಯ ಸಹವಾಸದಿಂದ ನೀನು ತೇಜೋಹೀನನಾಗಬಹುದು. ಹೇಗೂ ನಿನ್ನ ಪ್ರತ್ಯಕ್ಷ ನೋಡದ ಮಾವನಂತೆ ಇದ್ದ ಸಿಂಹಕೇತು ರಾಜನು ನಿನ್ನ ಯೋಗಕ್ಷೇಮವನ್ನು ತಕ್ಕೊಳ್ಳಲಿಕ್ಕೆ ಸಮರ್ಥನಿದ್ದಾನೆ. ತಾಯಿ ಹೋಗಿ ಸೋದರಮಾವನು ಉಳಿಯಲೆಂದು ಜನರು ಆಡುವದುಂಟು. ಅಂದ ಬಳಿಕ ನಾನಿದ್ದು ಮಾಡುವದೇನು? ಬಾಳಾ, ವಿಕ್ರಮಾರ್ಕಾ, ನನ್ನ ಕಾಲಗುಣವು ಒಳ್ಳೆಯದಲ್ಲ ಕಂಡೆಯಾ! ಈ ಹತಭಾಗ್ಯಳಿಗೆ ಪ್ರಥಮದಲ್ಲಿ ಆಶ್ರಯಕೊಟ್ಟ ತಾಯಿ-ತಂದೆಗಳು ದುಃಖದಲ್ಲಿ ಮುಳುಗಿರುವರು; ಮಧ್ಯದಲ್ಲಿ ಆಶ್ರಯಕೊಟ್ಟ ಮೇಘನಾದನು ನಾಶವನ್ನು ಹೊಂದಿದನು; ನ್ಯಾಯದಿಂದ ಪ್ರಾಣಿಗ್ರಹಣ ಮಾಡಿದ ಕಮಲಾಕ್ಷ ಪ್ರಭುಗಳು ದೇಶಭ್ರಷ್ಟರಾದರು; ಪ್ರಾಣಕ್ಕಿಂತಲೂ ಹೆಚ್ಚಾಗಿದ್ದ ಪ್ರಿಯ ಸಖಿಯಾದ ಸುಮಧ್ಯಮೆಯು ಯಾವಾಗಲೂ ಅಗಲದೆ ನೆರಳಿನಂತೆ ನನ್ನ ಬಳಿಯಲ್ಲಿರುತ್ತಿರಲು, ಹಾವಿಗೆ ತುತ್ತಾದಳು; ದುಷ್ಟ ಮನಸ್ಸಿನಿಂದ ಕ್ಷಣ ಮಾತ್ರ ನನ್ನ ನೆರಳಿಗೆ ನಿಂತ ಸಿಂಹನಾದನು ನಾಶವಾದದ್ದಂತು ಇರಲಿ, ಅವನ ಸಹವಾಸಮಾಡಿದ ಉಗ್ರದಂಷ್ಟ್ರನು ಕೂಡ ನನ್ನ ಕೆಟ್ಟ ಕಾಲ ಗುಣದ ಸಂಕದಿಂದ ನಾಶವನ್ನು ಹೊಂದಿದನು! ಇನ್ನೇನು ಬೇಕು? ಕಂದಾ, ಈಗ ನಿನ್ನ ಮಾವನೂ ನೀನೂ ಈ ದೈವಹೀನೆಯ ಯೋಗದಿಂದ ಕೇಡಿಗೊಳಗಾದರೆ ಮಾಡುವದೇನು? ಇಷ್ಟು ದಿನ ನೀವಿಬ್ಬರೂ ಸುರಕ್ಷಿತವಾಗಿದ್ದದ್ದೇ ಸಾಕು. ಇನ್ನು ನಾನು ಪ್ರಾಣವಿಡುವದಿಲ್ಲ. ಹಡೆದ ತಪ್ಪಿಗಾಗಿ ನಿನಗೆ ಸ್ತನಪಾನ ಮಾಡಿಸುವ ಉದ್ದೇಶದಿಂದ ನಾನು ಇಲ್ಲಿಯವರೆಗೆ ಪ್ರಾಣಧಾರಣ ಮಾಡಿದೆನು. ಈಗ ನೀನು ಕೈಮುಟ್ಟಿ ಉಣ್ಣುವಹಾಗಾದೆ; ಸ್ವತಂತ್ರವಾಗಿ ಆಡುವಹಾಗಾದೆ; ಸವಿಮಾತುಗಳಿಂದ ಜನರ ಮನಸ್ಸನ್ನು ಆಕರ್ಷಿಸುವ ಯೋಗ್ಯತೆಯು ನಿನ್ನಲ್ಲಿದೆ; ನಿನ್ನ ರೂಪ-ಪ್ರತಾಪಗಳನ್ನು ನೋಡಿದ ಮಾತ್ರದಿಂದ ಜನರು ನಿನ್ನಾಧೀನವಾಗುತ್ತಾರೆ. ಇನ್ನೇನು ಬೇಕು! ಬಾಳಾ, ಸಾಕು, ನಾಲ್ಕು ವರ್ಷ ನನ್ನ ದುಃಖವನ್ನು ಮರೆಯಿಸಿ, ನಿನ್ನ ಸುಂದರವಾದ ಚಾವಳಗಳನ್ನು ಸರಿಮಾಡುತ್ತ

ಮೊಲೆಯುಣಿಸುವಾಗ ಪ್ರಸನ್ನವದನನಾಗಿ ನನ್ನ ಮೋರೆಯನ್ನು ನೋಡಿ ಅಕಸ್ಮಾತ್ತಾಗಿ ಮೊಲೆಯುಣ್ಣುವವನ್ನು ಬಿಟ್ಟು ನಕ್ಕು ನನ್ನನ್ನು ಧನ್ಯಳನ್ನಾಗಿ ಮಾಡಿದೆ! ಇನ್ನು ನಾನು ಜೀವದಿಂದಿರುವದು ಎಷ್ಟು ಮಾತ್ರವೂ ನ್ಯಾಯ್ಯವಲ್ಲ. ಪ್ರಿಯಪತಿಯ ವಿಯೋಗದಲ್ಲಿ ಜೀವದಿಂದಿರುವದು ಸತೀಧರ್ಮಕ್ಕೆ ಗೌಣವಾಗಿರುವದು. ನಿನ್ನಂಥ ತೇಜಸ್ವಿಯು ನನ್ನ ಉದರದಲ್ಲಿ ಜನಿಸಿದ್ದೇ ನನ್ನ ಸ್ತ್ರೀಜನ್ಮದ ಸಾರ್ಥಕತೆಯು! ತೇಜೋವಿಶೇಷದಿಂದ ನೀನು ಜಗತ್ತಿನಲ್ಲಿ ಪ್ರಕಾಶಮಾನನಾಗು. ಸರ್ವೇಶನು ನಿನಗೆ ಉದ್ದಂಡವಾದ ಆಯುಷ್ಯವನ್ನೀಯಲಿ- ಈ ಲೋಕವಲ್ಲಿಯ ನನ್ನ ಕೆಲಸವು ಇಂದಿಗೆ ಮುಗಿದಂತಾಯಿತು.

ಈ ಮೇರೆಗೆ ಪದ್ಮನಯನೆಯು ಶೋಕಮಗ್ನಳಾಗಿ ಕಣ್ಣೀರು ಸುರಿಸುತ್ತ ಮಗನ ಮುಖವನ್ನು ನೋಡುತ್ತ ಕುಳಿತಿರಲು, ವಿಕ್ರಮಾರ್ಕನು ಒಮ್ಮಿಂದೊಮ್ಮೆ "ಅಪ್ಪಾ, ಅಪ್ಪಾ," ಎಂದು ಕನಕರಿಸುತ್ತ ಎದ್ದು ಕುಳಿತುಕೊಂಡನು. ಅವನು ತಾಯಿಯನ್ನು ಕುರಿತು—ಅವ್ವಾ, ಇನ್ನು ಸುಮ್ಮನಾಗು, ಅಳಬೇಡ. ನಾನು ಆ ಹುಲಿಯನ್ನು ಕೊಂದು ಬಂದೆನು; ಇನ್ನು ಮೇಲೆ ಅದು ನಿನ್ನನ್ನು ತಿನ್ನುವದಿಲ್ಲ. ಅಪ್ಪನು ಎಲ್ಲಿ ಇದ್ದಾನೆ? ಆತನಿಗೆ ಆ ಹುಲಿಯನ್ನು ತೋರಿಸುತ್ತೇನೆ; ಅನ್ನಲು, ಪದ್ಮನಯನೆಯ ದುಃಖವು ಒತ್ತರಿಸಿ ಬಂದಿತು. ಆಕೆಯು ಮಗನನ್ನು ಬಿಗಿಯಾಗಿ ಅಪ್ಪಿಕೊಂಡು ಮೊಲೆಯುಣಿಸಹತ್ತಿ ತಲೆಯಮೇಲೆ ಕೈಯಾಡಿಸುತ್ತ—ಕಂದಾ, ದೈವಹೀನೆಯಾದ ನಾನು ನಿನ್ನ ಲೀಲೆಗಳಿಗೆ ಲುಬ್ಧಳಾಗಿ ಪ್ರಾಣಧಾರಣ ಮಾಡಲಿಯಾ, ಅಥವಾ ಸತೀಧರ್ಮವನ್ನನುಸರಿಸಿ ಪ್ರಾಣತ್ಯಾಗಮಾಡಲಿಯಾ,. ಹೇಳು; ( ದುಃಖದಿಂದ ಕುತ್ತಿಗೆಯ ಶಿರಗಳು ಬಿಗಿದು ) ಒಟ್ಟಿಗೆ, ನನ್ನ ಪರಿಣಾಮವು ನೆಟ್ಟಗಿಲ್ಲ. ಎಲೈ ದುರ್ದೈವವೇ, ಹೀಗೆ ನೀನು ನೂಲಿನಿಂದಕುತ್ತಿಗೆಯನ್ನು ಕೊಯ್ಯುವದಕ್ಕಿಂತ, ತೀಕ್ಷ್ಣವಾದ ಖಡ್ಗದಿಂದ ಒಮ್ಮೆಲೆ ನನ್ನ ಶಿರಸ್ಸನ್ನು ಹಾರಿಸಬಾರದೆ! ಯಾಕೆ ನನ್ನನ್ನು ಇಷ್ಟು ಗೋಳಾಡಿಸುತ್ತೀ? ನಿನಗಾದರೂ ನಾನು ಇಷ್ಟು ಯಾಕೆ ಹೇಳಕೊಳ್ಳಬೇಕು? ಇಷ್ಟು ದೈನ್ಯವನ್ನಾದರೂ ಯಾಕೆ ತಾಳಬೇಕು? ಎಲೈ ಪದ್ಮನಯನೇ, ಸಾಕು; ಇನ್ನು ನಿನ್ನ ಮರುಗತನವು ಸಾಕು. ಮೋಹಪಾಶಕ್ಕೆ ಒಳಗಾಗಬೇಡ. ಪ್ರಾಣತ್ಯಾಗದ ವಿಷಯವಾಗಿ ನಿನ್ನ ಮಗನನ್ನೇ ಸಾಕ್ಷಿಯಾಗಿ ಇಟ್ಟು ಪ್ರತಿಜ್ಞೆಯನ್ನು ಮಾಡಿಬಿಡು, ಎಂದು ನುಡಿದು, ಆ ಸತ್ವಶೀಲೆಯು ಪ್ರತಿಜ್ಞೆ

ಹೆಸನ್ನು ಉಚ್ಚರಿಸುತ್ತಿರಲು, ಒಬ್ಬ ಋಷಿಯು ಅಕಸ್ಮಾತ್ತಾಗಿ ಅವಳೆದುರಿಗೆ ಬಂದು ನಿಂತನು!

ಪದ್ಮನಯನೆಯ ಮನಸ್ಸು ಶೋಕಾಗ್ನಿಯಿಂದ ಕಾದು ನಿರ್ದೋಷವಾಗಿತ್ತು, ಪುಣ್ಯರಾಶಿಯಂತೆ ಇದ್ದ ಆ ಬ್ರಹ್ಮರ್ಷಿಯ ಅಕಸ್ಮಾದ್ದರ್ಶನದಿಂದ ಆ ನಿರ್ದೋಷ ಮನಸ್ಸಿನಲ್ಲಿ ಕೂಡಲೇ ಅನಿರ್ವಾಚ್ಯವಾದ ಭಕ್ತಿಯು ಉತ್ಪನ್ನವಾಯಿತು. ಪರಲೋಕಹೊಂದಿದ ಸದ್ಗುರುವಾದ ಕಪಿಂಜಲಋಷಿಯು ಪ್ರತ್ಯಕ್ಷ ಎದುರಿಗೆ ನಿಂತುಕೊಂಡಿರಲು, ಪದ್ಮನಯನೆಯು ಎವೆಯಿಕ್ಕದೆ ನೋಡುತ್ತ, ವಿಕ್ರಮಾರ್ಕನನ್ನು ಋಷಿಯ ಚರಣಕ್ಕೆ ಕೆಡವಿದಳು. ಆ ಪುಣ್ಯವಂತಳು ತಾನೂ ಋಷಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಕೈಜೋಡಿಸಿ ಎದ್ದು ನಿಂತುಕೊಳ್ಳಲು, ಋಷಿಯು ವಿಕ್ರಮಾರ್ಕನ ತಲೆಯ ಮೇಲೆ ವರದಹಸ್ತವನ್ನಿಟ್ಟು, ಪದ್ಮನಯನೆಯನ್ನು ಸಂತೈಸಿ ನೆತ್ತಿಯನ್ನು ಮೂಸಿನೋಡಿ— ವತ್ಸೆ, ನಿನ್ನ ದುಃಖದಕಾಲವು ಮುಗಿಯುತ್ತ ಬಂದಿರಲು, ಪ್ರಾಣತ್ಯಾಗದ ಬಗ್ಗೆ ಪ್ರತಿಜ್ಞೆಯೇಕೆ? ಜಾಗರೂಕಳಾಗು. ನಿನ್ನ ಪತಿಯು ಸುರಕ್ಷಿತವಾಗಿದ್ದಾನೆ. ನೀನು ಪ್ರಾಣತ್ಯಾಗಮಾಡಿ ಆತನನ್ನು ದುಃಖಸಾಗರದಲ್ಲಿ ದೂಡಬೇಕೆನ್ನುತ್ತೀಯಾ? ನನ್ನ ಭವಿಷ್ಯವಚನದಲ್ಲಿಯೂ ನಿನ್ನ ಅವಿಶ್ವಾಸವೆ? ಸತ್ವದಿಂದ ಸಂಕಟಪರಂಪರೆಗಳನ್ನು ನೀಗಿ ಶುದ್ಧ ಸತ್ವಶಾಲಿಗಳಾಗಿ ಉಳಿದವರ ಕೀರ್ತಿಯೇ ಈ ಜಗತ್ತಿನಲ್ಲಿ ಹೊಳೆಯುವದು. ಪಾಂಡವರನ್ನು ನೋಡು, ಹರಿಶ್ಚಂದ್ರನನ್ನು ನೆನಪು ಮಾಡಿಕೊ, ಇತ್ತಿತ್ತ ಕಲಿಯುಗದಲ್ಲಿ ಆಗಿಹೋದ ಚಂದ್ರಗುಪ್ತನ ಚರಿತ್ರವನ್ನು ಪರಶೀಲಿಸು. ಇನ್ನು ನೀನು ದುಃಖಕ್ಕೆ ಇಂಬುಗೊಡಬೇಡ, ಶಾಂತಚಿತ್ತಳಾಗು. ಆಗುವದೆಲ್ಲ ನಿನ್ನ ಹಿತಕ್ಕೇ ಆಗುತ್ತದೆಂದು ಗಟ್ಟಿಯಾಗಿ ನಂಬು. ನಿನಗೆ ಹಲವು ದುಃಖದ ಪ್ರಸಂಗಗಳು ಒದಗಿದ್ದುನಿಜವು; ಆದರೆ ಆ ಪ್ರಸಂಗಗಳಲ್ಲೆಲ್ಲ ಪರಮೇಶ್ವರನು ನಿನ್ನನ್ನು ರಕ್ಷಿಸಿ ಕಲ್ಯಾಣಮಾಡುತ್ತಲೇ ಬಂದಿರುವದನ್ನು ಮರೆತು ಕೃತಘ್ನಳಾಗಬೇಡ. ಪ್ರಾಣತ್ಯಾಗವು ಕೃತಘ್ನತೆಯ ಲಕ್ಷಣವಲ್ಲವೆ? ಇರಲಿ, ಆದದ್ದು ಒಳಿತಾಯಿತು. ನಿಮ್ಮಂಥ ಶುದ್ಧಾಂತಃಕರಣದ ಪುಣ್ಯಶಾಲಿಗಳಿಗೆ ದೋಷಕೊಡುವದಾದರೂ ಅಪರಾಧವೆಂದೇ ತಿಳಿಯಬೇಕು. ನೀನು ಪ್ರಾಣತ್ಯಾಗಕ್ಕೆ ಸಿದ್ಧಳಾಗದಿದ್ದರೆ ನಾನೆಲ್ಲಿ ನಿನಗೆ ದರ್ಶನಕೊಡುತ್ತಿದ್ದೆನು? ನಿಮ್ಮಂಥ ಸದ್ಭಕ್ತರನ್ನು

ಸಮಾಧಾನಗೊಳಿಸುವದಕ್ಕಾಗಿಯೇ ಪರಮೇಶ್ವರನು ಪ್ರಸಂಗಕ್ಕೆ ತಕ್ಕಂತೆ ಹಲವು ರೂಪಗಳಿಂದ ಪ್ರಕಟವಾಗಿರುವನು. ದ್ರೌಪದಿಯ ವಸ್ತ್ರಾಪಹರಣದ ಕಾಲದಲ್ಲಿ ಗುಪ್ತವಾಗಿ ಆತನು ಆ ಪತಿವ್ರತೆಯ ಬೆನ್ನುಕಟ್ಟಿ ನಿಲ್ಲಬೇಕಾಯಿತು; ಧರ್ಮರಾಜನು ಯಜ್ಞಮಾಡಿ ಅಭಿಮಾನಪಟ್ಟು ಅಜ್ಞಾನಕ್ಕೆ ಒಳಗಾಗುತ್ತಿರಲು, ಆ ಭಗವಂತನು ಮುಂಗಲಿಯಾಗಿ ಅವನ ಅಜ್ಞಾನವನ್ನು ದೂರಮಾಡಬೇಕಾಯಿತು; ಅರ್ಜುನನ ಅನುತಾಪವನ್ನು ದೂರಮಾಡಲಿಕ್ಕೆ ಆತನು ವಿರಾಟರೂಪವನ್ನು ಪ್ರಕಟಿಸಬೇಕಾಯಿತು; ನಾಮದೇವನ ಸಿದ್ಧಸ್ಥಿತಿಯನ್ನು ಸ್ಥಾಪಿಸುವದಕ್ಕಾಗಿ ನಾಯಿಯಾಗಬೇಕಾಯಿತು. ದಶಾವತಾರಗಳಾದರೂ ಭಕ್ತರ ಉದ್ಧಾರಕ್ಕಾಗಿಯೇ ಭಗವಂತನಿಂದ ಎತ್ತಲ್ಪಟ್ಟಿರುವವು. ಅಂದಬಳಿಕ ದೇವರನ್ನು ಮನಸ್ಸಿಗೆ ಬಂದಹಾಗೆ ಕುಣಿಸುವ ಸತ್ವಶಾಲಿಗಳು ನಿಮ್ಮಂಥ ನಿರ್ಮಲಾಂತಃಕರಣದ ಸದ್ಭಕ್ತರಲ್ಲದೆ ಮತ್ತೆ ಯಾರಿರುವರು? ವತ್ಸೇ, ನನ್ನ ಮಾತನ್ನು ಮರೆಯಬೇಡ, ನಿನ್ನ ದುಃಖದಕಾಲವು ಮುಗಿಯುತ್ತ ಬಂದಿರುವದೆಂದು ಇನ್ನೊಮ್ಮೆ ಹೇಳುತ್ತೇನೆ. ಏಳು, ವಿಕ್ರಮಾರ್ಕನು ಹಸಿದಿದ್ದಾನೆ, ಆತನಿಗೆ ಅಟ್ಟಿಸಿದ ಹಾಲು ಕೊಡು, ಎಂದು ಹೇಳುತ್ತಿರಲು, ಅತ್ತ ಹೊರಗೆ ಮಂಜುಘೋಷೆಯು—ದೇವೀ, ಪದ್ಮನಯನೆ, ಏನು ಮಾಡುತ್ತೀ, ಎಂದು ನುಡಿಯುತ್ತ ಹಸನ್ಮುಖಿಯಾಗಿ ಅಲ್ಲಿಗೆ ಬಂದಳು. ಅಷ್ಟರಲ್ಲಿ ಋಷಿಯು ಅಂತರ್ಧಾನವನ್ನು ಹೊಂದಿದ್ದನು! ಆ ಋಷಿವರ್ಯನ ಆಶ್ಚರ್ಯಕರವಾದ ಅಂತರ್ಧಾನದ ಸಂಗಡ ಪದ್ಮನಯನೆಯ ದುಃಖದ ಅಂತರ್ಧಾನವೂ ಆಯಿತು!!



## ೧೩ ನೆಯ ಪ್ರಕರಣ.

## ಕ್ರಿಯಾಸಿದ್ಧಿ.



**ಈ ಮೇರೆಗೆ ಕ್ಷಣಮಾತ್ರ ಮಿಂಚಿಹೋದ ಅಮಾನುಷಕೃತಿಯಿಂದ ಪದ್ಮನಯನೆಯ ದುಃಖವು ಅಳಿದುಹೋಗಿ, ಆಕೆಯು ತನ್ನ ಬಳಿಗೆ ಪ್ರೀತಿಯಿಂದಬಂದ**

ಮಂಜುಘೋಷೆಯನ್ನು ಆದರಿಸಿದಳು. ಪಾಪ! ಮಂಜುಘೋಷೆಗೆ ಯಾವ ಸಂಗತಿಯೂ ಗೊತ್ತಾಗಲಿಲ್ಲ. ಆಕೆಯು ಒಳಗೆ ಬಂದದ್ದನ್ನು ನೋಡಿದಕೂಡಲೆ ದಿಟ್ಟನಾದ ವಿಕ್ರಮಾರ್ಕನು ದುಡುದುಡು ಓಡಿಹೋಗಿ ಆಕೆಯನ್ನು ಅಪ್ಪಿಕೊಂಡದ್ದರಿಂದ ಅನ್ಯವಿಚಾರಗಳಿಗೆ ಆಕೆಗೆ ಆಸ್ಪದವೇ ಉಳಿಯಲಿಲ್ಲ. ಆ ಸರಳ ಹೃದಯದ ಮಂಜುಘೋಷೆಯು ವಿಕ್ರಮಾರ್ಕನನ್ನು ಎತ್ತಿ ಎದೆಗವಚಿಕೊಂಡು, ಪ್ರೀತಿಯಿಂದ ಮುದ್ದಿಟ್ಟು ಮೂರ್ಧ್ನಾಘ್ರಾಣಮಾಡುತ್ತ ಬಂದು ಕುಳಿತುಕೊಂಡಳು. ಇವನ್ನು ನೋಡಿ ಪದ್ಮನಯನೆಯು ಗದ್ಗದಕಂಠೆಯಾಗಿ ಕೃತಜ್ಞತೆಯಿಂದ—ಸಖೀ, ಮಂಜುಘೋಷೆ, ನಮ್ಮ ತಾಯಿ ಮಕ್ಕಳಮೇಲೆ ನಿನ್ನಲ್ಲೋಭವೆಷ್ಟುವ್ವಾ! ಹಡೆದಮಕ್ಕಳನ್ನು ಕೂಡ ಈ ಪರಿ ಪ್ರೀತಿಸುವವರು ವಿರಲ! ನಿನ್ನ ಈ ಸರಳ ಹೃದಯಕ್ಕಾಗಿ ಇನ್ನು ವರ್ಷ ತುಂಬುವದರೊಳಗೆ ನನ್ನ ವಿಕ್ರಮಾರ್ಕನಂಥ ಮಗನು ನಿನಗೆ ಹುಟ್ಟುವನು—ನಿಶ್ಚಯವಾಗಿ ಹುಟ್ಟುವನು, ಎಂದು ತಟ್ಟನೆ ನುಡಿದಳು. ಇದನ್ನು ಕೇಳಿ ಮಂಜುಘೋಷೆಗೆ ಪರಮಾನಂದವಾಗಿ, ಆಕೆಯು—ಅಕ್ಕಾ, ನಿನ್ನಂಥ ಸತ್ವಶೀಲೆಯಾದ ಸತಿಯ ಆಶೀರ್ವಾದವು ಸುಳ್ಳಾಗುವದೆ? ಆಗಲೆಮ್ಮಾ, ನಿನ್ನ ಬಾಯಿಹರಿಕೆಯಿಂದ ನಮ್ಮ ಕುಲಕೋಟಿಯು ಉದ್ಧೃತವಾಗಲಿ! ನಾವು ದಂಪತಿಗಳು ಸಂತತಿಯಾಗದ್ದರಿಂದ ಅಸಮಾಧಾನಪಡುತ್ತಿರಲು, ನಮ್ಮನ್ನು ಸಮಾಧಾನಗೊಳಿಸುವದಕ್ಕಾಗಿಯೇ ಮಹಾ ಸತಿಯಾದ ನೀನು ಪ್ರಕಟವಾಗಿರುತ್ತೀ, ಎಂದು ಅಭಿನಂದಿಸಿದಳು. ಶ್ರೀ ಗುರುದರ್ಶನದಿಂದ ದೈವೀಭಾವನನ್ನು ವಹಿಸಿದ್ದ ಪದ್ಮನಯನೆಯ ಅಚಿಂತ್ಯವಾದ ಭವಿಷ್ಯವಾಣಿಯು ಸುಳ್ಳಾಗಲಿಲ್ಲ. ವರ್ಷ ತುಂಬುವದರೊಳಗೆ ಮಂಜುಘೋಷೆಯಿಂದ ರವಿವರ್ಮನು ಜನಿಸಿ, ಪದ್ಮನಯನೆಯಲ್ಲಿದ್ದ ಅವಳ ಭಕ್ತಿ-ವಿಶ್ವಾಸಗಳನ್ನು ಹೆಚ್ಚಿಸಿದನು. ಸಿಂಹಕೇತುವಿನ ರಾಜಗೃಹವು ರವಿವರ್ಮನ ಅನಿಮಿತ್ತ ಹಾಸದಿಂದ ಅಲಂಕರಿಸಲ್ಪಟ್ಟಿತು!

ಪ್ರಿಯವಾಚಕರೇ, ವಿಕ್ರಮಾರ್ಕ-ರವಿವರ್ಮರ ಉಭಯರ ಆನಂದದಲ್ಲಿ ನಾವು ಕಮಲಾಕ್ಷ-ಸುಮತಿಗಳನ್ನು ಮರೆತುಬಿಟ್ಟೆವು. ನಗಿಸುವವರನ್ನು ನೋಡಿ ಸಮಾಧಾನಪಡುವದಕ್ಕಿಂತ, ಅಳುವವರ ಕಣ್ಣು ಒರಸಲಿಕ್ಕೆ ಮನುಷ್ಯನ ಮನಸ್ಸು ಮೆಚ್ಚುವದು ಸ್ವಾಭಾವಿಕವು. ನಡೆಯಿರಿ, ಆ ನೂತನ ಮಿತ್ರರ ಗತಿಯು ಏನಾಯಿತೆಂಬದನ್ನು ವಿಚಾರಿಸುವಾ, ಪದ್ಮನಯನೆಯನ್ನು

ಹುಡುಕುವದಕ್ಕಾಗಿ ಶಿವಾಲಯದಿಂದ ಹೊರಟ ಆವರು ಹಲವು ದೇಶಗ ಳನ್ನೂ, ಅರಣ್ಯಗಳನ್ನೂ, ಪರ್ವತಗಳನ್ನೂ ತಿರುಗಿ ತಿರುಗಿ ದಣಿದರೂ ಪದ್ಮ ನಯನೆಯ ಶೋಧವಾಗಲಿಲ್ಲ. ಆಗ ಅವರು ತಮ್ಮೊಳಗೆ—ನಮ್ಮಿಂದ ಇದುವ ರೆಗೆ ರಾಜಪುತ್ರಿಯ ಶೋಧವಾಗಲಿಲ್ಲ. ಅವಳೇನು ಮರಣಹೊಂದಿದಳೋ, ಜೀವದಿಂದಿರುವಳೋ ತಿಳಿಯದು. ಏನೇ ಆಗಿರಲಿ, ಆವಳ ಗೊತ್ತು ಹತ್ತುವ ವರೆಗೆ ನಾವು ಪ್ರತಸ್ಥರಾಗಿಯೇ ಇರತಕ್ಕದ್ದು. ಈಗ ನಾಲ್ಕು ವರ್ಷ ತಿರುಗಿದೆವು. ಪಟ್ಟಣಗಳು ಉಳಿಯಲಿಲ್ಲ, ಹಳ್ಳಿಗಳು ಉಳಿಯಲಿಲ್ಲ, ಅರಣ್ಯ ಪ್ರದೇಶಗಳು ಉಳಿಯಲಿಲ್ಲ. ಇನ್ನು ಮೇಘನಾದನ ರಾಜಧಾನಿಯಾದ ಶೋ ಣಿತಪುರಕ್ಕೆ ಹೋಗಿ ಹುಡುಕುವದೊಂದು ಉಳಿದದೆ. ರಾಕ್ಷಸರು ಬಹು ಮಾಯಾವಿಗಳು. ಮೇಘನಾದನನ್ನು ಕೊಂದ ಸೇಡಿಗಾಗಿ ಅವರು ಪದ್ಮನಯ ನೆಯನ್ನು ಅಪಹರಿಸಿ ಒಯ್ದಿದ್ದರೂ ಒಯ್ದಿರಬಹದು; ಅದ್ದರಿಂದ ಒಂದು ಹಡಗವನ್ನು ಗೊತ್ತು ಮಾಡಿಕೊಂಡು ಸಿಂಹಲದ್ವೀಪಕ್ಕೆ ಹೋಗತಕ್ಕದ್ದು, ಎಂದು ಯೋಚಿಸಿ, ದಕ್ಷಿಣಾಭಿಮುಖವಾಗಿ ಅವರು ಮಾರ್ಗವನ್ನು ಕ್ರಮಿ ಸತೊಡಗಿದರು.

ಒಂದಾನೊಂದು ದಿವಸ ಆ ತರುಣರು ಮಾರ್ಗಶ್ರಮದಿಂದ ಬಳಲಿ ಮಧ್ಯಾಹ್ನಕ್ಕೆ ಒಂದು ಸರೋವರದ ತೀರವನ್ನು ಹೊಂದಿದರು. ಅಲ್ಲಿಯ ಅಪೂ ರ್ವ ಸೃಷ್ಟಿಸೌಂದರ್ಯವು ಅವರ ಮನಸ್ಸನ್ನು ಎಳಕೊಂಡಿತು. ಸರೋವರದ ತೀರದ ವಿಶಾಲವಾದ ಆಲದಮರಕ್ಕೆ ಮುಟ್ಟಿದ್ದೇತಡ, ಅವರು ತಮ್ಮ ಗಂಟುಗ ಪಡಿಗಳನ್ನು ಗಿಡದಬುಡದಲ್ಲಿಟ್ಟು ಉಸ್ಸೆಂದು ಕುಳಿತುಕೊಂಡರು. ಪರಸ್ಪರರ ಮುಖಾವಲೋಕನದಿಂದ ಇಬ್ಬರ ಅಂತಃಕರಣಗಳು ಒಮ್ಮಿಂದೊಮ್ಮೆ ಉಕ್ಕಿಬಂ ದವು. ಅವರು ಆತ್ಮಸಂಯಮನ ಮಾಡದಿದ್ದರೆ, ಇಬ್ಬರ ಕಣ್ಣುಗಳಿಂದಲೂ ನೀರು ಸುರಿಯತಕ್ಕದೇ; ಈ ಆಕಸ್ಮಿಕ ಮನೋವಿಕಾರದ ಉತ್ಪತ್ತಿಯ ಕಾರಣ ವನ್ನು ಮನಸ್ಸಿನಲ್ಲಿ ಶೋಧಿಸುತ್ತ ಅವರಿಬ್ಬರು ಕೆಲಹೊತ್ತು ಸರೋವರವನ್ನು ನೋಡುವವರಂತೆ ಸುಮ್ಮನೆ ಕುಳಿತುಕೊಂಡರು. ಬರಬರುತ್ತ ಸುಮತಿಯ ಮುಖಮುದ್ರೆಯು ಗಂಭೀರವಾಗಹತ್ತಿತು. ಕಮಲಾಕ್ಷನು ತನ್ನ ಹೃದ್ಗತ ವನ್ನು ಹೊರಗೆಡವಲು ಆತುರಪಡಹತ್ತಿದನು. ಈ ಸ್ಥಿತಿಯಲ್ಲಿಯೂ ಕೆಲಕಾ ಲವು ಕ್ರಮಿಸಿದಮೇಲೆ ಕಮಲಾಕ್ಷನು ಸುಮತಿಯನ್ನು ಕುರಿತು—ಸನ್ಮಾನ

ಣೀಯನಾದ ಮಿತ್ರನೇ, ನಿಸ್ಪೃಹನಾದ ನೀನು ರಾಜಪುತ್ರಿಯ ಸಲುವಾಗಿ ಶ್ರಮಪಡುವದನ್ನು ನೋಡಿ ನನಗೆ ಬಹಳ ಅಸಮಾಧಾನವಾಗುತ್ತದೆ. ವಿಷಯಾಸಕ್ತರಾದ ನಮ್ಮ ಸಹವಾಸದಿಂದ ನೀನೂ ತಪಶ್ಚರ್ಯವನ್ನು ಬಿಟ್ಟು ಸಾಮಾನ್ಯರಂತೆ ದುಃಖಕ್ಕೆ ಒಳಗಾದೆ! ಪದ್ಮನಯನೆಯು ಮೋಹರೂಪವಾದ ಉಪಾಧಿಯು ನಿನ್ನ ಈಶ್ವರ ಚಿಂತನವನ್ನು ಬಿಡಿಸಿತು. ನಿನ್ನ ಸದಾನಂದ ಸ್ಥಿತಿಗೆ ಭಂಗವನ್ನು ತರುವದಾದರೂ ಒಂದುಬಗೆಯ ಅಪರಾಧವಾಗಿಯೇ ನನಗೆ ತೋರುತ್ತದೆ. ನೋಡಿದೆಯಾ! ಸತ್ಸಂಗದ ಯೋಗದಿಂದ ನಿಃಸಂಗನಾದ ನೀನು, ಮೋಹರಹಿತನಾಗಿ ಶಾಂತಚಿತ್ತನಾಗುವದನ್ನು ಬಿಟ್ಟು, ಸಾಂಸಾರಿಕರಾದ ನಮ್ಮ ಶಳವಿಗೆ ಬಿದ್ದು ತೋಳಲುತ್ತಿರುವೆ! ನಿನ್ನನ್ನು ಈ ತಾಪಕ್ಕೆ ಗುರಿಮಾಡಿದ್ದಕ್ಕಾಗಿ ಪರಮೇಶ್ವರನ ದಂಡನೆಗೆ ಯಾರು—ಯಾರು ಗುರಿಯಾಗುವೆವೋ ಪರಮೇಶ್ವರನೇ ಬಲ್ಲ! ವಿಪ್ರವರ್ಯ, ಇಲ್ಲಿಗೆ ಪದ್ಮನಯನೆಯ ಬೋಧವು ಸಾಕು; ಇನ್ನು ಆಯಾಸಪಡಬೇಡ. ನೀನು ಯಥೇಚ್ಛವಾಗಿ ಹೋಗು. ಪದ್ಮನಯನೆಯ ಅಗಲುವಿಕೆಯ ಕಿಚ್ಚು ನನ್ನ ಹೃದಯದಲ್ಲಿ ಹೊತ್ತುತ್ತಿರುವದರಿಂದ ನಾನು ಭ್ರಮಿಷ್ಟನಂತೆ ಅತ್ತಿತ್ತ ಅಲೆದಾಡಿ ಕಡೆಗೆ ನಾಶಹೊಂದುವೆನು. ನಮ್ಮಂಥ ಮೋಹಪರವಶರಿಗೆ ಇಂಥ ಶಿಕ್ಷೆಯಾಗುವದು ನ್ಯಾಯವು, ಎಂದು ನುಡಿದನು.

ಕಮಲಾಕ್ಷನ ಮಾತುಗಳನ್ನು ಕೇಳಿ ಸುಮತಿಯು—ರಾಜಪುತ್ರಾ, ನಿನ್ನ ಮಾತನ್ನು ನಾನು ಅಲ್ಲಗಳೆಯಲಾರೆನು. ನಿನ್ನ ಅನುಭವವನ್ನು ನೀನು ಹೇಳುತ್ತೀ. ಅನುಭವಕ್ಕೆ ಬಾರದ ದೊಡ್ಡ—ದೊಡ್ಡ ವೇದಾಂತದ ಮಾತುಗಳನ್ನು ಆಡುವದೂ, ಕೇಳುವದೂ ವಿಕಲ್ಪಕ್ಕೆ ಕಾರಣವು. ನೀನು ಹೇಳಿದಂತೆ ಸತ್ಸಂಗ ಮಾಡುವದೂ, ಈಶ್ವರನಲ್ಲಿ ಮನಸ್ಸನ್ನಿಡುವದೂ, ವಿಷಯದ ಬಲೆಗೆ ಸಿಲುಕದಿರುವದೂ ಹಿತಕರವು; ಆದರೆ ಪ್ರಸಂಗವಶದಿಂದ ಮಹಾತ್ಮರೂ ಕೂಡ ದುಷ್ಟರ ನೆರಳಿಗೆ ಹೋಗಬೇಕಾಗುವದು, ಈಶ್ವರನಲ್ಲಿದ್ದ ಮನಸ್ಸನ್ನು ಅನ್ಯ ಉಪಾಧಿಯಲ್ಲಿ ಸೇರಿಸಬೇಕಾಗುವದು, ವಿಷಯದ ಬಲೆಗೆ ಬೀಳಬೇಕಾಗುವದು. ವಿಚಾರಮಾಡು; ಭೀಷ್ಮ—ದ್ರೋಣಾದಿಗಳು ದುರ್ಯೋಧನನ ಸಂಗವನ್ನು ಯಾಕೆ ಮಾಡಿದರು? ಶ್ರೀ ರಾಮದಾಸಸ್ವಾಮಿಗಳು ತಮ್ಮ ಈಶ್ವರಚಿಂತನದಲ್ಲಿಯೇ ಇರದೆ ಆಗಾಗ್ಗೆ ರಾಜಕರಣದಲ್ಲಿ ಯಾಕೆ ಸೇರುತ್ತಿದ್ದರು? ಶ್ರೀ ಶಂಕರಾಚಾರ್ಯರು ಅಮರಕರಾಜನ ರಾಣಿಯರ ವಿಲಾಸದ ಬಲೆಗೆ ಯಾಕೆ ಸಿಕ್ಕರು?

ಇವರೆಲ್ಲರೂ ಸದುದ್ದೇಶದಿಂದಲೇ ಆಗಲಿ, ಅಡ್ಡಮಾರ್ಗವನ್ನು ಹಿಡಿದದ್ದಕ್ಕಾಗಿ ತಾಪಪಡಲೇಬೇಕಾಯಿತು; ಆದರೆ ಆ ತಾಪವು ಜನಹಿತಕ್ಕೆ, ಅರ್ಥಾತ್ ಪರೋಪಕಾರಕ್ಕೆ ಕಾರಣವಾದದ್ದರಿಂದ ಸ್ತೋತ್ರಾರ್ಹವಾಗಿರುವದು. ಮನಸ್ಸಿಗೆ ದೊರೆಯತಕ್ಕ ಸಂಗಗಳು ಎರಡು. ಒಂದು ಸತ್ಸಂಗ, ಮತ್ತೊಂದು ದುಸ್ಸಂಗ. ದೇವರಲ್ಲಿ ಧರ್ಮದಲ್ಲಿ ಅಥವಾ ಸಜ್ಜನರಲ್ಲಿ ಮನಸ್ಸನ್ನಿಡುವದು ಸತ್ಸಂಗ, ಬೇರೆಕಡೆಯಲ್ಲಿ ಮನಸ್ಸನ್ನಿಡುವದು ದುಸ್ಸಂಗ. ಸ್ವತಃ ಮನಸ್ಸು ವಿಕಾರರಹಿತವಾದದ್ದು, ಅಂದರೆ ಗುಣಹೀನವು. ಅದನ್ನು ಶುಭ್ರವಸ್ತ್ರಕ್ಕೆ ಹೋಲಿಸಬಹುದು. ಸಂಗದ ಯೋಗದಿಂದ ಸೇರಿದ ಗುಣಗಳಂತೆ ಅದು ಕಾರ್ಯಮಾಡತೊಡಗುತ್ತದೆ; ಆದ್ದರಿಂದ ಮನಸ್ಸು ಸಂಗದಯೋಗದಿಂದ ನಮ್ಮಲ್ಲಿ ಸೇರುವ ಗುಣಗಳ ಪ್ರದರ್ಶನದ ರಂಗಸ್ಥಳವೆಂದು ಹೇಳಬಹುದು. ನಿನ್ನ ಮಾತಿನಂತೆ ನಾನು ದುಸ್ಸಂಗದಲ್ಲಿರುತ್ತೇನೆಂದು ಒಡಂಬಡುತ್ತೇನೆ; ಆದರೆ ಪರೋಪಕಾರಕ್ಕಾಗಿಯೇ ನಾನು ಆ ಸಂಗವನ್ನು ಮಾಡಿದ್ದರೆ, ಅದು ನನ್ನನ್ನು ಬಾಧಿಸಲಾರದೆಂಬದಿಷ್ಟೇ ಅಲ್ಲ, ಸತ್ಸಂಗ ಮಾಡಿದ್ದಕ್ಕಿಂತ ಹೆಚ್ಚು ಫಲವನ್ನು ಕೊಡುವದು. ಪರೋಪಕಾರವೆಂದು ನಾವು ಸಂಸಾರವನ್ನು ಮಾಡಿದರೆ ಬಾಧಿಸುವದಿಲ್ಲೆಂದು ದೊಡ್ಡವರು ಹೇಳುವವರ ಮರ್ಮವನ್ನು ವಿಚಾರಿಸು; ಅಂದರೆ ಪದ್ಮನಯನೆಯ ಶೋಧದ ಕಾರ್ಯವು ಕಡಮೆಯ ತರದ್ದೆಂದು ನೀನು ಹೇಳಲಿಕ್ಕಿಲ್ಲ. ಇರಲಿ. ಏಳು, ಬಿಸಿಲತಾಪವು ಬಹಳವಾಗಿದೆ. ಈ ಸ್ವಚ್ಛವಾದ ಸರೋವರದಲ್ಲಿ ಯಥೇಚ್ಛವಾಗಿ ಈಸೋಣ. ಸ್ನಾನವಾದಮೇಲೆ ಹಣ್ಣು—ಹಂಪಲಗಳನ್ನು ತಿಂದು ವಿಶ್ರಮಿಸಿ ಮತ್ತಿಷ್ಟು ಮಾತಾಡೋಣವಂತೆ. ಒಟ್ಟಿಗೆ, ಸ್ವೀಕೃತಕಾರ್ಯದಲ್ಲಿ ದೇಹಪಾತವಾದರೂ ಶ್ರೇಯಸ್ಕರವೋ, ಅದಕ್ಕೆ ದೇವರುಮೆಚ್ಚುವನು. ಕಷ್ಟಕ್ಕೆ ಗುರಿಯಾಗದೆ ಹಚ್ಚಗಿದ್ದಲ್ಲಿ ಮೇದು ಬೆಚ್ಚಗಿದ್ದಲ್ಲಿ ಮಲಗುವವನು ಉಂಡಿಗಳ್ಳನವು. ಹೀಗೆ ಎದೆ ತಾಕುವದು ಹಿತಕರವಲ್ಲ, ಎಂದು ಹೇಳಿದನು.

ಸುಮತಿಯ ಅಪ್ಪಣೆಯನ್ನು ಶಿರಸಾವಹಿಸಿ ಕಮಲಾಕ್ಷನು ಏಳಲು, ಅವರಿಬ್ಬರೂ ಸರೋವರದಲ್ಲಿ ಈಸಬಿದ್ದರು. ಇಬ್ಬರೂ ಪ್ರಾಯಸ್ಥರು, ಮೇಲಾಗಿ ಈಸುವದರಲ್ಲಿ ಪ್ರವೀಣರು. ಕೇಳುವದೇನು? ಸರೋವರವು ಅಪರಿಚಿತವಾದದ್ದೆಂಬದನ್ನು ಅವರು ಮನಸ್ಸಿನಲ್ಲಿ ತರಲಿಲ್ಲ, ನಿರ್ಜನ ಪ್ರದೇಶವೆಂದು ಅವರು ಬೆದರಲಿಲ್ಲ, ನೀರಿನನೆಲೆ ಹೆಂಗಸಿನ ನೆಲೆ ತಿಳಿಯುವದು ಕಠಿಣವೆಂಬ ಲೋಕೋಕ್ತಿ

ಸ್ತ್ರೀಯನ್ನು ಅವರು ಲಕ್ಷ್ಯಕ್ಕೆ ತರಲಿಲ್ಲ. ನಿರ್ಭಯದಿಂದ ಅವರು ಸರೋವರದಲ್ಲಿ ಈಸಾಡ ತೊಡಗಿದರು. ವ್ಯಾಯಾಮದ ಸಾಧನಗಳಲ್ಲಿ ಈಸುವ ಸಾಧನವು ಮೇಲಾದದ್ದು. ಆ ತರುಣರಿಬ್ಬರು ಮನಸೋಕ್ತವಾಗಿ ಈಸಿ, ದಣಿದು ದಂಡೆಗೆ ಬಂದರು. ಕಮಲಾಕ್ಷನು ಮೈ ಒರಸಿಕೊಂಡು ಒಣ ವಸ್ತ್ರವನ್ನು ಉಟ್ಟುಕೊಳ್ಳತೊಡಗಿದನು. ಆಗ ಸುಮತಿಯು ಒಬ್ಬನೇ ಮತ್ತೆ ಸರೋವರದಲ್ಲಿ ದುಮುಕಿ ಮಾರಗೈ ಹಾಕುತ್ತ ಬಹು ದೂರ ಹೋದನು. ಅದನ್ನು ನೋಡಿ ಕಮಲಾಕ್ಷನು ದೋತರ ಉಟ್ಟುಕೊಳ್ಳುತ್ತ—ವಿಪ್ರೋತ್ತಮಾ. ಸಾಕು, ಇನ್ನು ಏಳು; ಯಾವದೂ ಅತಿಯಾಗಬಾರದು; ಹೊಟ್ಟೆ ಬಹಳ ಹಸಿದದೆ; ಎಂದು ಹೇಳುತ್ತಿರಲು, ಸುಮತಿಯು ಒಮ್ಮೆಲೆ ನೀರಲ್ಲಿ ಮುಳುಗಿದನು. ಬಹಳ ಹೊತ್ತಾದಗೂ ಅವನು ಮೇಲಕ್ಕೇಳದ್ದರಿಂದ ಕಮಲಾಕ್ಷನು ಗಾಬರಿಯಾಗಿ ನೀರಲ್ಲಿ ಹಾರಿಕೊಂಡು ಸುಮತಿಯ ಬಳಿಗೆ ಹೋಗಹತ್ತಿದನು. ಅಷ್ಟರಲ್ಲಿ ಸುಮತಿಯು ಒಂದು ಮೊಸಳೆಯು ಸಂಗಡ ಗುದಮುರಿಗೆ ಹಾಕುತ್ತ ಮೇಲಕ್ಕೆದ್ದನು. ಅದನ್ನು ನೋಡಿ ಕಮಲಾಕ್ಷನು ತ್ವರೆಯಿಂದ ಮುಂದಕ್ಕೆ ಸಾಗಲು, ಸುಮತಿಯು ಮೊಸಳೆಯೊಡನೆ ಮತ್ತೆ ಮುಳುಗಿದವನು ಬಹಳ ಹೊತ್ತಾದರೂ ಮೇಲಕ್ಕೇಳಲಿಲ್ಲ. ಕಮಲಾಕ್ಷನ ಕೈಗಳು ಸೋತವು. ಆತನು ಪ್ರಯಾಸದಿಂದ ದಂಡೆಗೆ ಮುಟ್ಟಿದನು. ಮುಂದೆ ಏನು ಮಾಡಬೇಕೆಂಬದು ಆತನಿಗೆ ತೋಚದಾಯಿತು. ಅವನು ಮೂಢನಂತೆ ಸುಮ್ಮನೆ ಸರೋವರದ ಪಾವಟಿಗೆಯ ಮೇಲೆ ಕುಳಿತುಬಿಟ್ಟನು. ಕೆಲಹೊತ್ತಿನ ಮೇಲೆ ಅವನ ಕಣ್ಣೊಳಗಿಂದ ನೀರುಗಳು ಹೋಗಹತ್ತಿದವು. ಅವನು ಕೇವಲ ವೈರಾಗ್ಯವನ್ನು ತಾಳಿ ನಿರಾಶೆಯಿಂದ—ಪ್ರಿಯಮಿತ್ರಾ, ಬ್ರಾಹ್ಮಣಶ್ರೇಷ್ಠಾ, ತಪಸ್ಸಿದ್ಧಾ, ಯಥೇಚ್ಛವಾಗಿ . ಹೋಗೆಂದು ನಾನು ಅಂದ ಮಾತಿಗೆ ಈ ಬಗೆಯಾಗಿ ಪ್ರತ್ಯುರವನ್ನು ಕೊಟ್ಟೆಯಾ? ಸ್ವೀಕೃತಕಾರ್ಯದಲ್ಲಿ ದೇಹಪಾತವಾದರೂ ಶ್ರೇಯಸ್ಕರವೆಂದು ಉಪದೇಶಿಸಿದ ನೀನು ಜಲಸಮಾಧಿಯನ್ನು ಹೊಂದಿದೆಯಲ್ಲ! ಆಗಲಿ, ಈ ದೈವಹೀನನಾದ ಕಮಲಾಕ್ಷನಿಗೆ ಯಾವ ಆಶೆಯೂ ಉಳಿಯದ್ದರಿಂದ, ಅವನು ದುಃಖಿಸಿಯಾದರೂ, ಕಣ್ಣೀರುಸುರಿಸಿಯಾದರೂ, ಅಸಮಾಧಾನಪಟ್ಟಾದರೂ, ಚಿಂತೆಯಿಂದ ಕೊರಗಿಯಾದರೂ ಮಾಡುವದೇನು? ಇಲ್ಲಿಗೆ ನನ್ನ ದುಃಖದ ಪರಿಸಮಾಪ್ತಿಯು ಆಯಿತು. ಇನ್ನು ನಾನು ಈ ಕೆಟ್ಟ ದೇಹವು ಬೀಳುವವರೆಗೆ ಮುನಬಂದತ್ತ ತಿರುಗುವೆನು. ಮರಣವು ಈವೊತ್ತೇ ಒದಗಲಿ.

ಕಾಲಾಂತರದಿಂದ ಒದಗಲಿ; ಜಗತ್ತು ನನಗೆ ಶೂನ್ಯರೂಪವಾಯಿತು, ಎಂದು ನುಡಿದು ತಟ್ಟನೆ ಸರೋವರದಿಂದ ಹೊರಟು ಮಾರ್ಗವನ್ನು ಕ್ರಮಿಸಹತ್ತಿದನು. ಅವನು ಹಸಿವೆಯೆನ್ನಲಿಲ್ಲ, ನೀರಡಿಕೆಯೆನ್ನಲಿಲ್ಲ; ಪೂರ್ವವೆನ್ನಲಿಲ್ಲ, ಪಶ್ಚಿಮವೆನ್ನಲಿಲ್ಲ; ಇಳಿಹೊತ್ತೆನ್ನಲಿಲ್ಲ, ರಾತ್ರಿಯೆನ್ನಲಿಲ್ಲ. ಭ್ರಮಿಷ್ಟನಂತೆ ಸಂಚರಿಸುತ್ತ ಹೇಗೆ ಹೇಗೋ ಹೊಟ್ಟೆಯನ್ನು ಹೊರಕೊಳ್ಳುತ್ತ ಇಪ್ಪತ್ತು ದಿನಗಳವರೆಗೆ ಮಾರ್ಗವನ್ನು ಕ್ರಮಿಸಿಹೋಗಿ ಇಪ್ಪತ್ತೊಂದನೆಯ ದಿನ ಹೊರಗೆ ಒಂದು ತಾಸು ಹೊತ್ತು ಇರುವಾಗ ಒಂದು ರಾಜಧಾನಿಯ ಉಪವನವನ್ನು ಪ್ರವೇಶಿಸಿದನು.

ತಾನು ನೆಟ್ಟಗಿದ್ದರೆ ಜಗತ್ತು ನೆಟ್ಟಗೆ, ತಾನು ಆನಂದದಿಂದಿದ್ದರೆ ಜಗತ್ತು ಆನಂದಕರ. ಕಮಲಾಕ್ಷನ ಹೃದಯದೊಳಗಿನ ಪದ್ಮನಯನೆಯೇ ಮೊದಲಾದ ಸುಂದರ ಜ್ಯೋತಿಗಳು ನಂದಿಹೋದದ್ದರಿಂದ ಅದು ಕಗ್ಗತ್ತಲು ಮುಸುಕಿರಲು, ಅವನ ಪಾಲಿಗೆ ಜಗತ್ತೂ ಕಗ್ಗತ್ತಲು ಮುಸುಕಿದ್ದಾಗಿ, ಎದುರಿಗಿದ್ದ ಪದಾರ್ಥಗಳೂ ಅವನ ಕಣ್ಣಿಗೆ ಕಾಣದ ಹಾಗಾದವು. ಅವನು ಈಗ ಸುಂದರವಾದ ಉಪವನದಲ್ಲಿ ಕುಳಿತುಕೊಂಡಿದ್ದರೂ, ಆ ಉಪವನದ ಸೌಂದರ್ಯದ ಪರಿಣಾಮವು ಎಳ್ಳಷ್ಟೂ ಅವನ ಮನಸ್ಸಿನಮೇಲೆ ಆಗಿದ್ದಿಲ್ಲ. ಇದರ ಮೇಲಿಂದ ನೋಡಿದರೆ ಆನಂದವು ತನ್ನಲ್ಲಿಯೇ ಇರುತ್ತದಲ್ಲದೆ ಹೊರಗೆ ಇರುವದಿಲ್ಲೆಂದು ಅನ್ನಬೇಕಾಗುತ್ತದೆ. ಕಮಲಾಕ್ಷನು ಸಚಿಂತ ಮುದ್ರೆಯಿಂದ ಒಂದು ಗಿಡದ ಬುಡದಲ್ಲಿ ಕುಳಿತಿರುವಾಗ, ಇಳಿವಯಸ್ಸಿನ ಒಬ್ಬ ಗಂಭೀರ ಪುರುಷನು ಅಲ್ಲಿಗೆ ಬಂದನು. ಅವನನ್ನು ನೋಡಿ ಕಮಲಾಕ್ಷನು ಮಾತಾಡಲಿಲ್ಲ—ಕಥೆಯಾಡಲಿಲ್ಲ; ಶಿಷ್ಟಾಚಾರಕ್ಕನುಸರಿಸಿ ಒಮ್ಮೆ ವಿನಯದಿಂದ ನಮಸ್ಕಾರ ಮಾತ್ರ ಮಾಡಿದನು. ಆ ಒಂದೇ ನಮಸ್ಕಾರವು ಆ ಸದ್ಗೃಹಸ್ಥನ ಮನಸ್ಸನ್ನು ಎಳಕೊಳ್ಳಲಿಕ್ಕೆ ಸಾಕಾಯಿತು. ಕಮಲಾಕ್ಷನು ದರಿದ್ರಮನುಷ್ಯನಿದ್ದಿಲ್ಲವೆಂಬದನ್ನು ವಾಚಕರೂ ಬಲ್ಲರು. ಅವನ ಮುಖದಲ್ಲಿ ರಾಜತೇಜವು ಉಕ್ಕುತ್ತಿತ್ತು. ಸಿಂಹವು ವಿಪತ್ತಿಗೆ ಗುರಿಯಾಗಿ ಸೊರಗಿದ್ದರೂ, ನಾಯಿಯಾಗಲಾರದು. ಆ ಗಂಭೀರ ಪುರುಷನು ಕಮಲಾಕ್ಷನನ್ನು ಕುರಿತು—ಸದ್ಗೃಹಸ್ಥನೇ, ನೀನು ಯಾರು? ಘೋರವಾದ ವಿಪತ್ತಿಗೆ ಒಳಗಾಗಿರುವವನಂತೆ ಕಾಣುತ್ತೀ. ವಿಪದ್ಗ್ರಸ್ತರ ವಿಷಯವಾಗಿ ದಯವನ್ನು ತೋರಿಸಲಿಕ್ಕೆ ನಮ್ಮ ಒಡೆಯನಾದ ವೀರವರ್ಮನ ಅಪ್ಪಣೆಯಾಗಿರುವವರಿಂದ,

ದಿನಾಲು ನಾನು ಸ್ವತಃ ಈ ಹೊತ್ತಿನಲ್ಲಿ ಬೇರೆ ಬೇರೆ ಕಡೆಗೆ ತಿರುಗುತ್ತಿರುತ್ತೇನೆ. ಈ ದಿನ ಈ ಉಪವನಕ್ಕೆ ಬರಲು, ನಿನ್ನ ದರ್ಶನವಾಯಿತು. ಪ್ರಿಯ ಪುತ್ರಿಯಾದ ಪದ್ಮನಯನೆಯ ವಿಯೋಗ ದುಃಖದಿಂದ ಕೊರಗುತ್ತಿಪ್ಪ ನಮ್ಮ ಪೂಜ್ಯ ಸಾರ್ವಭೌಮನು, ಪರರ ವಿಪನ್ನಿವಾರಣವೇ ತನ್ನ ವ್ರತವೆಂದು ತಿಳಿದಿರುವನು. ನಿನ್ನ ವಿಪತ್ತಿನ ನಿವಾರಣವು ಆತನಿಂದಆಗದೆ ಇರಲಿಕ್ಕಿಲ್ಲ. ಕೃಪೆಮಾಡಿ ನನ್ನೊಡನೆ ಬರಬೇಕು. ನೀನು ರಾಜಕುಲಕ್ಕೆ ಸಂಬಂಧಿಸಿದವನೆಂಬದನ್ನು ನಿನ್ನ ಮುಖಚರ್ಯದಿಂದಲೇ ತಿಳಕೊಂಡೆನು. ವಿಪದ್ಗ್ರಸ್ತರ ಶೋಧಕ್ಕಾಗಿ ವೀರವರ್ಮಸಾರ್ವಭೌಮನು ತನ್ನ ಮುಖ್ಯ ಮಂತ್ರಿಯಾದ ನನ್ನನ್ನೇ ನಿಯಮಿಸಿರುತ್ತಾನೆ. ನನ್ನ ಹೆಸರು ದೇವದತ್ತನು. ಪರರವಿಪನ್ನಿವಾರಣದ ಪುಣ್ಯದ ಬಲದಿಂದತನ್ನ ಹಾಗೂತನ್ನ ಮಗಳಾದ ಪದ್ಮನಯನೆಯ ವಿಪನ್ನಿವಾರಣವಾಗಿಪರಸ್ಪರರ ದರ್ಶನಯೋಗವು ಒದಗಬಹುದೆಂದು ನಮ್ಮ ಉದಾರ ಮನಸ್ಸಿನ ಸಾರ್ವಭೌಮನು ನಂಬಿರುವನು. ಹು! ಏಳಬೇಕು. ಯಾವ ಸಂಕೋಚವನ್ನೂ ಮನಸ್ಸಿನಲ್ಲಿ ತಂದುಕೊಳ್ಳಬಾರದು. ಒಮ್ಮೆಲೆ ರಾಜಗೃಹಕ್ಕೆ ಹೋಗಲಿಕ್ಕೆ ಸಂಕೋಚವಾದರೆ, ಕೆಲವುದಿನ ನನ್ನ ಮನೆಯಲ್ಲಿರಬೇಕು. ನಿನ್ನ ದರ್ಶನಮಾತ್ರದಿಂದ ಯಾಕೋ ನನ್ನ ಚಿತ್ತಹರಣವಾಗಿದೆ. ನನ್ನ ವಿನಂತಿಗೆ ಅಸಮ್ಮತಿಪಡಬಾರದು, ಎಂದು ಹೇಳಿಕೊಂಡನು.

ಈ ಮಾತುಗಳು ಕಿವಿಗೆ ಬಿದ್ದಕೂಡಲೆ ಕಮಲಾಕ್ಷನ ಹೃದಯದಲ್ಲಿ ಮಿನುಗುಟ್ಟುವದೊಂದು ಜ್ಯೋತಿಯು ಉತ್ಪನ್ನವಾಗಿ ಮಂದಪ್ರಕಾಶವು ಬಿದ್ದಂತಾಗಲು, ಅವನು ಒಮ್ಮೆಲೆ ಎಚ್ಚತ್ತು ದೇವದತ್ತನನ್ನು ಆಶ್ಚರ್ಯದಿಂದ ನೋಡಹತ್ತಿದನು. ಅವನ ಮನೋವೃತ್ತಿಯು ವಿಚಿತ್ರವಾಗಹತ್ತಿತು. ತನ್ನ ಪ್ರಿಯಳಾದ ಪದ್ಮನಯನೆಯನ್ನು ಅಗಲಿ ತಾನೊಬ್ಬನೇ ಅವಳ ಜನ್ಮಭೂಮಿಯಾದ ಕನೋಜಪಟ್ಟಣವನ್ನು ಪ್ರವೇಶಿಸುವ ಪ್ರಸಂಗವು ಬಂದದ್ದರಿಂದ ಅವನ ದುಃಖವು ಉಕ್ಕೇರಹತ್ತಿತು. ಅವನು ತನ್ನ ದುಃಖವನ್ನು ಬಹುಪ್ರಯಾಸದಿಂದ ನುಂಗಿಕೊಂಡನು. ತನ್ನ ನಿಜವಾದ ಸಂಗತಿಯನ್ನು ದೇವದತ್ತನಿಗೆ ತಿಳಿಸಿದರೆ, ಪದ್ಮನಯನೆಯ ವಿಯೋಗದಿಂದ ನೊಂದುಕೊಂಡವರಾದ ಈ ಪಟ್ಟಣದವರ ದುಃಖದ ಪುನರುಜ್ಜೀವನಕ್ಕೆ, ತಾನೇ ಕಾರಣನಾಗುವೆನೆಂದು ತಿಳಿದು, ಆತನು ಹಾಗೆ ಮಾಡದೆ ಬೇರೊಂದು ಉಪಾಯವನ್ನು ಯೋಚಿಸಿ

ದನು. ಆ ಮೇಲೆ ಅವನು ಎದ್ದುನಿಂತು, ದೇವದತ್ತನಿಗೆ ಸಾಷ್ಟಾಂಗ ನಮಸ್ಕಾರಮಾಡಿ ಕೈಜೋಡಿಸಿಕೊಂಡು ವಿನಯದಿಂದ—ಮಂತ್ರಿವರ್ಯರೇ, ನಾನು ಯಾವವನ್ನೂ ತಿಳಿಯದೆ ಮೂರ್ಖನಂತೆ ತಮ್ಮ ಕೂಡ ಸಮಾನಸ್ಕಂದನಾಗಿ ವರ್ತಿಸಿದ್ದಕ್ಕಾಗಿ ನನ್ನನ್ನು ಕ್ಷಮಿಸಬೇಕು, ಎಂದು ಹೇಳಿಕೊಳ್ಳಲು, ದೇವದತ್ತನು—ಸುಜ್ಞನೇ, ನಿನ್ನಿಂದ ಅಸಮಾಧಾನಕರವಾದ ಯಾವ ಸಂಗತಿಯೂ ವರ್ತಿಸಿಲ್ಲ. ಸುಮ್ಮನೆ ಅಸಮಾಧಾನಪಡಬೇಡ. ನೀನು ಯಾರೆಂಬವನ್ನು ತಿಳಕೊಳ್ಳುವ ಕುತೂಹಲವು ನನಗೆ ಬಹಳವಾಗಿದೆ. ಅದನ್ನು ಪೂರ್ಣಮಾಡುವಂತೆ ಇದ್ದರೆ ಮಾಡಬೇಕು, ಎಂದು ಹೇಳಲು, ರಾಜಪುತ್ರನು ತಾನು ಯೋಚಿಸಿದಂತೆ ತನ್ನ ಸತ್ಯವಾದ ಸಂಗತಿಯನ್ನು ಮುಚ್ಚಿ ಹೇಳಿದನೇನಂದರೆ—ಮಂತ್ರಿಶ್ರೇಷ್ಠರೆ, ಸದ್ಯಕ್ಕೆ ನಾನು ನಿಜವಾದ ವೃತ್ತಾಂತವನ್ನು ತಿಳಿಸಲಾರೆನು; ಇದಕ್ಕಾಗಿ ನನ್ನನ್ನು ಕ್ಷಮಿಸಬೇಕೆಂದು ಪ್ರಾರ್ಥಿಸುತ್ತೇನೆ. ನಾನು ಪ್ರಾಯದ ಸೊಕ್ಕಿನಿಂದ ತಾಯಿ-ತಂದೆಗಳನ್ನು ಧಿಕ್ಕರಿಸಿ ಮನೆಬಿಟ್ಟು ಹೊರಟು ಈಗ ಐದುವರ್ಷಗಳಿಂದ ತಿರಗುತ್ತಿದ್ದ ಒಬ್ಬ ಪ್ರಾಯಸ್ಥನಿರುತ್ತೇನೆಂಬದನ್ನಷ್ಟೇ ಅರಿಕೆಮಾಡಿಕೊಳ್ಳುವೆನು. ಮಾತಾಪಿತೃಗಳ ವಿಯೋಗ ದುಃಖವು ನನ್ನನ್ನು ಬಾಧಿಸುತ್ತಿದ್ದರೂ, ಕೈಲಾಗದವನಂತೆ ಈಗ ಅವರನ್ನು ಕಾಣಲು ನಾಚಿಕೊಳ್ಳುತ್ತೇನೆ. ಮಹದಾಶ್ರಯದಿಂದ ಉತ್ಕರ್ಷವನ್ನು ಹೊಂದಿ ತಾಯಿ-ತಂದೆಗಳನ್ನು ಕಾಣುವ ಕುತುಹಲವು ನನಗೆ ಬಹಳವಾಗಿದೆ. ಆಶ್ರಯಸ್ಥಾನವನ್ನು ಶೋಧಿಸುತ್ತ ಈ ಪಟ್ಟಣಕ್ಕೆ ಬಂದಿರುವೆನು. ಮೊಟ್ಟನೊದಲು ತಮ್ಮಂಥ ಮಹನೀಯರ ದರ್ಶನವಾದದ್ದು ಸುಚಿಹ್ನವಾಗಿರುವದು.

ದೇವದತ್ತನು ಹೆಚ್ಚಿನ ಯಾವ ಸಂಗತಿಯನ್ನೂ ವಿಚಾರಿಸದೆ, ಕಮಲಾಕ್ಷನನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಪಟ್ಟಣದ ಕಡೆಗೆ ನಡೆದನು. ಕಮಲಾಕ್ಷನು ಪಟ್ಟಣದವಿಚಿತ್ರವಾದ ಶೋಭೆಯನ್ನೂ, ಐಶ್ವರ್ಯವನ್ನೂ ನೋಡಿ ಬೆರಗಾಗುತ್ತ, ಕೆಲವು ವೇಳೆಯಲ್ಲಿ ಮಂತ್ರಿಯಾದ ದೇವದತ್ತನ ಮನೆಗೆ ಮುಟ್ಟಿದನು. ಕನೋಜಪಟ್ಟಣವು ಅವನ ಮನಃಪ್ರಿಯಳಾದ ಪದ್ಮನಯನೆಯ ಜನ್ಮಸ್ಥಾನವಾದ ಕಾರಣ, ಆ ಪಟ್ಟಣದೊಳಗಿನ ಜನರೆಲ್ಲರೂ ಅವನಿಗೆ ಆಪ್ತರಂತೆ ತೋರಿ ದುಃಖಕೊಡಹತ್ತಿದರು. ಪದ್ಮನಯನೆಯೊಡನೆ ತಾನು ಪುರಪ್ರವೇಶ ಮಾಡಿದ್ದರೆ, ಒದಗಬಹುದಾಗಿದ್ದ ಆನಂದದ ಸ್ಥಿತಿಯನ್ನು ಕಲ್ಪಿಸುತ್ತ ಅವನು

ಮರುಗಹತ್ತಿದನು. ಮೋಹದ ಬಲೆಯು ಬಲು ತೊಡಕುಳ್ಳದ್ದು. ಮೋಹಕ್ಕೆ ಪ್ರತ್ಯಕ್ಷ ಪಾತ್ರವಾಗಿದ್ದ ವಸ್ತುವಿನಿಂದಷ್ಟೇ ದುಃಖವು ಆಗದೆ, ಆ ವಸ್ತುವಿಗೆ ಸಂಬಂಧಿಸಿದ ಬೇರೆ ವಸ್ತುಗಳಿಂದಲೂ ದುಃಖವಾಗುತ್ತದೆ. ಸತ್ತ ಹೆಂಡತಿಯ ವಸ್ತ್ರ—ಒಡವೆಗಳೂ, ಕಸೂತಿ ಮೊದಲಾದ ಕಲಾಕೌಶಲ್ಯಗಳೂ ಗಂಡನಿಗೆ ದುಃಖಕೊಡುವದನ್ನು ನೋಡಿದರೆ, ಈ ಮಾತಿನ ನಿಜತ್ವವು ಗೊತ್ತಾಗಬಹುದು. ಸಣ್ಣ ಕೂಸುಗಳು ಸತ್ತರೆ, ತಾಯಿತಂದೆಗಳು ಆ ಕೂಸುಗಳ ವಸ್ತ್ರ—ಒಡಿವೆ, ಅರಿವೆ—ಅಂಚಡಿ, ಹಾಸಿಗೆ—ಹುಸ್ಪಡಿ, ತೊಟ್ಟಿಲು—ಆಟಿಗೆ ಮೊದಲಾದವನ್ನು ನೋಡಿ ಅಳುವದು ವಾಡಿಕೆಯಾಗಿರುವದು! ಇದು ಮೂರ್ಖತನವೆಂದು ಬಾಯಿಂದ ಹೇಳಬಹುದು; ಆದರೆ ಕೃತಿಯಿಂದ ತೋರಿಸುವದು ಎಲ್ಲರಿಗೂ ಶಕ್ಯವಲ್ಲ. ಕಮಲಾಕ್ಷನ ಸ್ಥಿತಿಯು ಹೀಗೆಯೇ ಆಯಿತು. ಪದ್ಮನಯನೆಯ ಊರು, ಆಕೆಯ ಆಪ್ತೇಷ್ಟರು, ಆಕೆಯ ಗುಣಾನುವಾದ ಇವುಗಳ ಯೋಗದಿಂದ ಅವನು ಮನಸ್ಸಿನಲ್ಲಿ ಅಸಮಾಧಾನ ಪಡಹತ್ತಿದನು. ದೇವದತ್ತನ ಮನೆಯಲ್ಲಿ ಯಾವ ಮಾತಿನ ಕೊರತೆಯೂ ಇದ್ದಿಲ್ಲ. ಅವನು ಕಮಲಾಕ್ಷನ ಆದರಾತಿಥ್ಯವನ್ನು ಆಸ್ಥೆಯಿಂದಲೂ, ಪ್ರೀತಿಯಿಂದಲೂ ಮಾಡತೊಡಗಿದನು. ಕಮಲಾಕ್ಷನು ತನ್ನ ಸದ್ಗುಣಗಳ ಯೋಗದಿಂದ ಸ್ವಲ್ಪದಿನಗಳಲ್ಲಿಯೇ ದೇವದತ್ತನ ಮನಸ್ಸನ್ನು ಎಳಕೊಂಡನು.

ಹೀಗೆ ಇರಇರುತ್ತ ಒಂದು ದಿನ ರಾಜಪುತ್ರನು ಮನಸ್ಸಿನಲ್ಲಿ—ನಾನು ಹೀಗೆ ಸುಮ್ಮನೆ ದೇವದತ್ತನ ಮನೆಯಲ್ಲಿ ಸುಖವನ್ನು ಭೋಗಿಸುತ್ತ ಕಾಲಹರಣ ಮಾಡಹತ್ತಿದರೆ ಯಾವ ಪುರುಷಾರ್ಥವನ್ನು ಸಾಧಿಸಿದಂತಾಗುವದು? ಇದರಿಂದ ಪದ್ಮನಯನೆಯ ಶೋಧವಾದಂತಾಗುವದಿಲ್ಲ; ವೀರವರ್ಮನಿಗೆ ಸಹಾಯಮಾಡಿದಂತಾಗುವದಿಲ್ಲ; ಪರೋಪಕಾರವನ್ನು ಸಾಧಿಸಿದಂತಾಗುವದಿಲ್ಲ, ಒಬ್ಬರಿಗೆ ಭಾರವಾಗಿ ಬದುಕಿದಂತೆ ಮಾತ್ರ ಆಗುವದು. ಪರಾಕ್ರಮವನ್ನು ತೋರಿಸುವದು ಕ್ಷತ್ರಿಯರ ಸ್ವಾಭಾವಿಕ ಧರ್ಮವು. ಆ ಧರ್ಮವನ್ನು ಬಿಟ್ಟು ಕೃತ್ರಿಮವಾದ ಈ ಸ್ತ್ರೀಧರ್ಮವನ್ನು ಸ್ವೀಕರಿಸುವದು ಲಾಂಛನವೇ ಸರಿ; ಸ್ವಧರ್ಮದಲ್ಲಿ ನಿಧನವಾದರೂ ಶ್ರೇಯಸ್ಕರವು. ವೀರವರ್ಮನ ಆಶ್ರಯದಿಂದ ಸೈನ್ಯದಲ್ಲಿ ಸೇರಿ ಪರಾಕ್ರಮವನ್ನು ತೋರಿಸಿ, ಪ್ರಸಿದ್ಧಿಗೆ ಬರುವದು ತಕ್ಕದ್ದು, ಎಂದು ಯೋಚಿಸಿ, ಹೊತ್ತು ನೋಡಿ ತನ್ನ ವಿಚಾರವನ್ನು ದೇವದತ್ತನಿಗೆ

ತಿಳಿಸಲು, ಅವನು ಸಂತೋಷಪಟ್ಟು—ಕಮಲಾಕ್ಷಾ, ನಿನ್ನ ವಿಚಾರವು ಶೌರ್ಯಕ್ಕೂ, ದೊಡ್ಡಿಸ್ತನಕ್ಕೂ ಒಪ್ಪುವಹಾಗಿದೆ. ಏನೂ ಚಿಂತೆಯಿಲ್ಲ, ನಮ್ಮ ಪ್ರಭುವು ಗುಣಗ್ರಾಹಿಯಿದ್ದಾನೆ; ನಿನ್ನ ಕೋರಿಕೆಯು ಸಹಜನಾಗಿ ಕೊನೆಗಾಣುವದು; ಆದರೆ ನಾನು ನಿನಗೆ ಆಗ್ರಹದಿಂದ ಹೇಳಿಕೊಳ್ಳುವದೇನಂದರೆ, ನೀನು ಯಾವ ಉದ್ಯೋಗವನ್ನು ಕೈಕೊಂಡರೂ ನನ್ನನ್ನು ಮಾತ್ರ ಅಗಲಬೇಡ, ನಿನ್ನ ವಿಯೋಗದಿಂದ ನನ್ನ ಮನಸ್ಸು ಅಸಮಾಧಾನಪಡುವದು. ನೀನು ಸುಜ್ಞನಿರುವವರಿಂದ ಹೆಚ್ಚಿಗೆ ಹೇಳುವ ಕಾರಣವಿಲ್ಲ, ಎನ್ನಲು, ಕಮಲಾಕ್ಷನು ಮಂತ್ರಿಯ ವಿಚಾರಕ್ಕೆ ವಿನಯದಿಂದ ಒಪ್ಪಿಕೊಂಡು ಆತನ ಆಪ್ಪಣೆಯಿಂದ ರಾಜದರ್ಶನದ ಸಿದ್ಧತೆಯನ್ನು ಮಾಡತೊಡಗಿದನು. ಆತನು ಸ್ವತಃ ಅಶ್ವಶಾಲೆಗೆ ಹೋಗಿ ಉತ್ತಮ ಲಕ್ಷಣದ ಬಿಳಿಯ ಕುದುರೆಯನ್ನು ಆರಿಸಿಕೊಂಡು ಜೀನು ಹಾಕಿಸಿದನು. ಕುದುರೆಯು ಮೊದಲೇ ಸುಂದರ, ಅದನ್ನು ಬೆಲೆಯುಳ್ಳ ಬಗೆಬಗೆಯ ಅಲಂಕಾರಗಳಿಂದ ಶೃಂಗರಿಸಿದ ಬಳಿಕ ಕೇಳುವದೇನು? ಆ ಸುಂದರ ಪ್ರಾಣಿಯು ಕಮಲಾಕ್ಷನ ರಾಜದರ್ಶನದ ಉತ್ಸುಕತೆಯನ್ನು ಹೆಚ್ಚಿಸಿತು. ಆ ವೀರಪುರುಷನು ಲಷ್ಕರಿಯ ಠೀವಿಯ ಪೋಷಾಕನ್ನು ಹಾಕಿಕೊಂಡು, ಕತ್ತಿ ಭಾಲೆಗಳನ್ನೂ, ಧನುರ್ಬಾಣಗಳನ್ನೂ ತೆಗೆದುಕೊಂಡು, ಮನುಷ್ಯಾಕೃತಿಯನ್ನು ಧರಿಸಿದ ಮನ್ಮಥನೋ ಅನ್ನುವಂತೆ ರಾಜದರ್ಶನಕ್ಕೆ ಹೊರಟನು. ಲೋಕಸುಂದರನಾದ ಕಮಲಾಕ್ಷನ ಸೌಂದರ್ಯಕ್ಕೆ ಈ ಪ್ರಕಾರದ ಸುವ್ಯವಸ್ಥೆಯಿಂದ ಮತ್ತಿಷ್ಟು ಕಳೆಯೇರಿತು. ಮಾರ್ಗದಲ್ಲಿ ಪೌರರು ಚಕಿತಮುದ್ರೆಯಿಂದ ಅವನ ರೂಪವನ್ನು ಎವೆಬಡಿಯದೆ ನೋಡುತ್ತಿದ್ದರು. ಇಂಥ ಮೋಹಕಸ್ವರೂಪಿಯಾದ ಕಮಲಾಕ್ಷನು ರಾಜತೇಜಸ್ಸಿನಿಂದ ರಾಜಸಭೆಯನ್ನು ಪ್ರವೇಶಿಸಲು, ಅಲ್ಲಿಯ ಯಾವತ್ತು ಜನರು ಸೋಜಿಗಪಟ್ಟರು. ಕೂಡಲೆ ವೀರವರ್ಮನ ಚಿತ್ತಹರಣವಾಯಿತು. ಆತನು ಕಮಲಾಕ್ಷನ ಅದ್ವಿತೀಯವಾದ ರೂಪವನ್ನು ನೋಡಿ, ತನ್ನ ಮಗನ ರೂಪವನ್ನು ನೆನಿಸಿ ದುಃಖಪಟ್ಟನು. ಕಮಲಾಕ್ಷನು ವೀರವರ್ಮನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ಕೈಜೋಡಿಸಿಕೊಂಡು ವಿನಯದಿಂದ ನಿಂತುಕೊಳ್ಳಲು, ಅರಸನು ಅವನನ್ನು ಕುರಿತು—ಎಲೈ ಮೋಹಕಸ್ವರೂಪಿಯೇ, ನಿನ್ನ ದರ್ಶನದಿಂದ ನನಗೆ ಬಹಳ ಸಮಾಧಾನವಾಗಿದೆ. ನೀನು ಯಾರು? ಇಲ್ಲಿಗೆ ಯಾವ ಕಾರಣದಿಂದ

ಬಂದೆ? ನನ್ನಿಂದ ಆಗತಕ್ಕ ಕಾರ್ಯವು ಯಾವದು, ಎಂದು ಕೇಳಲು, ಕಮ ಲಾಕ್ಷನು—ಪ್ರಭುಗಳೆ, ನಾನು ಕೆಲಮಟ್ಟಿಗೆ ಯುದ್ಧಕಲೆಯನ್ನು ಅರಿತ ಒಬ್ಬ ಸರದಾರನಿರುತ್ತೇನೆ. ತಮ್ಮ ಕೀರ್ತಿಯನ್ನು ಕೇಳಿ ಆಶ್ರಯವನ್ನು ಪಡೆಯಲು ಬಂದಿರುವೆನು. ನನ್ನ ಹೆಸರು ಕಮಲಾಕ್ಷ. ಪ್ರಭುಗಳ ಔದಾರ್ಯ ದಿಂದ ನನ್ನ ಕೋರಿಕೆಯು ನಿಶ್ಚಯವಾಗಿ ಕೊನೆಗಾಣುವದೆಂದು ನಂಬಿ ದ್ದೇನೆ, ಎಂದು ಹೇಳಿದನು.

ವೀರವರ್ಮನು ಕಮಲಾಕ್ಷನ ಮಾತುಗಳನ್ನು ಕೇಳಿ ಸಂತೋಷಪಟ್ಟು ಅವನನ್ನು ಒಂದು ಸೈನ್ಯದ ಮುಖ್ಯಾಧಿಕಾರಿಯಾಗಿ ನಿಯಮಿಸಿದನು. ಪದ್ಮ ನಯನೆಯ ವಿಯೋಗವಾದಂದಿನಿಂದ ವೀರವರ್ಮನು ಸರಿಯಾಗಿ ರಾಜ್ಯಕಾರ ಭಾರದಕಡೆಗೆ ಲಕ್ಷಗೊಡುತ್ತಿದ್ದಿಲ್ಲ; ಆದರಿಂದ ಬಹುಜನ ಅರಸರು ಅವನನ್ನು ಪೀಡಿಸಿಂತಿದ್ದರು. ಪ್ರತಾಪಿಯಾದ ಕಮಲಾಕ್ಷನು ಮುಂದೆ ಸ್ವಲ್ಪಕಾಲದ ಲ್ಲಿಯೇ ಎಷ್ಟೋ ಯುದ್ಧಗಳಲ್ಲಿ ವೈರಿಗಳನ್ನು ಸೋಲಿಸಿ ವೀರವರ್ಮನನ್ನು ನಿಷ್ಕಂಟಕನನ್ನಾಗಮಾಡಿದನು. ಇದರಿಂದ ಕಮಲಾಕ್ಷನ ಕೀರ್ತಿಯು ದಿಕ್ಕು— ದಿಕ್ಕಿಗೆ ಹಬ್ಬಿತು. ಅವನು ಸೈನ್ಯದೊಳಗಿನ ಬೇರೆ ಅಧಿಕಾರಿಗಳಿಗೂ, ತನ್ನ ಕೈಕೆಳಗಿನ ಜನರಿಗೂ ಬಹು ಪ್ರಿಯಕರನಾಗಿದ್ದನು. ಅರಸನಲ್ಲಂತು ಅವನ ಪ್ರಸ್ಥವು ವಿಶೇಷವಾಗಿ ಬೆಳೆದಿತ್ತು. ಗುಣಜ್ಞರಾದ ಬೇರೆಬೇರೆ ಅಧಿಕಾರಿಗಳೂ, ಪ್ರಧಾನರೂ ಕಮಲಾಕ್ಷನ ಗುಣಗಳಿಗೆ ಲುಬ್ಧರಾಗಿ, ಅವನ ಸ್ನೇಹವನ್ನು ಸಂ ಪಾದಿಸಲು ಯತ್ನಿಸುತ್ತಿದ್ದರು. ಕಮಲಾಕ್ಷನು ವಿನಯಶಾಲಿಯಾಗಿದ್ದರೂ ಬಾಲಬಡಿಯುವ ಸ್ವಭಾವದವನಿದ್ದಿಲ್ಲ. ಅವನು ಸ್ಪಷ್ಟವಾದಿಯೂ, ಗುಣೈಕಪಕ್ಷ ಪಾತಿಯೂ, ನಿಸ್ಪೃಹನೂ ಇದ್ದದ್ದರಿಂದ ಎಲ್ಲರಮೇಲೆ ಅವನ ವರ್ಚಸ್ಸು ಕುಳಿ ತಿತ್ತು. ಕುಹಕರೂ, ಹೇಡಿಗಳೂ, ಸೋಮಾರಿಗಳೂ, ದುರ್ಗುಣಿಗಳೂ ಅವನ ನೆರಳಿಗೆ ನಿಲ್ಲಲು ಅಂಜುತ್ತಿದ್ದರು. ಸ್ವಲ್ಪದಿನಗಳಲ್ಲಿ ಕಮಲಾಕ್ಷನು ಗುಣಿಜನರನ್ನು ಸಂಗ್ರಹಿಸಿದನು. ಆತನು ಸರ್ವಸಮ್ಮತನಾಗಲಿಕ್ಕೆ ಯತ್ನಿಸು ತ್ತಿದ್ದಿಲ್ಲ; ಜನರು ಹೊಗಳಲಿ, ಬೊಗಳಲಿ ತನ್ನ ಸತ್ಯಪಥವನ್ನು ಹಿಡಿದು ಸಾಗುತ್ತಿದ್ದನು. ಇದರಿಂದ ಕೆಲವರು ಅಜ್ಞಾನದಿಂದ ಮಾತ್ಸರ್ಯವನ್ನು ತಾಳಿದರೂ, ಅವರ ಆಟವೇನೂ ನಡೆಯುತ್ತಿದ್ದಿಲ್ಲ. ಬರಬರುತ್ತ ಕಮಲಾಕ್ಷನ ನಿಸ್ಪೃಹತೆ–ನಿರ್ಧಾರ–ದಯಾಲುತ್ವಾದಿ ಗುಣಗಳ ವರ್ಚಸ್ಸಿನಿಂದ ಮಾತ್ಸ

ರ್ಯವು ತಳಿಯುತ್ತ ಹೋಗಿ, ಪರಸ್ಪರರಲ್ಲಿ ನಿಜವಾದ ಪ್ರೇಮವು ಉತ್ಪನ್ನವಾಗಹತ್ತಿತು. ಮರೆಮೋಸಗಳಿಗೆ ಆಸ್ಪದವು ಕಡಿಮೆಯಾಯಿತು. ವೇಷಧಾರಿಗಳು ಕಮಲಾಕ್ಷನ ಮುಂದೆ ನಿಲ್ಲದಾದರು. ಕುಟಿಲ ಹೃದಯದವರು ಕಾಲು ತೆಗೆದರು. ಒಟ್ಟಿಗೆ, ವೀರವರ್ಮನ ದರ್ಬಾರದಲ್ಲಿ ತೇಜಸ್ವಿಗಳಸಂಖ್ಯೆಯು ಹೆಚ್ಚಿ, ಆಯಾ ಕಾರ್ಯಗಳು ಸುವ್ಯವಸ್ಥಿತವಾಗಿ ಪ್ರಾಮಾಣಿಕತನದಿಂದ ನಡೆಯಹತ್ತಿದ ಕಾರಣ, ಪ್ರಜೆಗಳ ಸುಖವು ಹೆಚ್ಚಿತು. ಇದಕ್ಕೆಲ್ಲ ಕಮಲಾಕ್ಷನ ತೇಜಸ್ಸೇ ಕಾರಣವೆಂದು ತಿಳಿದು ಪ್ರಜೆಗಳು ಆತನನ್ನು ಹಾಡಿ ಹರಿಸಹತ್ತಿದರು. ಮಹಾತ್ಮರ ಸತ್ವದಲ್ಲಿಯೇ ಕ್ರಿಯಾಸಿದ್ಧಿಯು ಇರುವದು



## ೧೪ನೆಯ ಪ್ರಕರಣ.

# ಮಿತ್ರಲಾಭ.



ದೇವದತ್ತನು ವೀರವರ್ಮನ ಮುಖ್ಯಮಂತ್ರಿಯೆಂದು ಮತ್ತೆ ಹೇಳುವ ಕಾರಣವಿಲ್ಲ. ಅವನು ಕ್ಷತ್ರಿಯನಿದ್ದರೂ ರಾಜಕಾರಣಪಟುತ್ವದಿಂದ ಮಂತ್ರಿ ಪದವನ್ನು ಹೊಂದಿದ್ದನು. ವೀರವರ್ಮನಿಗೆ ಕಪಿಂಜಲನ ಪ್ರಸಾದದಿಂದ ಪದ್ಮನಯನೆಯು ಜನಿಸಿದ ನಾಲ್ಕು ವರ್ಷಗಳ ಮೇಲೆ, ದೇವದತ್ತನಿಗಾದರೂ ಅದೇ ಋಷಿಯ ಪ್ರಸಾದದಿಂದ ಒಂದು ಕನ್ಯಾರತ್ನವು ಜನಿಸಿತು. ಆ ಸುಕುಮಾರಿಯ ಹೆಸರು ಜೀವನಕಲೆಯು. ಪದ್ಮನಯನೆಯೂ, ಜೀವನಕಲೆಯೂ ಕೂಡಿ ಆಡಿದವರಾದ್ದರಿಂದ, ಅವರು ಜೀವದ ಗೆಳತಿಯರಾಗಿದ್ದರು. ಜೀವನಕಲೆಯು ಪದ್ಮನಯನೆಯ ಸಹವಾಸದಿಂದ ಸಕಲ ವಿದ್ಯೆಗಳನ್ನು ಕಲಿತಿದ್ದಳು. ಆ ಮಂತ್ರಿ ಕುವರಿಯ ಸೌಂದರ್ಯದ ಕೀರ್ತಿಯು ಎಲ್ಲ ಕಡೆಯಲ್ಲಿ ಹಬ್ಬಿದ್ದರಿಂದ, ಬಹು ಜನ ರಾಜಕುಮಾರರೂ, ಮಂತ್ರಿಕುವರರೂ ಅವಳನ್ನು ಲಗ್ನವಾಗಲು ಯತ್ನಿಸಿದರು. ಆದರೆ ಜೀವನಕಲೆಯ ಮನಸ್ಸು ಮೆಚ್ಚುವಂಥ ವರನು ದೊರೆಯದ್ದರಿಂದಾಗಲಿ, ಬ್ರಹ್ಮ

ಸಂಕಲ್ಪವು ಒದಗದ್ದರಿಂದಾಗಲಿ ಅವಳು ಇಲ್ಲಿಯ ವರೆಗೆ ಅವಿವಾಹಿತಳಾಗಿಯೇ ಇದ್ದಳು. ದೇವದತ್ತನ ಪ್ರೇಮವು ಮಗಳ ಮೇಲೆ ವಿಶೇಷವಾಗಿ ಇದ್ದದ್ದರಿಂದ ಅವನು ಅವಳ ಮನೋವೃತ್ತಿಯ ವಿರುದ್ಧವಾಗಿ ಎಂದೂ ನಡೆಯುತ್ತಿದ್ದಿಲ್ಲ. ಜೀವನಕಲೆಯು ಕಮಲಾಕ್ಷನ ಸೌಂದರ್ಯವನ್ನೂ, ಸುಗುಣಗಳನ್ನೂ, ಕೀರ್ತಿಯನ್ನೂ ನೋಡಿ, ಮನಸೋತು ಅವನನ್ನು ಪ್ರಸನ್ನವಾದ ಅಂತಃಕರಣದಿಂದ ಪ್ರೀತಿಸುತ್ತಿದ್ದಳು. ಕಮಲಾಕ್ಷನು ಪದ್ಮನಯನೆಯನ್ನು ಅಗಲಿದಂದಿನಿಂದ ಯಾವತ್ತು ವಿಷಯಸುಖಗಳ ಆಶೆಯನ್ನು ಬಿಟ್ಟವನಾದ್ದರಿಂದ, ಅವನು ಜೀವನ ಕಲೆಯ ನಡತೆಯ ಕಡೆಗೆ ವಿಶೇಷವಾಗಿ ಲಕ್ಷ್ಯಗೊಡುತ್ತಿದ್ದಿಲ್ಲ. ಮುಂದೆ ಬರ ಬರುತ್ತ ಜೀವನಕಲಾ-ಕಮಲಾಕ್ಷರ ಪರಿಚಯವು ಹೆಚ್ಚುತ್ತ ಹೋದಂತೆ, ಪರ ಸ್ಪರರಲ್ಲಿ ಪ್ರೇಮವೂ ಹೆಚ್ಚುತ್ತ ಹೋಯಿತು. ಆದರೆ ಭೇದವಿಷ್ಟೇ, ಕಮಲಾಕ್ಷನ ಪ್ರೇಮವು ನಿರಭಿಲಾಷೆಯುಳ್ಳದ್ದೂ, ಜೀವನಕಲೆಯ ಪ್ರೇಮವು ಅಭಿಲಾಷೆಯುಳ್ಳದ್ದೂ ಆಗಿದ್ದವು. ಈ ಭೇದವನ್ನು ಮರ್ಮಜ್ಞನಾದ ಕಮಲಾಕ್ಷನು ತನ್ನ ದುಃಸ್ಥಿತಿಯಲ್ಲಾದರೂ ಗೊತ್ತು ಹಿಡಿದನು.

ಜೀವನಕಲೆಯು ಅಯೋಗ್ಯಸ್ಥಾನದಲ್ಲಿ ಪ್ರೇಮವನ್ನು ಇಡತಕ್ಕವಳಲ್ಲೆಂಬ ನಂಬಿಗೆಯು ಅಬಾಲವೃದ್ಧರಿಗೂ ಇದ್ದದ್ದರಿಂದ, ಅವಳು ಪರಪುರುಷರ ಸಂಗಡ ಸರಳ ಮನಸ್ಸಿನಿಂದ ವರ್ತಿಸುವದಕ್ಕೆ ಎಷ್ಟು ಮಾತ್ರವೂ ಪ್ರತಿಬಂಧಕ ವಿದ್ದಿಲ್ಲ. ಜೀವನಕಲೆಯಂಥ ಸುಶೀಲೆಯಾದ ಕುಲೀನ ಸ್ತ್ರೀಯು, ಪರಪುರುಷರ ಮುಖಾವಲೋಕನ ಮಾಡುವದೇ ಅಸಂಭವವು; ಆದರೆ ಕಮಲಾಕ್ಷನು ಜೀವನ ಕಲೆಯ ಮನಸ್ಸನ್ನು ಆಕರ್ಷಿಸಿಕೊಂಡದ್ದರಿಂದ ಅವಳು ಕಮಲಾಕ್ಷನ ಸಂಗಡ ಮನಬಿಚ್ಚಿ ಮಾತಾಡಹತ್ತಿದಳು. ಪದ್ಮನಯನೆಯ ವಿಯೋಗದಿಂದ ವಿಷಯ ಸುಖಗಳನ್ನು ಬಯಸದ ಕಮಲಾಕ್ಷನು, ಜೀವನಕಲೆಯ ವರ್ತನದಿಂದ ವಿಶೇಷ ಸಮಾಧಾನಪಡದಿದ್ದರೂ, ಅವಳು ತನ್ನ ಮೇಲೆ ಮಾಡುವ ಪ್ರೇಮಕ್ಕಾಗಿ ಕೃತ ಜ್ಞತೆಯನ್ನು ತೋರಿಸತಕ್ಕದ್ದೆಂದು ನೆನಿಸಿದನು. ಈ ಬುದ್ಧಿಯು ಉತ್ಪನ್ನವಾ ದಂದಿನಿಂದ ಅವನು, ಜೀವನಕಲೆಯ ಉಪಕಾರವನ್ನು ನೆನಿಸಹತ್ತಿದನು. ಧೂರ್ತಳಾದ ಜೀವನಕಲೆಯು ಕಮಲಾಕ್ಷನ ಕೃತಜ್ಞತೆಯಿಂದ ಆನಂದ ಪಡ ಹತ್ತಿದಳು. ಒಂದು ದಿನ ಕಮಲಾಕ್ಷನು ಜೀವನಕಲೆಯ ಬಳಿಗೆ ನಿತ್ಯ ಕ್ರಮ ದಂತೆ ಹೋಗಿರಲು, ಅವರಿಬ್ಬರ ಸಂಭಾಷಣವು ಈ ಪ್ರಕಾರ ಆಯಿತು.

ಜೀವನಕಲೆ ( ತನ್ನ ದಾಸಿಯರನ್ನು ಉದ್ದೇಶಿಸಿ ) —" ಪ್ರಿಯತಮೇ, ಯೋಗಾಯೋಗವು ಹೇಗಿದೆ ನೋಡಿದೆಯಾ? ಇದೇ ಈಗ ನಾನು ನಿನ್ನೊಡನೆ ಕಮಲಾಕ್ಷ ಸರದಾರರ ಗುಣಗಳನ್ನು ಶ್ಲಾಘಿಸುತ್ತಿರಲು, ಈಗ ಅವರೇ ಪ್ರತ್ಯಕ್ಷ ವಾಗಿ ಬಂದಿರುವರು. ಅವರಿಗೆ ಸಂಪೂರ್ಣ ನೂರುವರ್ಷ ಆಯುಷ್ಯ ವಿರುವದು. ಅವರ ದರ್ಶನ ಮಾತ್ರದಿಂದ ನನಗೆ ಬಹಳ ಆನಂದ ವಾಗುತ್ತದೆ."

ಕಮಲಾಕ್ಷ —"ಮಂತ್ರಿಕುವರೀ, ಮನುಷ್ಯರು ಸ್ವತಃ ಆನಂದವೃತ್ತಿ ಯವರಿದ್ದರೆಂದರೆ, ಅವರ ಆನಂದಕ್ಕಾಗಿ ಎರಡನೆಯವರು ವಿಶೇಷವಾಗಿ ಕಾರಣ ರಾಗುವದಿಲ್ಲ. ಸುಶಿಕ್ಷಿತಳೂ, ರಸಿಕಳೂ ಆದ ನಿನ್ನನ್ನು ಆನಂದಗೊಳಿಸುವಷ್ಟು ಜ್ಞಾನವೂ, ರಸಿಕತನವೂ ನನ್ನಲ್ಲಿಲ್ಲ. ಹೀಗಿದ್ದು, ನನ್ನನ್ನು ನೀನು ಶ್ಲಾಘಿಸುವದು ನಿನ್ನ ದೊಡ್ಡಿಸ್ತನದ ಲಕ್ಷಣವಾಗಿದೆ."

ಜೀವನಕಲೆ —" ಅದು ಹೇಗೇ ಇರಲಿ, ತಿಳಿದವರು ಕಾರಣವಿಲ್ಲದೆ ತಮ್ಮ ಬಾಯಿಂದ ತಮ್ಮ ಸ್ತೋತ್ರ ಮಾಡಿಕೊಳ್ಳುವದಿಲ್ಲ. ನೀವು ಆನಂದವೃತ್ತಿಯವ ರಬೇಕೆಂದು ನಾನು ಮನಮುಟ್ಟಿ ಬಯಸುವೆನು. ನೀವು ಯಾವಾಗಲೂ ಉದಾಸೀನರಾಗಿರುವದನ್ನು ನೋಡಿ ನನಗೆ ಬಹಳ ಅಸಮಾಧಾನವಾಗುತ್ತದೆ. ತಮ್ಮ ಸ್ಥಿತಿಯು ಹೀಗಾಗುವದಕ್ಕೆ ಕಾರಣವಾದರೂ ಯಾವದೋ ತಿಳಿಯದು."

ಕಮಲಾಕ್ಷ — " ಸುಗುಣಪೂರ್ಣಳೇ, ನೀನು ನನ್ನ ದುಃಸ್ಥಿತಿಯನ್ನು ನೋಡಿ ಅಸಮಾಧಾನ ಪಡುವದಕ್ಕಾಗಿ ನಾನು ಕೃತಜ್ಞನಾಗಿದ್ದೇನೆ. ದಿನಾಲು ನನ್ನನ್ನು ಸಮಾಧಾನಪಡಿಸುವದಕ್ಕಾಗಿ ಯತ್ನಿಸುತ್ತಿರುವದರಿಂದ, ನೀನು ನನಗೆ ಹೆಚ್ಚಿನ ಆಪ್ತಳಾಗಿರುತ್ತೀ."

ಜೀವನಕಲೆ — " ತಮ್ಮ ನುಡಿಯು ಸತ್ಯವಿದ್ದರೆ, ಆಪ್ತರ ಬಳಿಯಲ್ಲಿ ದುಃಖದ ಕಾರಣವನ್ನು ಹೇಳಲಿಕ್ಕೆ ಪ್ರತಿಬಂಧವೇನು?"

ಕಮಲಾಕ್ಷ — " ಪ್ರತಿಬಂಧವಿಲ್ಲ. ಆದರೆ ಸ್ಥಾನಾಸ್ಥಾನದ ವಿಚಾರ ಮಾಡಿ ಮಾತುಗಳನ್ನಾಡಬೇಕಾಗುತ್ತದೆ. ಸುಶೀಲೆಯಾದ ನಿನ್ನ ಮುಂದೆ ಹೇಳ ಲಿಕ್ಕೆ ತಕ್ಕದ್ದಲ್ಲದ ಲಜ್ಜಾಸ್ಪದವಾದ ಮಾತನ್ನು ನಾನಾದರೂ ಹೇಗೆ ಹೇಳಲಿ?"

ಜೀವನಕಲೆ —" ( ದಯಾರ್ದ್ರದೃಷ್ಟಿಯಿಂದ ನೋಡುತ್ತ ) ಸತ್ಯವಂತರೂ, ಸದಾಚಾರಿಗಳಾದ ನೀವು ನನ್ನ ಮುಂದೆ ಹೇಳುವದಕ್ಕಾಗಿ ಅಂದೇಶಪಡುತ್ತೀ

ರುವ ಸಂಗತಿಯನ್ನು ನಾನು ಎಷ್ಟೋ ದಿವಸಗಳ ಹಿಂದೆ ಅರಿತಿದ್ದೇನೆ. ಸುಶೀಲೆ ಯಾದ ಸುಂದರಿಯೋರ್ವಳು ನಿಮ್ಮನ್ನಗಲಿರುವದರಿಂದ ನೀವು ಇಷ್ಟು ಉದಾಸೀನರಾಗಿರುವಿರಲ್ಲವೆ? "

**ಕಮಲಾಕ್ಷ** — ( ಕಣ್ಣಲ್ಲಿ ನೀರು ತಂದು ) ದಯಾಘನೇ, ದೂರದರ್ಶಿಯಾದ ನಿನ್ನ ತರ್ಕವು ಸುಳ್ಳೆಂದು ಹೇಗೆ ಅನ್ನಲಿ? ನನ್ನ ಪ್ರೇಮಕ್ಕೆ ಸ್ಥಾನವಾದ ವಸ್ತುವೇ ಹೋದದ್ದರಿಂದ ನಾನು ಉದಾಸೀನನಾಗಿರುವದು ಸ್ವಾಭಾವಿಕವು."

**ಜೀವನಕಲೆ** — " ನಿಮ್ಮ ಪ್ರೇಮಕ್ಕೆ ಪಾತ್ರಳಾದ ಸ್ತ್ರೀಯೇ ಧನ್ಯಳು. ನಿಮ್ಮ ಈಗಿನ ಸ್ಥಿತಿಯನ್ನು ನೋಡಿ ನನಗೆ ಬಹಳ ವ್ಯಸನವಾಗಿದೆ, ಉಪಾಯನಿಲ್ಲ. ಪುರುಷರಿಗೆ ಒಹು ಜನ ಸ್ತ್ರೀಯರನ್ನು ಮದುವೆಯಾಗುವ ಅಧಿಕಾರವಿರುವದಷ್ಟೇ? "

ಕಮಲಾಕ್ಷ ( ದುಃಖದ ಆವೇಶದಿಂದ ) — " ಜೀವನಕಲೆ, ಏನು ಹೇಳಲಿ! ನನ್ನ ಎಲ್ಲ ಪ್ರೇಮವನ್ನು ನನ್ನ ಪ್ರಿಯಳಿಗೆ ಕೊಟ್ಟು ಬಿಟ್ಟಿರುವದರಿಂದ, ಇನ್ನೊಬ್ಬಳನ್ನು ಪ್ರೀತಿಸುವದಕ್ಕಾಗಿ ಪ್ರೇಮವೇ ನನ್ನಲ್ಲಿ ಉಳಿದಿರುವದಿಲ್ಲ. ಅಂದಬಳಿಕ ಇನ್ನೊಬ್ಬಳನ್ನು ಮದುವೆಯಾಗಿಯಾದರೂ ನಾನುಮಾಡುವದೇನು? ಒಂದು ವೇಳೆ ಮದುವೆಯಾದರೂ, ಮೊದಲಿನ ನನ್ನ ಪ್ರಿಯಳನ್ನು ಮರೆಸುವಂಥ ಸುಗುಣಿಯಾದ ಸುಂದರಿಯು ದೊರೆಯುವದಂತೂ ಅಸಂಭವವು."

ಜೀವನಕಲೆ ( ಆನಂದವನ್ನು ಪ್ರಕಟಿಸುತ್ತ ) — " ನಿಜವಾದ ಪ್ರೇಮದ ಗುಣವೇ ಅಂಥಾದ್ದು. ನೀವು ನಿಮ್ಮ ಪ್ರಿಯಳಮೇಲಣ ಪ್ರೇಮದಿಂದ ವಿಷಯ ಸುಖಿಗಳ ವಿಷಯವಾಗಿ ಉದಾಸೀನರಾದದ್ದು ನಿಮ್ಮ ದಯಾಗುಣಕ್ಕೆ ಭೂಷಣ ವಾಗಿದೆ. ಆದ ಮಾತಿನ ಸಲುವಾಗಿ ವ್ಯಸನಪಡುವದೂ ಯೋಗ್ಯವಾಗಲಾರದು. ಪ್ರೇಮದ ಉತ್ಪತ್ತಿಗೂ, ನಾಶಕ್ಕೂ ಕಾರಣಗಳು ಬೇಕಾಗುವದರಿಂದ, ನಿಮ್ಮ ಪ್ರಿಯಳ ವಿಯೋಗದಿಂದ ನಾಶವಾಗಿರುವ ನಿಮ್ಮ ಪ್ರೇಮವು, ನಿಮ್ಮ ಪ್ರಿಯಳನ್ನು ಮರೆಸುವಂಥ ಇನ್ನೊಬ್ಬ ಸ್ತ್ರೀಯು ನಿಮಗೆ ಪ್ರಾಪ್ತಳಾದರೆ ನಿಮ್ಮಲ್ಲಿ ಪ್ರೇಮವು ಮತ್ತೆ ಉತ್ಪನ್ನವಾಗುವದು ಸ್ವಾಭಾವಿಕವು."

ಈ ಪ್ರಕಾರ ಮಾತಾಡುತ್ತಿರಲು, ಜೀವನಕಲೆಯ ಕೆಲವು ಗೆಳತಿಯರು ಅಲ್ಲಿ ಬಂದದ್ದರಿಂದ ಕಮಲಾಕ್ಷನು ಅಲ್ಲಿಂದ ಹೊರಟುಹೋದನು. ದಿನಕ್ಕಿಂತಲೂ ಈವೊತ್ತು ಕಮಲಾಕ್ಷನು ಜೀವನಕಲೆಯ ಸಂಗಡ ಬಹಳ ಹೊತ್ತು ಮಾತಾಡುತ್ತ ಕುಳಿ

ತದ್ದರಿಂದ, ಆ ಸುಂದರಿಯ ಮೋಹಕ ಸ್ವರೂಪದ ಪ್ರತಿಬಿಂಬವು ಅವನ ಮನ ದಲ್ಲಿ ಸ್ಥಿರವಾಗಿ ಮೂಡಿ, ಅವರ ಯೋಗದಿಂದ ಪದ್ಮನಯನೆಯ ಸ್ಮರಣವಾಗಿ ಅವನ ಮನಸ್ಸು ಬಹಳ ಅಸಮಾಧಾನ ಹೊಂದಿತು. ಅವನು ಆವೊತ್ತಿನ ರಾತ್ರಿ ಊಟ ಉಡಿಗೆಗಳನ್ನೇನೂ ಮಾಡದೆ, ತಳಮಳಿಸುತ್ತ ಹಾಸಿಗೆಯಮೇಲೆ ಬಿದ್ದು ಕೊಂಡನು. ಪದ್ಮನಯನೆಯ ತದೇಕಧ್ಯಾನದಲ್ಲಿ ಅವನ ಮನಸ್ಸು ತೊಡಗಿತು. ವಾಚಕರೇ, ಪ್ರಾಯದಲ್ಲಿ ಸುಶೀಲೆಯೂ, ಸುಂದರಿಯೂ ಆದ ಸ್ತ್ರೀಯನ್ನಗಲಿದ ಪುರುಷನ ಬಾಳುವೆಯನ್ನು ಸುಡತಕ್ಕದ್ದು. ವಿಷಯಸುಖಗಳಿಗೆ ಸ್ತಂಭರೂಪವಾದ ಸ್ತ್ರೀರತ್ನವು ಅಳಿದುಹೋಗುವದರಿಂದ, ಅವನ ಎಲ್ಲ ಸುಖಗಳು ಸಮೂಲವಾಗಿ ನಾಶವಾಗುವವೆಂದು ಹೇಳಬಹುದು. ಶಾಂತರೂ– ನೀತಿನಿಪುಣರೂ– ಧೀರರೂ ಆದ ಶ್ರೀ ರಾಮನೇ ಮೊದಲಾದವರು ಸ್ತ್ರೀವಿಯೋಗದಿಂದ ದುಃಖಪಟ್ಟಿರಲು, ಕಮಲಾಕ್ಷನಂಥ ಪಾಮರನು ತನ್ನ ಪ್ರಿಯಳ ವಿಯೋಗಕ್ಕಾಗಿ ಹಲಬುವದೇನ ಚ್ಚರಿಯು? ಕಮಲಾಕ್ಷನು ತನ್ನ ಬಾಹುಬಲದಯೋಗದಿಂದ ವೈರಿಗಳ, ಸುಗು ಣಗಳ ಯೋಗದಿಂದ ಅರಸನ ಹಾಗು ಎಲ್ಲ ಸಣ್ಣ ದೊಡ್ಡ ಅಧಿಕಾರಿಗಳ, ವಿದ್ಯೆ ಯಿಂದಪಂಡಿತರ, ರೂಪಾತಿಶಯದಿಂದಸ್ತ್ರೀಯರ, ದಯಾಗುಣದಿಂದ ಎಲ್ಲ ಪ್ರ ಜೆಗಳ ಮನಸ್ಸನ್ನು ಜಯಿಸಿ, ಎಲ್ಲರಿಂದ ಹೊಗಳಿಸಿಕೊಳ್ಳುತ್ತಿದ್ದರೂ, ಅವನ ಮನಸ್ಸು ವಿಷಯ ಸುಖಗಳಿಂದ ಜಯಿಸಲ್ಪಟ್ಟದ್ದರಿಂದ ಅವನು ರಾತ್ರಿಯಲ್ಲಿ ಶಯನ ಮಾಡಿದನೆಂದರೆ, ಒಂದೊಂದು ದಿನ ಪದ್ಮನಯನೆಯ ತದೇಕ ಧ್ಯಾನ ದಿಂದಲೇ ರಾತ್ರಿಯೆಲ್ಲ ಅಳಿದುಹೋಗುತ್ತಿತ್ತು. ಅದರಂತೆ ಈ ಹೊತ್ತಾದರೂ ಆಯಿತು. ಅವನು ನಿರಾಶೆಯನ್ನು ಹೊಂದಿ ಮನದಲ್ಲಿ—"ಅಯ್ಯೋ! ನಾನು ಏನುಮಾಡಿದ ಭಾಗ್ಯವೇನು? ನನ್ನ ಪೌರುಷವನ್ನೂ, ಅಖಂಡವಾದಯಶಸ್ಸನ್ನೂ ನೋಡಿ ಸಂತೋಷಪಡುವ ಆಪ್ತರು ಯಾರಿರುವರು? ನನ್ನ ಪ್ರಿಯಳಾದ ಪದ್ಮ ನಯನೆಯು ನನ್ನೆದುರಿಗೆ ಇರುತ್ತಿದ್ದರೆ, ನನ್ನ ಶ್ರಮವು ಸಫಲವಾಗುತ್ತಿತ್ತಲ್ಲ. ಕಮಲಾಕ್ಷನ ಯಾವ ಮಗ್ಗುಲಲ್ಲಿ ಸುಕುಮಾರಿಯ ಮೃದ್ವಂಗವು ಒಪ್ಪುತ್ತಿತ್ತೋ, ಆ ಮಗ್ಗಲು ಈಗ ನನ್ನ ಪ್ರಿಯಳಿಲ್ಲದೆ ಬಂಜೆಯಾದದ್ದರಿಂದ, ನಾನು ಬಾರಿ–ಬಾರಿಗೆ ಹಂಬಲಿಸ ಬೇಕಾಗುತ್ತದೆ. ಆಹಾ! ನನ್ನ ಪ್ರಿಯಪದ್ಮನಯನೆಯ ಉತ್ಸಾಹಕಾರಕವಾದ ಅಧರೋಷ್ಠ ಚುಂಬನವೂ, ಆನಂದಾತಿಶಯವನ್ನುಂಟು ಮಾಡುವ ಅವಳ ಕೋಮಲಾಂಗದ ಆಲಿಂಗನವೂ, ಪ್ರೇಮವನ್ನು ವೃದ್ಧಿಗೊ

ಳಿಸುವ ಅವಳ ಮೃದುವಚನಗಳೂ ಸ್ವಪ್ನದಲ್ಲಿ ಸಹ ದೊರೆಯದಾದವಲ್ಲ!! ಇನ್ನು ನಾನು ಹೇಗೆ ಕಾಲಹರಣಮಾಡಲಿ? ನನ್ನ ಪ್ರಿಯಳ ಶೋಧವಾಗುವದು ತೀರ ಅಸಂಭವವಾಗಿ ತೋರುತ್ತದೆ.''

ಈ ಪ್ರಕಾರ ವಿಚಾರಮಾಡುತ್ತಿರಲು, ಅವನ ಕಣ್ಣುಗಳಲ್ಲಿ ನೀರುಗಳು ಸುರಿಯಹತ್ತಿದವು. ಅವನು ಹಾಸಿಗೆಯ ಮೇಲೆ ಎದ್ದು ಕುಳಿತು ಮೀರಿದ ದುಃಖದಿಂದ ದೊಡ್ಡ ದನಿತೆಗೆದು ಅಳತೊಡಗಿದನು. ದುಃಖದ ಭಾರವು ತಗ್ಗಿದಮೇಲೆ ಪುನಃ ಅವನು ಮಲಗಿಕೊಳ್ಳಲು, ಬೆಳಗುಮುಂಜಾವಿನಲ್ಲಿ ಸ್ವಲ್ಪ ನಿದ್ದೆಹತ್ತಿತು. ದುರ್ದೈವಿಯಾದ ಕಮಲಾಕ್ಷನಿಗೆ ಸ್ವಪ್ನದಲ್ಲಾದರೂ ಪದ್ಮನಯನೆಯ ವಿಯೋಗದುಃಖವು ತಪ್ಪಲಿಲ್ಲ. ತಾನು ಗಿಳಿಯ ಮೋಹದಿಂದ ಪದ್ಮನಯನೆಯನ್ನಗಲಿ, ಅಗ್ನಿಪ್ರವೇಶ ಮಾಡುತ್ತಿದ್ದಂತೆ ಅವನು ಕನಸು ಕಂಡು ದುಃಖಿಸುತ್ತಿರಲು, ಅವನಿಗೆ ಅಗ್ನಿಪ್ರವೇಶಕಾಲಕ್ಕೆ ಸದುಪದೇಶ ಮಾಡಿದ ಋಷಿಯು ಸ್ವಪ್ನದಲ್ಲಿ ಬಂದು—''ರಾಜಪುತ್ರಾ, ವ್ಯರ್ಥವಾಗಿ ದುಃಖಮಾಡಬೇಡ. ನೀನು ದುಃಖಕ್ಕೆ ಪೂರ್ಣವಾಗಿ ಆಶ್ರಯ ಕೊಟ್ಟದ್ದರಿಂದ, ಅದು ನಿನ್ನನ್ನು ಯಾವಾಗಲೂ ಪೀಡಿಸುತ್ತದೆ. ನಿನ್ನ ಪ್ರಿಯಳಾದ ಪದ್ಮನಯನೆಯು ಸುರಕ್ಷಿತವಾಗಿರುವಳು. ಇನ್ನು ಸ್ವಲ್ಪ ದಿನಗಳಲ್ಲಿಯೇ ನೀನು ಅವಳನ್ನು ಕಾಣುತ್ತೀ. ಇನ್ನು ಮೇಲೆ ನೀನು ವ್ಯಸನಪಡದೆ, ನಿನ್ನನ್ನು ಮನಮುಟ್ಟಿ ಪ್ರೀತಿಸುತ್ತಿರುವ ಜೀವನಕಲೆಯನ್ನು ಮಾತ್ರ ಮದುವೆಯಾಗು. ಇದರಿಂದ ನಿನಗೆ ತಪ್ಪದೆ ಕಲ್ಯಾಣವಾಗುವದು.'' ಎಂದು ನುಡಿದು, ಆ ಋಷಿಯು ಅಂತರ್ಧಾನ ಹೊಂದಿದಂತೆ ಆಯಿತು. ಕಮಲಾಕ್ಷನು ಕೆಲವು ವೇಳೆಯ ಮೇಲೆ ಎಚ್ಚತ್ತು, ತನಗೆ ಬಿದ್ದ ಸ್ವಪ್ನವನ್ನು ಕೌತುಕದಿಂದ ವಿಚಾರಮಾಡತೊಡಗಿದನು. ಹಿಂದಕ್ಕೊಮ್ಮೆ ಆ ಋಷಿಯ ಭವಿಷ್ಯವು ನಿಜವಾದದ್ದರಿಂದ, ಅವನಿಗೆ ಸ್ವಪ್ನದ ಸಂಗತಿಯು ಅಕ್ಷರಶಃ ನಿಜವಿರಬೇಕೆಂದು ತೋರಹತ್ತಿತು. ಪದ್ಮನಯನೆಯ ಹಿತವನ್ನು ಬಯಸಿ ಅಂದಿನಿಂದ ಅವನು ಜೀವನಕಲೆಯೊಡನೆ ಸಲಿಗೆಯಿಂದ ನಡೆಯಹತ್ತಿದನು. ಇದರಿಂದ ಅವರಿಬ್ಬರ ಪ್ರೇಮವು ಪರಸ್ಪರರಲ್ಲಿ ಹೆಚ್ಚಾಗುತ್ತ ಹೋಯಿತು. ಒಂದು ದಿನ ಆತನು ಜೀವನಕಲೆಯನ್ನು ಕುರಿತು—''ಸಖೀ, ಜೀವನಕಲಾ, ನೀನು ನನ್ನನ್ನು ಈ ಬಗೆಯಾಗಿ ಪ್ರೀತಿಸುತ್ತಿರುವದರಿಂದ, ನನ್ನ ಪ್ರಿಯಳ ವಿಯೋಗದುಃಖವು ಕಡಿಮೆಯಾಗಿ, ಯೋಗ್ಯ ಸ್ತ್ರೀಯನ್ನು ಮದುವೆಯಾಗುವ ಇಚ್ಛೆಯು

ನನಗಾಗಿದೆ. ನೀನು ಚತುರಳೇ ಇರುವವರಿಂದ ನಾನು ಈ ಸಂಬಂಧದಿಂದ ನಿನಗೆ ಹೆಚ್ಚಿಗೆ ಹೇಳಲಾರೆನು. ನನ್ನ ಮನದ ಆಶೆಯನ್ನು ಪೂರ್ಣಮಾಡುವ ಭಾರವು ನಿನ್ನನ್ನು ಕೂಡಿದೆ." ಅನ್ನಲು, ಜೀವನಕಲೆಯು ಸಂತುಷ್ಟಳಾಗಿ ನಸುಲಜ್ಜೆಯೊಡನೆ ಸೌಮ್ಯ ಸ್ವರದಿಂದ— ವೀರಾಗ್ರಣಿಗಳೇ, ನಾನು ಹೆಚ್ಚಿಗೇನೂ ಹೇಳಲಾರೆನು. ತಮ್ಮ ಸುಖಕ್ಕಾಗಿ ನನ್ನ ಶರೀರವನ್ನು ಸವಿಸಿ, ಅದನ್ನು ಸಫಲವಾಗಿ ಮಾಡುವೆನೆಂಬದನ್ನು ತಾವು ಧೃಡವಾಗಿ ನಂಬಬೇಕು.

ಜೀವನಕಲೆಯ ವಿವಾಹಕ್ಕೆ ಅವಳು ಯೋಗ್ಯ ವರನನ್ನು ಆರಿಸಿಕೊಳ್ಳು ವದೊಂದೇ ಪ್ರತಿಬಂಧಕವಾಗಿತ್ತು. ಆ ಮೋಹಿನಿಯ ಮನಸ್ಸನ್ನು ಪೂರ್ಣವಾಗಿ ಆಕ್ರಮಿಸಿಕೊಂಡಿದ್ದ ಕಮಲಾಕ್ಷನಿಗೆ, ಅವಳ ಪ್ರಾಪ್ತಿಯು ಸುಲಭವಾಗಿ ಆಯಿತು. ಜೀವನಕಲೆಯು ತನ್ನ ತಾಯಿಯ ಮುಖಾಂತರವಾಗಿ, ತಂದೆಯಾದ ದೇವದತ್ತನಿಗೆ, ತಾನು ಕಮಲಾಕ್ಷನನ್ನು ಮದುವೆಯಾಗುವೆನೆಂಬ ಅಭಿಪ್ರಾಯವನ್ನು ತಿಳಿಸಲು, ಅವನು ಸಂತೋಷದಿಂದ ಜೀವನಕಲೆಯನ್ನು ಕಮಲಾಕ್ಷನಿಗೆ ಮದುವೆ ಮಾಡಿ ಕೊಟ್ಟನು. ಜೀವನಕಲೆಯು ಪದ್ಮನಯನೆಯ ಬಾಲಮಿತ್ರಳಿದ್ದಳು; ಅವಳ ಗುಣಗಳು ಪದ್ಮನಯನೆಯ ಗುಣಗಳನ್ನು ಜಯಿಸುವಂತೆ ಇದ್ದವು. ಅವಳ ಸೌಂದರ್ಯವಂತೂ ಸುಪ್ರಸಿದ್ಧವೇ ಇತ್ತು. ಕಮಲಾಕ್ಷನು ಕೃತಜ್ಞತೆಯಿಂದಲ್ಲದೆ, ಉಳಿದ ಯಾವ ಮಾತಿನಿಂದಲೂ ಪದ್ಮನಯನೆಯನ್ನು ನೆನಿಸದಂತೆ ಜೀವನಕಲೆಯು ಅವನಿಗೆ ಅನುಕೂಲೆಯಾಗಿ ವರ್ತಿಸಹತ್ತಿದಳು.

ಬರಬರುತ್ತ ಜೀವನಕಲಾ-ಕಮಲಾಕ್ಷರ ಪ್ರೇಮವು ವೃದ್ಧಿಂಗತವಾಗಹತ್ತಿತು. ಕಮಲಾಕ್ಷನು ಮೆಲ್ಲಮೆಲ್ಲನೆ ಪದ್ಮನಯನೆಯನ್ನು ಮರೆಯತೊಡಗಿದನು. ತನ್ನ ಪ್ರಿಯ ಪತಿಯ ಧವಲಕೀರ್ತಿಯ ವಿಸ್ತಾರ, ತನ್ನ ಪ್ರಿಯಳ ವಿಷಯದ ಆತನ ವಿಸ್ಮೃತಿ ಇವುಗಳಿಂದ ಜೀವನಕಲೆಗೆ ಬಹು ಸಮಾಧಾನವಾಗುತ್ತಿತ್ತು. ಆಕೆಯು ಬಹು ರಸಿಕಳು, ಉದಾರಳು, ದಯಾಪೂರ್ಣಳು. ಸ್ತ್ರೀಜನರಲ್ಲಿ ವಿಶೇಷವಾಗಿ ಕಂಗೊಳಿಸುವ ಈರ್ಷಾಸೂಯಾದಿ ದುರ್ಗುಣಗಳ ಗಾಳಿಯು ಸಹ ಆಕೆಯನ್ನು ಸೋಂಕಿದ್ದಿಲ್ಲ. ಈ ಸದ್ಗುಣಗಳ ಮೂಲಕ ಆಕೆಯು ತಂದೆಯ ವಾತ್ಸಲ್ಯಾತಿಶಯಕ್ಕೆ ಪಾತ್ರಳಾಗಿದ್ದಳು. ಜೀವನಕಲೆಯ ವಿಹಾರ ಮಂದಿರವು ಇಂದ್ರನ ಅಮರಾವತಿಯೊಳಗಿನ ವಿಹಾರ ಮಂದಿರವನ್ನು

ಹೋಯಾಳಿಸುತ್ತಿತ್ತು. ಅಂಥ ಮಂದಿರಕ್ಕೆ ಅಲಂಕಾರಭೂತಳಾದ ಆ ಮಂತ್ರಿ ಕುವರಿಯು ತನ್ನ ಸೌಂದರ್ಯ-ಲಾವಣ್ಯಗಳಿಂದ ನೋಡುವವರ ಚಿತ್ತವನ್ನು ಭ್ರಮೆಗೊಳಿಸುತ್ತ, ಮಂಚದ ಮೇಲೆ ಹರಡಿದ ಗುಲಾಬಿ ಹೂಗಳನ್ನು ಒತ್ತಿ ಪವಡಿಸಿದ್ದಳು; ಹರಡಿದ ಆ ಗುಲಾಬಿಯ ಹೂಗಳ ಸುಗಂಧದಲ್ಲಿ ಅವಳು ಮುಡಿದಿದ್ದ ಮಲ್ಲಿಗೆಯ ಹೂಗಳ ಸುಗಂಧವು ಕೂಡಿ ಉಂಟಾದ ಮಿಶ್ರಸುಗಂಧವು ಮನುಷ್ಯಮಾತ್ರರ ಘ್ರಾಣೇಂದ್ರಿಯವನ್ನು ತೃಪ್ತಿಗೊಳಿಸುತ್ತಿತ್ತು. ಹೀಗೆ ಒತ್ತಟ್ಟಿಗೆ ಸುಗಂಧಗಳ ಮಿಶ್ರಣದ ವ್ಯಾಪಾರವು ನಡೆದಿರಲು, ಮತ್ತೊತ್ತಟ್ಟಿಗೆ ಬಣ್ಣಗಳ ಮಿಶ್ರಣದ ವ್ಯಾಪಾರವು ನಡೆದಿತ್ತು. ಜೀವನಕಲೆಯ ಶರೀರದ ಗೌರವರ್ಣ, ಅವಳು ಉಟ್ಟ ವಸ್ತ್ರದ ಶುಭ್ರವರ್ಣ, ಹಾಸಿದ ಹೂಗಳ ಗುಲಾಬಿಯ ವರ್ಣ, ಇಟ್ಟುಕೊಂಡ ಅಲಂಕಾರಗಳೊಳಗಿನ ನವರತ್ನಗಳ ವಿಚಿತ್ರವರ್ಣ ಇವುಗಳ ಸಂಕರದಿಂದುಂಟಾದ ಮಿಶ್ರವರ್ಣದ ಹೊಳಪಿನಿಂದ ಜೀವನಕಲೆಯ ಸೌಂದರ್ಯಕ್ಕೆ ಒಪ್ಪ ಹಾಕಿದಂತೆ ಆಗಿತ್ತು. ತನ್ನ ಪತಿಯ ಮನಸ್ಸನ್ನು ಸೌಜನ್ಯದಿಂದ ಪೂರ್ಣವಾಗಿ ಎಳಕೊಂಡು, ಅದರೊಳಗಿನ ಪತ್ನೀ-ವಿಯೋಗರೂಪವಾದ ಅಗ್ನಿಯನ್ನು ತನ್ನಲ್ಲಿದ್ದ ನಿಷ್ಕಲಂಕವಾದ ಉದಾತ್ತ ಪ್ರೇಮ ಜಲದಿಂದ ಆರಿಸಿ, ಆತನನ್ನು ಸುಖ ಸಾಮ್ರಾಜ್ಯದ ಸಿಂಹಾಸನವೇರಿಸಿದ್ದನ್ನು ನೆನಿಸಿ-ನೆನಿಸಿ ಆಕೆಯು ಸುಖಿಸುತ್ತಿದ್ದಳು! ಅಷ್ಟರಲ್ಲಿ ಮಂದಿರದ ಕಳ್ಳಬಾಗಿಲನ್ನು ಪಕ್ಕನೆ ತೆರೆದು ಮುಗುಳು ನಗೆ ನಗುತ್ತ ಕಮಲಾಕ್ಷನು ಅಲ್ಲಿಗೆ ಬರಲು, ದಾಸಿಯರು ಹೊರಟು ಹೋದರು.

ಪತಿಯ ಆಗಮನವಾದದ್ದನ್ನು ನೋಡಿ ಜೀವನಕಲೆಯು ಉತ್ಸಾಹಪಟ್ಟು, ಲಗಬಗೆಯಿಂದ ಏಳುವದನ್ನು ನೋಡಿ, ಕಮಲಾಕ್ಷನು ಅವಳ ಕೋಮಲವಾದ ಕೈಯನ್ನು ತನ್ನ ಕೈಯಿಂದ ಹಿಡಿದು ಅವಳನ್ನು ಹಾಗೆಯೇ ಮಲಗಿಸುತ್ತ -ಸುಂದರೀ, ಇಷ್ಟು ಆಯಾಸವೇಕೆ? ಈ ಗುಲಾಬಿಯ ಹೂಗಳ ಮೇಲೆ ಹೊರಳಾಡುವಾಗಲೇ ನೀನು ಸ್ವರ್ಗಾಂಗನೆಯಂತೆ ಮನೋಹರವಾಗಿ ಒಪ್ಪುತ್ತೀ, ಮಲಗುಮಲಗು; ಅನ್ನಲು, ಜೀವನಕಲೆಯು ಆನಂದಪೂರ್ಣವಾದ ಮುಪ್ರೆಯಿಂದ ಸುಮ್ಮನೆ ಪತಿಯನ್ನು ನೋಡತೊಡಗಿದಳು. ಆಗ ಆತನು-ಮನೋಹರೆ, ಈ ದಿನ ನನಗೆ ಅತ್ಯಂತವಾದ ಆನಂದವಾಗಿದೆ. ಆ ಆನಂದದ

ಕಾರಣವನ್ನು ನೀನೇ ಗೊತ್ತು ಹಿಡಿದರೆ, ನಿನ್ನನ್ನು ಎದ್ದು ಕೊಡಗೊಡುವೆನು, ಇಲ್ಲದಿದ್ದರೆ ಹೀಗೆಯೇ ಹಿಡಕೊಂಡು ಕೂಡ್ರುವೆನು!

ಜೀವನಕಲೆ— ಪ್ರತಾಪದಿಂದ ಭೂಮಂಡಲವನ್ನೇ ದಂಗುಬಡಿಸಿದವರಿಗೆ ಪ್ರತಿ ಒಂದು ಸಂಗತಿಯು ಆನಂದಕರವಾಗಿಯೇ ಪರಿಣಮಿಸುತ್ತದೆ. ಪ್ರಭುಗಳ ಮನಸ್ಸನ್ನು ನೋಯಿಸಲಿಕ್ಕೆ ಅದಾವ ಸಂಗತಿಯು ಮುಂದಾಗುವದು?

ಕಮಲಾಕ್ಷ— ಪ್ರಿಯತಮೆ, ತಪ್ಪಿದಿ. ಎಲ್ಲ ಸಂಗತಿಗಳಿಂದ ನನಗೆ ಆನಂದವಾಗಹತ್ತಿದರೆ, ನನ್ನ ಮಹತ್ವವಾದರೂ ಏನು ಉಳಿಯುವದು! ಕೆಲವು ಶ್ರೇಷ್ಠ ಸಂಗತಿಗಳು ಮಾತ್ರ ನನಗೆ ಆನಂದವನ್ನೀಯಲು ಸಮರ್ಥವಾಗಿರುವವು. ನಿನ್ನ ವಿಷಯದ ಪ್ರತಿ ಒಂದು ಸಂಗತಿಯಿಂದ ನನಗೆ ಆನಂದವಾಗುವದನ್ನು ನೋಡಿ, ಜಗತ್ತಿನಲ್ಲಿ ಎಲ್ಲ ಸಂಗತಿಗಳಿಂದ ನನಗೆ ಆನಂದವಾಗ್ತುದೆಂಬ ಭ್ರಾಂತಿಗೆ ನೀನು ಒಳಗಾದಂತೆ ತೋರುತ್ತದೆ. ಕಮಲಾಕ್ಷನ ಮನಸ್ಸನ್ನು ಪ್ರಸನ್ನೀಕರಿಸಿಕೊಳ್ಳುವದು ಪರಮ ದುಸ್ತರವು. ಆ ಬಂಗಾಲಿಯ ವಿದ್ಯೆಯು ಈ ದೊಡ್ಡ ಕಣ್ಣುಗಳ ಕುಣಿಕೆಯೊಳಗಿಂದ ಹೊರಬೀಳುವ ದೃಷ್ಟಿಗಳಿಗೆ ಮಾತ್ರ ಸಾಧಿಸಿರುತ್ತದೆ. ಹೂ, ಹೇಳು, ಬೇಗನೆ ಹೇಳು, ನನ್ನ ಆನಂದದ ಕಾರಣವು ಯಾವದು?

ಜೀವನಕಲೆ—ಹೂ! ಹಾಗೇ ಆಗಲಿ, ಹೇಳುತ್ತೇನೆ. ಪ್ರಭುಗಳು ಯಾವದೊಂದು ಹೊಸ ಕವಿತೆಯನ್ನು ಇದೇ ಈಗ ರಚಿಸಿ ಮುಗಿಸಿರಬಹುದು; ಯಾವನೊಬ್ಬ ಬಲಿಷ್ಠ ಸಾರ್ವಭೌಮನು ಈ ಚರಣಗಳ ಪ್ರಭಾವಕ್ಕೆ ದಂಗುಬಡೆದು ಕೃಪಾಛತ್ರವನ್ನು ಆಶ್ರಯಿಸಿರಬಹುದು; ಲೋಕಹಿತದ ಮಹತ್ಕಾರ್ಯವು ಸಾಧಿಸಿರಬಹುದು; ಔದಾರ್ಯದ ಆಳಿಕೆಗೆ ಮೆಚ್ಚಿ ಪ್ರಜೆಗಳು ಸುಪ್ರಸನ್ನರಾಗಿರಬಹುದು, ಗುಣಿಜನರ ಲಾಭವಾಗಿರಬಹುದು; ಇವುಗಳಲ್ಲಿ ಯಾವ ಕಾರಣವೂ ಇರದಿದ್ದರೆ ಇನ್ನು ಇನ್ನು —

ಹೀಗೆ ನುಡಿಯುತ್ತಿರಲು, ಒಮ್ಮೆಲೆ ಜೀವನಕಲೆಯ ಮುಖಮುದ್ರೆಯು ರೂಪಾಂತರಿಸಿತು. ಆಕೆಯ ಹುಬ್ಬುಗಳು ಗಂಟಿಕ್ಕಿದವು, ಹಣೆಗೆ ನಿರಿಗೆಗಳು ಬಿದ್ದವು, ಆಕೆಯು ತನ್ನ ವಿಶಾಲವಾದ ನೇತ್ರದಿಂದ ಒಂದು ತೀಕ್ಷ್ಣ ಕಟಾಕ್ಷವನ್ನು ಕಿತ್ತು ಕಮಲಾಕ್ಷನನ್ನು ಚುಚ್ಚಿ—

ಜೀವನಕಲೆ—ಇನ್ನು ಬಚ್ಚಿಯಾದರೂ ಯಾಕೆ ಇಡಬೇಕು? ನನ್ನಲ್ಲಿ ನೆಟ್ಟು ಹೋಗಿದ್ದ ತಮ್ಮ ಚಿತ್ರವನ್ನು ಬಲಾತ್ಕಾರದಿಂದ ಕಿತ್ತುಕೊಳ್ಳುವದಕ್ಕಾಗಿ ಯಾವಳಾದರೂ ಒಬ್ಬ ಸುಂದರಿಯು ತಮ್ಮ ಕಣ್ಣಿಗೆ ಬಿದ್ದಿರಬಹುದು!

ಹೀಗೆ ನುಡಿದು ಜೀವನಕಲೆಯು ಕಮಲಾಕ್ಷನ ಕಡೆಗಾಗಿದ್ದ ತನ್ನ ಮೋರೆಯನ್ನು ಬೇರೆಕಡೆಗೆ ತಿರುಗಿಸಿ, ಕಣ್ಣುಮುಚ್ಚಿಕೊಂಡಳು.

ಇದನ್ನು ನೋಡಿ ಕಮಲಾಕ್ಷನ ನಗೆಯು ಹೆಚ್ಚಿತು. ಆತನು ತನ್ನ ಕೈಯಿಂದ ಜೀವನಕಲೆಯ ಮೋರೆಯನ್ನು ತನ್ನ ಕಡೆಗೆ ತಿರುಗಿಸಿಕೊಂಡು— ಮನಮೋಹಿನೀ, ಪುರುಷರನ್ನು ಪೂರಾ ಹತವೀರ್ಯರಾಗಮಾಡುವಸ್ತ್ರೀಯರ ಲೀಲೆಗಳು, ಈರ್ಷೆಯಿಂದಲೇ ಹುಟ್ಟಬರುತ್ತವೆಂಬಂತೆ ಕಾಣುತ್ತದೆ. ಜೀವನಕಲೆಯನ್ನು ಅಸಮಾಧಾನಗೊಳಿಸಲು ಸಮರ್ಥಳಾದ ಅಪ್ಸರೆಯು ಈ ಜಗತ್ತಿನಲ್ಲಿ ಅದಾವಳಿರುವಳು? ತೆಗೆ ಆ ಕಣ್ಣುಗಳನ್ನು; ಪ್ರಿಯೇ, ನೀನು ಸೋತೆಯಷ್ಟೇ? ಹಾಗಾದರೆ, ನನ್ನ ಆನಂದದ ಕಾರಣವನ್ನು ನನ್ನ ಮುಖದಿಂದಲೇ ಹೇಳುತ್ತೇನೆ ಕೇಳು, ಎನ್ನಲು, ಜೀವನಕಲೆಯು ಕಣ್ಣುಗಳನ್ನು ಅರ್ಧತೆಗೆದು, ಕಾರಣವನ್ನು ಕೇಳುವ ಉತ್ಕಂಠೆಯು ತನ್ನ ಮುಖಮುದ್ರೆಯಲ್ಲಿ ವ್ಯಕ್ತವಾಗಬಾರದೆಂದು ಪ್ರಯತ್ನ ಮಾಡತೊಡಗಿದಳು.

ಕಮಲಾಕ್ಷನು ತನ್ನ ಪ್ರಿಯಳ ರಸಿಕತನಕ್ಕೆ ತಲೆದೂಗುತ್ತ ಕರವಸ್ತ್ರದಲ್ಲಿ ಮುಚ್ಚಿಕೊಂಡು ತಂದಿದ್ದ ಒಂದು ರತ್ನದ ಪದಕವನ್ನು ಅವಳ ಮೋರೆಯ ಮೇಲೆ ಇಟ್ಟನು. ಕೂಡಲೆ ಪದಕದೊಳಗಿನ ಉಜ್ವಲರತ್ನಗಳ ಕಾಂತಿಗಳು ಕಣ್ಣು ಕುಕ್ಕತೊಡಗಿದವು. ಮಂದಿರವು ವಿಚಿತ್ರ ಕಾಂತಿಮಯವಾಯಿತು. ಸಂಜೆಯ ಸೂರ್ಯಕಿರಣಗಳ ಪರಾವರ್ತನದ ವಿಚಿತ್ರವರ್ಣದ ಆಕಾಶತಲದಲ್ಲಿ ಯಥೇಚ್ಛವಾಗಿ ಶಯನಮಾಡಿದ ದೇವತೆಯಂತೆ ಜೀವನಕಲೆಯು ಶೋಭಿಸತೊಡಗಿದಳು! ಆಗ ಅವಳು ಪತಿಯ ಕೈಮೇಲೆ ಮೆಲ್ಲನೆ ತನ್ನ ಮೈಭಾರವನ್ನು ಹಾಕಿ ಸೆರಗು ಹೊದ್ದುಕೊಳ್ಳುತ್ತ ಎದ್ದು ಕುಳಿತು— ಅಹಾ! ಈ ಅಪರೂಪದಪದಕವು ಎಲ್ಲಿದೊರೆಯಿತು! ಇಂದಿನವರೆಗೆ ಇಂಥಅಲಂಕಾರವನ್ನು ನಾನು ನೋಡಿದವಳಲ್ಲ. ಆನಂದದ ಇಂಥ ಗುಪ್ತ ಕಾರಣವು ನನಗೆ ಹೇಗೆ ಗೊತ್ತಾಗಬೇಕು? ಒಮ್ಮೆ ಪದ್ಮನಯನೆಯನ್ನು ತನ್ನ ಪ್ರಭುವಿಗೆ ಕೊಡಬೇಕೆಂದು ಕೇಳಬಂದಿದ ಸಿಂಧುದೇಶದ ರಾಜನ ಮಂತ್ರಿಯು, ಇಂಥ ಒಂದು ಪದಕವನು

ಪದ್ಮನಯನೆಗೆ ಕಾಣಿಕೆಯಾಗಿ ತಂದದ್ದನ್ನು ನೋಡಿದ್ದೇನು, ಎಂದು ಪಕ್ಕನೆ ನುಡಿದಳು.

ಪದ್ಮನಯನೆಯ ಹೆಸರಿನೊಳಗಿನ ಐದು ಅಕ್ಷರಗಳ ತೆರೆಗಳು ಆ ಮಂದಿರದ ವಾತಾವರಣದಲ್ಲಿ ಉತ್ಪನ್ನವಾಗಿ ಅವು ಕಮಲಾಕ್ಷನ ಕರ್ಣರಂಧ್ರವನ್ನು ಪ್ರವೇಶಿಸಲು, ಅವನ ಮೋರೆಯು ಝುರ್ರೆಂದು ಇಳಿಯಿತು. ಅವನ ಆನಂದವು ಅಂತರ್ಧಾನವನ್ನು ಹೊಂದಿ, ಅದರ ಸ್ಥಳವನ್ನು ಅಸಮಾಧಾನವು ಆಕ್ರಮಿಸಿತು. ಬಹಳ ಹೊತ್ತಾದರೂ ಅವನ ಮುಖದಿಂದ ಅಕ್ಷರಗಳೇ ಹೊರಡಲಿಲ್ಲ. ಇದೇ ಈಗ ಶೃಂಗಾರಸಾಗರದಲ್ಲಿ ಈಸಾಡಿ ಮೈ ಕೂಡ ಆರದೆ ಇದ್ದ ಆ ತರುಣನು, ಪದ್ಮನಯನೆಯೆಂಬ ಶಬ್ದವು ಕಿವಿಗೆ ಬಿದ್ದ ಕೂಡಲೆ ಜೀವನಕಲೆಯ ಮುಖವನ್ನು ನೋಡಲಿಕ್ಕೂ ಸಂಕೋಚಪಡುವಷ್ಟು ವೈರಾಗ್ಯವನ್ನು ತಾಳಿದನು. ಕಮಲಾಕ್ಷನು ತನ್ನ ಮನಸ್ಸಿನಲ್ಲಿ — ಹಾ! ನೀಚಾ, ಕಮಲಾಕ್ಷಾ, ಸರ್ವಸ್ವವನ್ನು ನಿನಗೆ ಅರ್ಪಿಸಿ, ಸರ್ವವೂ ನೀನೇ ಎಂದು ನಂಬಿ, ನಿನ್ನ ಸಲುವಾಗಿ ಸರ್ವಸಂಗಪರಿತ್ಯಾಗ ಮಾಡಿದ ಪದ್ಮನಯನೆಯನ್ನು ಇಷ್ಟರಲ್ಲಿಯೇ ಮರೆತು, ಆಕೆಯ ಗತಿಯು ಏನಾಗಿರಬಹುದೆಂಬದನ್ನು ಕೂಡ ಚಿಂತಿಸದೆ ವಿಲಾಸಮಗ್ನನಾದೆಯಾ? ನೀನು ಇಷ್ಟು ನಾಚಿಕೆಗೇಡಿಯೂ, ಕೃತಘ್ನನೂ ಹೇಗಾದೆ? ಹಾ! ಪ್ರಿಯೇ ಪದ್ಮನಯನೇ, ಕಟಕನಾದ ನನ್ನನ್ನು ನಂಬಿ ನೀನು ಎಷ್ಟು ಕಂಗಾಲಳಾದೆಯಲ್ಲ! ನಿನ್ನಂಥ ಸತ್ವಶೀಲೆಯ ಉಪಮರ್ದವು ನನ್ನಿಂದ ಇಷ್ಟರ ಮಟ್ಟಿಗೆ ಆಗಬೇಕೆ? ಕಮಲಾಕ್ಷಾ, ಎಚ್ಚರಿಕೆಯಿರಲಿ; ವಿಷಯೋಪಭೋಗದ ಮದದಿಂದ ಮೈಮರೆಯಬೇಡ, ಬಲವಾದ ಶಿಕ್ಷೆಗೆ ಒಳಗಾದೀ, ಎಂದು ತನ್ನನ್ನು ತಿರಸ್ಕರಿಸಿಕೊಂಡನು. ಹೀಗೆ ತಿರಸ್ಕರಿಸಿಕೊಳ್ಳುವಾಗ ಅವನ ಕಂಠವು ಬಿಗಿದು ಬಂದಿತ್ತು. ಹೀಗೆ ಒಮ್ಮಿಂದೊಮ್ಮೆ ಪತಿಯ ಮುಖಮುದ್ರೆಯಲ್ಲಿ ಆದ ಹೆಚ್ಚುಕಡಿಮೆಯನ್ನು ನೋಡಿ ಜೀವನಕಲೆಯು ಬೆರಗಾದಳು. ಕಾರಣವನ್ನು ವಿಚಾರಿಸುವ ಧೈರ್ಯವು ಆಕೆಗೆ ಆಗಲೊಲ್ಲದು. ಅವಳ ಸಂಶಯವನ್ನು ದೂರ ಮಾಡುವ ಧೈರ್ಯವು ಕಮಲಾಕ್ಷನಿಗಾಗಲೊಲ್ಲದು. ಈ ಸ್ಥಿತಿಯಲ್ಲಿ ಆ ಸತೀಪತಿಗಳು ಮೌನವನ್ನು ತಾಳಿ ಅಸಮಾಧಾನಕ್ಕೆ ಗುರಿಯಾಗಿ ಚಿತ್ರದಗೊಂಬೆಗಳಂತೆ ಕುಳಿತುಕೊಂಡರು. ಕೆಲಹೊತ್ತಿನ ಮೇಲೆ ಜೀವನಕಲೆಯೇ ಧೈರ್ಯವನ್ನು ತಾಳಿ ಪತಿಯನ್ನು ಕುರಿತು— ವೀರಾಗ್ರಣಿಗಳೇ, ಈ ದಾಸಿಯು ಔದ

ತ್ಯಕ್ಕಾಗಿ ಕ್ಷಮೆಯಿರಬೇಕು. ಆಕಸ್ಮಿಕವಾಗಿ ತಮ್ಮ ಮುಖವು ಬಾಡಿಪ್ಪನ್ನು ನೋಡಿ ನನಗೆ ಬಹಳ ವ್ಯಸನವಾಗಿದೆ. ಈ ದಾಸಿಯು ಕೇಳಲಿಕ್ಕೆ ತಕ್ಕವಳಿದ್ದರೆ, ಕಾರಣವನ್ನು ತಿಳಿಸುವ ಕೃಪೆಯಾಗಬೇಕು, ಎನ್ನಲು, ಕಮಲಾಕ್ಷನು—ವಲ್ಲಭೇ, ನಿನಗಿಂತಲೂ ಹೆಚ್ಚಿನ ಆಪ್ತರು ಈ ಜಗತ್ತಿನಲ್ಲಿ ಸದ್ಯಕ್ಕೆ ನನ್ನ ಪಾಲಿಗೆ ಯಾರೂ ಉಳಿದಿಲ್ಲೆಂದು ಹೇಳಬಹುದು. ಅಂದಬಳಿಕ ನನ್ನ ದುಃಖದ ಕಾರಣವನ್ನು ನಿನ್ನ ಮುಂದೆ ಹೇಳದೆ ಮತ್ತೆ ಯಾರ ಮುಂದೆ ಹೇಳಲಿ? ಇಲ್ಲಿಯವರೆಗೆ ಬುದ್ಧಿಪೂರ್ವಕವಾಗಿ ಮುಚ್ಚಿ ಇಟ್ಟಿದ್ದ ನನ್ನ ನಿಜವಾದ ಚರಿತ್ರವನ್ನು ಹೇಳುವೆನು ಕೇಳು. ಇದರಿಂದ ನನಗೂ ದುಃಖದ ಭಾರವು ಕೆಲಮಟ್ಟಿಗೆ ಕಡಿಮೆಯಾಗಬಹುದು, ಎಂದು ಹೇಳಿ, ತನ್ನನ್ನು ಯಾವಾಗಲೂ ಬಾಧಿಸುತ್ತಿಪ್ಪ ಪದ್ಮನಯನೆಯ ವಿಯೋಗದ ದುಃಖವನ್ನು ಸಾದ್ಯಂತವಾಗಿ ಹೇಳಿದನು.

ಕಮಲಾಕ್ಷನ ಆಶ್ಚರ್ಯಕರವಾದ ಚರಿತ್ರವನ್ನು ಕೇಳಿ ಜೀವನಕಲೆಯು ಕೆಲವು ವೇಳೆಯವರೆಗೆ ಸುಮ್ಮನೆ ಕುಳಿತುಕೊಂಡಳು. ಬಳಿಕ ಆ ಕೋಮಲೆಯು ದುಃಖದಿಂದ—ಪ್ರಭುಗಳೇ, ತಮ್ಮ ಅದ್ಭುತ ಚರಿತ್ರವನ್ನು ಕೇಳಿ ನಾನು ಭ್ರಮಿಷ್ಟಳಾದೆನು. ಸರ್ವರ ಲೋಭಕ್ಕೆ ಪಾತ್ರಳೂ, ನನ್ನ ಜೀವದ ಗೆಳತಿಯೂ ಆದ ಪದ್ಮನಯನೆಯ ಸ್ಥಿತಿಯು ಹೀಗಾದೀತೆಂದು ಯಾರಿಗೂ ತಿಳಿದಿದ್ದಿಲ್ಲ. ಭವಿತವ್ಯವನ್ನು ತಪ್ಪಿಸಲು ಯಾರೂ ಸಮರ್ಥರಲ್ಲ. ನನ್ನ ಸಖಿಯು ದುಃಖಪಡುತ್ತಿರಲು, ನಾನು ಅವಳ ಪತಿಯೊಡನೆ ವಿಲಾಸಮಗ್ನಳಾಗಿರುವದನ್ನು ನೆನಸಿದರೆ, ಮನಸ್ಸಿಗೆ ವಿಷಾದವಾಗುತ್ತದೆ. ಏನು ವಿಚಿತ್ರಯೋಗವಿದು! ನನ್ನ ಪ್ರಿಯಸಖಿಯು ಸುದೈವದಿಂದ ಇಲ್ಲಿಗೆ ಪ್ರಾಪ್ತಳಾದರೆ, ಯಾವ ಮೋರೆಯಿಂದ ನಾನು ಆಕೆಯನ್ನು ಕಾಣಲಿ! ನನ್ನ ದುಷ್ಟತನದ ಪರಮಾವಧಿಯಾಯಿತು, ದಯಾಶೂನ್ಯತೆಯ ಮೇರೆಯು ತಪ್ಪಿತು, ಸೌಜನ್ಯವು ಪೂರಾ ಹಾಳಾಗಿ ಹೋಯಿತು. (ಕಣ್ಣಲ್ಲಿ ನೀರುತಂದು)—ಪ್ರಿಯಸಖೀ, ಪದ್ಮನಯನೇ, ನನ್ನ ನೀಚತನವೆಷ್ಟುವ್ವಾ! ನಿನ್ನನ್ನು ದುಃಖಕ್ಕೆ ಗುರಿಮಾಡಿ, ನಿನ್ನ ಪ್ರಾಣಪದಕವನ್ನ ಹೃದಯದಲ್ಲಿ ಧರಿಸಿದ ಹೆಮ್ಮೆಯಿಂದ ಮೆರೆಯುವದಕ್ಕಾಗಿಯೇ ನಾನು ಜನ್ಮತಾಳಿದೆನೇ!! ಮಹಾಸತಿಯೇ, ನಿನ್ನ ಆ ಗಂಭೀರವೃತ್ತಿಯೆತ್ತ, ನನ್ನ ಈ ಬಾಲಭಾವವೆತ್ತ! ನಾನೂ ನೀನೂ ಕೂಡಿ ಆಡಿದವರಲ್ಲವೆ? ನನ್ನನ್ನು ಒಡಹುಟ್ಟಿದ ತಂಗಿಯಂತೆ ನೀನು ನಡಿಸಿಕೊಂಡೆಯಲ್ಲ! ಸೌಜನ್ಯವು

ಯಾರ ಸಹವಾಸದಿಂದ ನನ್ನಲ್ಲಿ ಪ್ರಾಪ್ತವಾಯಿತು ಹೇಳು. ನಿನ್ನ ಸದ್ಗುಣ, ನಿನ್ನ ಸೌಜನ್ಯ, ನಿನ್ನ ಸೌಂದರ್ಯ, ನಿನ್ನ ಸರಳತನ, ನಿನ್ನ ಸೌಹಾರ್ದ್ಯ, ನಿನ್ನ ದಯಾಲುತ್ವ ಇವು ನಿನ್ನಲ್ಲಿಯೇ ಅಲ್ಲವೆ ಮತ್ತಾರಲ್ಲಿ ಇರುವವು? ನೀನು ಸಾಮಾನ್ಯ ಸ್ತ್ರೀಯಲ್ಲ; ನಿನ್ನ ಚರಿತ್ರವನ್ನು ಕೇಳಿದ್ದರಿಂದ ನನ್ನ ಅಭಿಮಾನವು ಹಾಳಾಗಿ, ನಿನ್ನಲ್ಲಿ ಪೂಜ್ಯಬುದ್ಧಿಯು ಉತ್ಪನ್ನವಾಗಿದೆ. ಕಮಲಾಕ್ಷ ಪ್ರಭುಗಳಿಗೆ ತಕ್ಕ ಹೆಂಡತಿಯು ನೀನೇ, ನಾನು ನಿನ್ನ ದಾಸಿಯಾಗಲಿಕ್ಕೂ ತಕ್ಕವಳಲ್ಲ. ಪ್ರಿಯಸಖೀ, ಪದ್ಮನಯನೇ, ದೇವರ ದಯದಿಂದ ನಿನ್ನ ಶೋಧವಾದರೆ, ನಿಶ್ಚಯವಾಗಿ ನಾನು ನಿನ್ನ ತೊತ್ತಾಗಿ ಬಾಳುವೆನು. ಇಂದಿಗೆ ನನ್ನ ಸಂಸಾರದ ಸವಿಯು ಹೋಯಿತು. ಮೊದಲೇ ತಿಳಿದಿದ್ದರೆ ಕಮಲಾಕ್ಷ ಪ್ರಭುಗಳ ಸೇವೆಮಾಡುತ್ತ ನಿನ್ನ ಶೋಧವಾಗುವವರೆಗೆ ನಾನು ಅವಿವಾಹಿತಳಾಗಿಯೇ ಇರುತ್ತಿದ್ದೆನು; ಈಗಾದರೂ ಏನಾಯಿತು? ಎಲೈ ಸಾರ್ವಭೌಮ ಕುಮಾರೀ, ನನ್ನ ಪ್ರತಿಜ್ಞೆಯನ್ನು ಕೇಳು. ನಿನ್ನ ಗೊತ್ತುಹತ್ತುವವರೆಗೆ ಬ್ರಹ್ಮಚರ್ಯದಿಂದಪತಿಸೇವೆಯನ್ನು ಮಾಡುವೆನು; ಸುಖೋಪಭೋಗದ ಒಡವೆಗಳನ್ನು ಮುಟ್ಟೆನು; ಸುಖಸಲ್ಲಾಪಗಳನ್ನು ಆಡೆನು; ಐಶ್ವರ್ಯವನ್ನು ಕಣ್ಣೆತ್ತಿ ನೋಡೆನು. ಒಟ್ಟಿಗೆ, ವ್ರತಸ್ಥಳಾಗಿ ನಾನು ಉಳಿದಆಯುಷ್ಯವನ್ನು ಕಳೆಯುವೆನು, ಎಂದು ನುಡಿದು ಆಕೆಯು ದುಃಖದಿಂದ ಕಣ್ಣೀರು ಸುರಿಸಹತ್ತಿದಳು.

ಜೀವನಕಲಾ—ಕಮಲಾಕ್ಷರ ದುಃಖಕ್ಕೆ ಸಾಧಾರಣ ಕಾರಣವಾಗಿದ್ದ ಪದ್ಮನಯನೆಯು ಅವರಿಬ್ಬರ ಸಖ್ಯವನ್ನು ಮತ್ತಿಷ್ಟು ಬೆಳಿಸಲಿಕ್ಕೆ ಕಾರಣಳಾದಳು. ಪತ್ನಿಯ ವಿಷಯವಾಗಿ ದುಃಖಪಡುವ ಕಮಲಾಕ್ಷನ ದಯಾಲುತ್ವವನ್ನು ನೋಡಿ ಜೀವನಕಲೆಯೂ, ಸಖಿಯ ವಿಷಯವಾಗಿ ದುಃಖಪಡುತ್ತಿರುವ ಜೀವನಕಲೆಯ ಸರಳತನವನ್ನು ನೋಡಿ ಕಮಲಾಕ್ಷನೂ ಸಮಾಧಾನಪಟ್ಟು, ಇಬ್ಬರೂ ಪರಸ್ಪರರ ಸೌಜನ್ಯವನ್ನು ಶ್ಲಾಘಿಸತೊಡಗಿದರು. ಆ ಸತೀ-ಪತಿಗಳಲ್ಲಿ ಪರಸ್ಪರರ ವಿಷಯವಾಗಿ ದೃಢತರವಾದ ವಿಶ್ವಾಸವು ಉತ್ಪನ್ನವಾಯಿತು. ಕಮಲಾಕ್ಷನು ಜೀವನಕಲೆಯನ್ನು ಕುರಿತು—ಪ್ರಿಯತಮೇ, ಪದ್ಮನಯನೆಯ ಮೇಲಿನ ಪ್ರೇಮದಿಂದ ನೀನು ಮಾಡಿದ ಪ್ರತಿಜ್ಞೆಯನ್ನು ನಾನೂ ತಪ್ಪದೆ ಪಾಲಿಸುವೆನು. ಮಾತ್ಸರ್ಯರಹಿತರಾದ ನಿನ್ನಂಥ ಸ್ತ್ರೀಯರು ವಿರಲ! ನಾನು ಪದ್ಮನಯನೆಯ ಶೋಧಾರ್ಥವಾಗಿ ಹೊರಡುವೆನು. ಈ ಸಾರೆ ಆಕೆ

ಯ ಗೊತ್ತು ಹತ್ತದೆಯಿರುವದಿಲ್ಲೆಂದು ನನ್ನ ಮನೋದೇವತೆಯು ಹೇಳು ತ್ತದೆ. ಇನ್ನು ವಿಲಂಬಮಾಡುವದು ನನ್ನಿಂದಾಗದು. ನಾಳೆಗೇ ನಾನು ಹೊರಡತಕ್ಕವನು. ಇಗೋ, ಈ ಉಂಗರವು ನನ್ನ ನೆನಪಿಗಾಗಿ ನಿನ್ನ ಬೆರಳಿ ನಲ್ಲಿ ಇರಲಿ. ಈ ತೇಜೋಮಯವಾದ ಪದಕವನ್ನು ತೆಗೆದಿಡು; ಪದ್ಮನಯ ನೆಯು ಬಂದಳೆಂದರೆ, ಆಕೆಗೆ ಕಾಣಿಕೆಯಾಗಿ ಇದನ್ನು ಕೈಮುಟ್ಟಿ ನೀನೇ ಅರ್ಪಿ ಸುವೆಯಂತೆ. ಈ ಪದಕದ ಇತಿಹಾಸವನ್ನು ಹಿಂದಿನಿಂದ ಹೇಳುವೆನು. ಪದ್ಮ ನಯನೆಯ ಶೋಧದ ವಿಷಯವಾಗಿ ಉತ್ಸುಕನಾಗಿರುವ ನನ್ನ ಪ್ರಯಾಣಕ್ಕೆ ನೀನು ಅನುಕೂಲಿಸಬೇಕೆಂದು ಹೇಳಿಕೊಳ್ಳುವೆನು, ಅನ್ನಲು, ಜೀವನಕಲಿ ಯು—ಅಹಾ! ಸಖಿಯ ಶೋಧದ ಸಮ್ಮತಿಗಾಗಿ ತಾವುನನಗೆ ಹೇಳಿಕೊಳ್ಳ ಬೇಕೆ? ಸಹಾಯಕಳಾಗಿ ಹೊರಡೆಂದು ಆಜ್ಞಾಪಿಸುವ ಕೃಪೆಯನ್ನು ಮಾಡಬಾ ರದೇನು? ನಾನು ತಮ್ಮನ್ನು ಹಿಂಬಾಲಿಸಿ ಬರುವದಕ್ಕಿಂತ ಹೆಚ್ಚಿನ ಅನುಕೂಲ ವಿಲ್ಲವಷ್ಟೇ. ಅರ್ಧಾಂಗಿಯೆಂಬ ಪದವಿಗೆ ನನ್ನ ಪೂಜ್ಯಸಖಿಯು ಪಾತ್ರಳಿದ್ದ ರೂ, ನಾನು ಆ ಸಾರ್ವಭೌಮ ಕುವರಿಯ ದಾಸಿಯೂ ಅಲ್ಲವೇನು? ಈಗಲೇ ಹೊರಡತಕ್ಕದ್ದು. ನಾನು ಸಿದ್ಧಳಿದ್ದೇನೆ, ಮಿತ್ರಲಾಭಕ್ಕಿಂತ ಹೆಚ್ಚಿನ ಲಾಭವು ಅದಾವದಿರುವದು?

---

## ೧೫ ನೆಯ ಪ್ರಕರಣ

# ಸುಮತಿ.

---

ಜಗತ್ತಿನಲ್ಲಿ ಸರ್ವಸಮ್ಮತನಾದವನು ದೊರೆಯಲಾರನು. ಈಶ್ವರಾಂಶರೂ ಈಪದವಿಯನ್ನು ಹೊಂದಲಿಲ್ಲ. ಕಮಲಾಕ್ಷನು ಗುಣಪೂರ್ಣನಿದ್ದರೂ ಸರ್ವ ಸಮ್ಮತನಿದ್ದಿಲ್ಲ; ಬಹುಜನ ಸಮ್ಮತನಾಗಿದ್ದನೆಂದು ಮಾತ್ರ ಹೇಳಬಹುದು. ವೀರವರ್ಮಸಾರ್ವಭೌಮನ ತಮ್ಮನ ಮಗನಾದ ದುಷ್ಟಬುದ್ಧಿಯೆಂಬವನು ಕಮಲಾಕ್ಷನ ಗುಪ್ತಹಗೆಯಾಗಿದ್ದನು. ದುಷ್ಟಬುದ್ಧಿಯು ಶೂರನಿದ್ದರೂ, ಪರೋ ತ್ಕರ್ಷವನ್ನು ಸಹಿಸದವನೂ, ತಂತ್ರಗಾರನೂ ಆಗಿದ್ದನು. ಕಮಲಾಕ್ಷನ

ಮೇಲಿನ ವೀರವರ್ಮನ ಲೋಭಕ್ಕಾಗಿಯೂ, ಕಮಲಾಕ್ಷನ ಉತ್ಕರ್ಷಕ್ಕಾಗಿಯೂ, ಜೀವನಕಲಿಯ ಪಾಣಿಗ್ರಹಣಕ್ಕಾಗಿಯೂ ಅವನು ಹೊಟ್ಟೇಕಿಚ್ಚುಬಟ್ಟು ಉರುಳುತ್ತಿದ್ದನು. ದುಷ್ಟಬುದ್ಧಿಯು ಕನೋಜವ ಸಿಂಹಾಸನದ ಮೇಲೆ ಕಣ್ಣು ಇಟ್ಟಿದ್ದ ರಾಜದ್ರೋಹಿಗಳಲ್ಲಿ ಒಬ್ಬನು. ಆದರೆ ಕಮಲಾಕ್ಷನ ಮುಂದೆ ಅವನ ಆಟನೇನೂ ನಡೆಯುವಹಾಗೆ ಇಲ್ಲದ್ದರಿಂದ ಅವನು ಕಮಲಾಕ್ಷನ ನಾಶಕ್ಕಾಗಿ ಹೊಂಚುಹಾಕಿದ್ದನು. ಹೊರಗೆ ಕಮಲಾಕ್ಷನ ಪರಮಮಿತ್ರನಂತೆ ತೋರಿಸಿ, ಒಳಗೆ ಕಮಲಾಕ್ಷನ ಕುತ್ತಿಗೆ ಕೊಯ್ಯಲಿಕ್ಕೆ ಕುಳಿತಿದ್ದ ಆ ಅಧಮನು, ವೀರವರ್ಮನನ್ನಾದರೂ ಸಂಪೂರ್ಣವಾಗಿ ಮೋಸಗೊಳಿಸಿದ್ದನು. ಹೊಟ್ಟೆಯ ಮಕ್ಕಳು ಸಹ ತೋರಿಸಿದಷ್ಟು ಭಕ್ತಿ–ವಿಶ್ವಾಸಗಳನ್ನು ಆತನು ವೀರವರ್ಮನ ವಿಷಯವಾಗಿ ತೋರಿಸುತ್ತಿದ್ದನು. ಸ್ವಾರ್ಥಪರಾಯಣರ ಆಚರಣೆಯೇ ಹೀಗೆ ಇರುತ್ತದೆ. ಇವರು ಮಾತಿನಲ್ಲಿ ಸಕ್ಕರೆಯ ಚೀಲವನ್ನು ಉರುಳಿಸುವರು, ಕೃತಿಯಲ್ಲಿ ಅತ್ಯಾಸಕ್ತಿಯನ್ನು ತೋರಿಸುವರು, ಠಕ್ಕವಿನಯಕ್ಕಂತು ಅವರಲ್ಲಿ ಕೊರತೆಯಿರುವದಿಲ್ಲ. ಈ ಮೇಗಿನ ವಿಷಕಂಟಕರ ಅಂತರಂಗದೊಳಗಿನ ವಿಷವು ತಿಳಿಯದ್ದರಿಂದ ಅನರ್ಥಕ್ಕೆ ಗುರಿಯಾಗುವ ಪ್ರಸಂಗವು ಸರಳಸ್ವಭಾವದ, ಎಷ್ಟೋ ಜನರಿಗೆ ಬಂದಿರುತ್ತದೆ. ಆಪ್ರಸಂಗವು ಸದ್ಯಕ್ಕೆ ಕಮಲಾಕ್ಷನಿಗೂ, ವೀರವರ್ಮನಿಗೂ ಬಂದೊದಗಲಿಕ್ಕೆ ಹಾದಿಯನ್ನು ನೋಡುತ್ತಿತ್ತೆಂದು ಹೇಳಬಹುದು. ಕಮಲಾಕ್ಷನು ಕಾರ್ಯಾಂತರದಿಂದ ಅಲ್ಪ ಪರಿವಾರದೊಡನೆ ಪ್ರವಾಸಕ್ಕೆ ಹೊರಡುವನೆಂಬ ಸುದ್ದಿಯು ಪಟ್ಟಣದ ತುಂಬೆಲ್ಲ ಹಬ್ಬಿದ್ದರಿಂದ, ಅವನ ವಿಯೋಗಕ್ಕಾಗಿ ಜನರು ಮರುಗಹತ್ತಿದರು. ಈ ಪ್ರಸಂಗವನ್ನು ವ್ಯರ್ಥಕಳಕೊಳ್ಳಬಾರದೆಂದು ತಿಳಿದು ದುಷ್ಟಬುದ್ಧಿಯು, ತಾನು ಕಮಲಾಕ್ಷನ ಸಹಾಯಕನಾಗಿ ಹಿಂಬಾಲಿಸಿ ಹೋಗುವೆನೆಂದು ವೀರವರ್ಮನಿಗೆ ಹೇಳಿಕೊಂಡನು. ತನ್ನನ್ನು ಕರಕೊಂಡು ಹೋಗಬೇಕೆಂದು ಕಮಲಾಕ್ಷನನ್ನಾದರೂ ಆ ದುಷ್ಟನು ಪ್ರಾರ್ಥಿಸಿದನು. ದುಷ್ಟಬುದ್ಧಿಯ ಆದರವನ್ನೂ, ಉತ್ಸುಕತೆಯನ್ನೂ ನೋಡಿ ವೀರವರ್ಮನು ಕಮಲಾಕ್ಷನ ಸಹಾಯಕನಾಗಿ ಹೋಗಲಿಕ್ಕೆ ಆತನಿಗೆ ಅಪ್ಪಣೆಕೊಟ್ಟನು. ಕಮಲಾಕ್ಷನು ಆತನನ್ನು ಕರಕೊಂಡು ಹೋಗಲಿಕ್ಕೆ ಒಪ್ಪಿಕೊಂಡನು. ಇತ್ತ ದುಷ್ಟಬುದ್ಧಿಯು ಸಮಾಧಾನಪಟ್ಟು ತನ್ನ ಒಳಸಂಚು ನಡಿಸಿದನು.

ಸುಮುಹೂರ್ತವನ್ನು ನೋಡಿ ಕಮಲಾಕ್ಷನು ಪ್ರಯಾಣ ಬೆಳಸಿದನು. ಆದರೆ ಪದ್ಮನಯನೆಯ ಶೋಧಕ್ಕಾಗಿ ಹೊರಡುವನೆಂಬ ಸುದ್ದಿಯು ಯಾರಿಗೂ ಗೊತ್ತಾಗಲಿಲ್ಲ. ಜನರ ಯಾವತರದ ಕಲ್ಪನೆಗೂ ಆಸ್ಪದವು ದೊರೆಯಬಾರದೆಂದು ಕಮಲಾಕ್ಷನು ಜೀವನಕಲೆಗೆ ತಿಳಿಯಹೇಳಿ ಆಕೆಯನ್ನು ಬಿಟ್ಟು ಒಬ್ಬನೇ ಹೊರಟಿದ್ದನು. ಅತ್ತ ದುಷ್ಟಬುದ್ಧಿಯು ತನ್ನ ಸಂಗಡ ಯಾರನ್ನೂ ಕರಕೊಳ್ಳದೆ ಒಬ್ಬನೇ ಹೊರಟಿದ್ದನು. ಈ ಮೇರೆಗೆ ಕಮಲಾಕ್ಷನು ಪದ್ಮನಯನೆಯ ಶೋಧ ಮಾಡುವ ನಿರ್ಧಾರದಿಂದ ಹೊರಟು ಎಂಟು ದಿವಸ ಮಾರ್ಗವನ್ನು ಕ್ರಮಿಸಿ ಹೋಗಲು, ಒಂಬತ್ತನೆಯ ದಿವಸ ಸೂರ್ಯಾಸ್ತದ ಸಮಯದಲ್ಲಿ ಮಾರ್ಗದೊಳಗೆ, ಹತ್ತು ಹನ್ನೊಂದು ವರ್ಷದ ಒಬ್ಬ ಬ್ರಾಹ್ಮಣ ಬಾಲಿಕೆಯು ಕಣ್ಣೀರು ಸುರಿಸುತ್ತ ಕುಳಿತಿರುವದು ಅವನ ಕಣ್ಣಿಗೆ ಬಿತ್ತು. ಕಮಲಾಕ್ಷನು ಕೂಡಲೆ ತನ್ನ ಕುದುರೆಯನ್ನು ನಿಲ್ಲಿಸಿದನು. ಉಳಿದವರೂ ತಮ್ಮ ತಮ್ಮ ಕುದುರೆಗಳನ್ನು ನಿಲ್ಲಿಸಿದರು. ಇವರನ್ನು ನೋಡಿ ಆ ಬಾಲಿಕೆಯು ದೊಡ್ಡ ದನಿಯಿಂದ ಅಳಹತ್ತಿದಳು. ಕಮಲಾಕ್ಷನು ಕೂಡಲೆ ಕುದುರೆಯಿಂದ ಇಳಿದು ಆ ಹುಡುಗಿಯ ಬಳಿಗೆ ಹೋಗಿ—ತಂಗೀ, ನೀನು ಯಾರು? ಒಬ್ಬಳೇ ಇಲ್ಲಿ ಅಳುತ್ತ ಯಾಕೆ ಕುಳಿತುಕೊಂಡಿರುವೆ? ಬಿಡು, ಅಳಬೇಡ. ನಿನ್ನನ್ನು ಅಳಿಸಿದವರು ಯಾರು ಹೇಳು. ಅವರನ್ನು ಈಗಲೇ ಶಿಕ್ಷಿಸುತ್ತೇನೆ. ಅನ್ನಲು, ಆ ಹುಡುಗಿಯು — ಅಣ್ಣಾ, ನಾವು ರಾಮೇಶ್ವರದ ಯಾತ್ರೆಗೆ ಹೋಗುತ್ತಿದ್ದೆವು. ನನ್ನ ತಾಯಿ-ತಂದೆಗಳನ್ನೂ, ಬೇರೆ ಯಾತ್ರಿಕರನ್ನೂ ಕಳ್ಳರು ಆ ಹಳ್ಳದಲ್ಲಿ ಬಡಿದು ಸುಲಿದುಕೊಳ್ಳುತ್ತಿದ್ದಾರೆ. ನಾನು ಯಾರಿಗೂ ಕಾಣದಂತೆ ಇಲ್ಲಿ ತಪ್ಪಿಸಿಕೊಂಡು ಬಂದು ಕುಳಿತಿದ್ದೇನೆ, ಎಂದು ಹೇಳಿದಳು. ಕೂಡಲೆ ಕಮಲಾಕ್ಷನು ಒಬ್ಬ ಸರದಾರನನ್ನು ಆ ಹುಡುಗಿಯ ಬಳಿಯಲ್ಲಿ ಇರಿಸಿ, ಉಳಿದವರೊಡನೆ ಕ್ಷಣಮಾತ್ರದಲ್ಲಿ ಆ ಹಳ್ಳಕ್ಕೆ ಹೋದನು. ಕಳ್ಳರ ಗುಂಪು ಬಹು ದೊಡ್ಡದಿತ್ತು. ಅಂತೇ ಅವರು ನೂರಾರು ಜನ ಯಾತ್ರಿಕರನ್ನು ಸುಲಿಯಲು ಸಮರ್ಥರಾಗಿದ್ದರು. ಆಕಸ್ಮಾತ್ತಾಗಿ ಕುದುರೆಯ ಸವಾರರು ತಮ್ಮನ್ನು ಮುತ್ತಿದ್ದನ್ನು ನೋಡಿ ಕಳ್ಳರು ಬೆದರಿದರು. ಆದರೂ ಅವರು ಕೈಗೆಡದೆ ಕಮಲಾಕ್ಷನ ಪರಿವಾರದೊಡನೆ ಕಾದಲಿಕ್ಕೆ ಹಿಂದು ಮುಂದೆ ನೋಡಲಿಲ್ಲ. ಕಡೆಗೆ ಕಳ್ಳರು ಸೋತು ಕಮಲಾಕ್ಷನಿಗೆ ಶರಣುಬರಬೇಕಾಯಿತು. ಓಡಿಹೋ

ಗಲಿಕ್ಕೂ ಅವರಿಗೆ ಆಸ್ಪದವು ದೊರೆಯಲಿಲ್ಲ. ಕಮಲಾಕ್ಷನು ಕಳ್ಳರನ್ನೂ, ಯಾತ್ರಿಕರನ್ನೂ ಕೂಡಿಕೊಂಡು ನೆರೆಯಗ್ರಾಮಕ್ಕೆ ಹೋದನು. ಹಾದಿಯಲ್ಲಿ ಅಳುತ್ತ ಕುಳಿತಿದ್ದ ಹುಡುಗೆಯ ಮೇಲೆ ಕಮಲಾಕ್ಷನ ವಾತ್ಸಲ್ಯವು ವಿಶೇಷವಾಗಿ ಕುಳಿತಿತ್ತು. ಆತನು ಕಳ್ಳರನ್ನು ಗ್ರಾಮಾಧಿಕಾರಿಗಳಿಗೆ ಒಪ್ಪಿಸಿ, ಒಂದು ವಿಶಾಲವಾದ ಶಿವಾಲಯದಲ್ಲಿ ಯಾತ್ರಿಕರೊಡನೆ ಇಳಕೊಂಡನು.

ಕಮಲಾಕ್ಷನಿಂದ ತಮ್ಮ ವಿತ್ತ-ಜೀವಿತಗಳ ರಕ್ಷಣವಾದದ್ದನ್ನು ನೋಡಿ ಯಾತ್ರಿಕರೆಲ್ಲರು ಮನಃಪೂರ್ವಕವಾಗಿ ಆತನ ಕಲ್ಯಾಣವನ್ನು ಚಿಂತಿಸಿದರು. ಕಮಲಾಕ್ಷನು ತನಗೆ ಮಾರ್ಗದಲ್ಲಿ ಭೆಟ್ಟಿಯಾದ ಬ್ರಾಹ್ಮಣ ಬಾಲಿಕೆಯನ್ನು ಕರೆದು ಹತ್ತರ ಕುಳ್ಳಿರಿಸಿಕೊಂಡನು. ಬಾಲಿಕೆಯು ಸುಂದರಳಿದ್ದಳು. ಅವಳ ಮುಖವು ಗಂಭೀರವಾಗಿದ್ದು, ಕಣ್ಣುಗಳು ತೇಜಃಪುಂಜವಾಗಿದ್ದವು. ಆಕೆಯ ಮೈಬಣ್ಣ ನಸುಗೆಂಪು, ಮೈಕಟ್ಟು ಹವಣಿಯದು, ನಿಲುವಿಕೆಯು ಮೈಮಾಟಕ್ಕೆ ಒಪ್ಪುವಂಥಾದ್ದು, ಸ್ವಭಾವ ಸರಳ. ಆಕೆಯನ್ನು ನೋಡಿ ಕಮಲಾಕ್ಷನು ಕೌತುಕದಿಂದ—ತಂಗೀ, ನಿನ್ನ ಹೆಸರೇನಪ್ಪಾ? ನಿನ್ನ ತಾಯಿತಂದೆಗಳ ಭೆಟ್ಟಿಯನ್ನು ಮಾಡಿಸುವೆಯಾ, ಎಂದು ಕೇಳಲು, ಆ ಹುಡುಗೆಯು ವಿನಯದಿಂದ—ಭಾಗ್ಯವಂತನೇ, ನನ್ನ ಹೆಸರು ಯಮುನೆಯು; ನಿಲ್ಲು, ಇದೇ ಈಗ ಅಪ್ಪನನ್ನೂ, ಅವ್ವನನ್ನೂ ಕರಕೊಂಡು ಬರುತ್ತೇನೆ, ಎಂದು ಹೇಳಿ ಚಟ್ಟನೆ ಎದ್ದು ಹೋದಳು. ಸ್ವಲ್ಪ ಹೊತ್ತಿನಲ್ಲಿ ಆಕೆಯು ಸುಮಾರು ಎಪ್ಪತ್ತು ವರ್ಷದ ವಯಸ್ಸುಳ್ಳ ತೇಜಃಪುಂಜನಾದ ಒಬ್ಬ ಬ್ರಾಹ್ಮಣನನ್ನೂ, ಅರ್ಧಮುರ್ಧ ನೆರೆಗೂದಲುಳ್ಳ ಒಬ್ಬ ಸಾಧ್ವಿಯನ್ನೂ ಕರಕೊಂಡು ಕಮಲಾಕ್ಷನ ಬಳಿಗೆ ಬಂದಳು. ಆ ತೇಜೋಮೂರ್ತಿಗಳನ್ನು ನೋಡಿ ಕಮಲಾಕ್ಷನು ಭಕ್ತಿಯಿಂದ ನಮಿಸಿದನು. ಆಗಲಾ ಭೂಸುರೋತ್ತಮನು—"ಆಯುಷ್ಮಂತನೇ, ವಿಜಯಿಯಾಗು"ಎಂದು ಆಶೀರ್ವದಿಸಿ, ಕಮಲಾಕ್ಷನನ್ನು ವಾತ್ಸಲ್ಯದಿಂದ ಹಿಡಿದೆತ್ತಲು, ಆ ಸಾಧ್ವಿಯು ಬಾಷ್ಪಪೂರಿತ ಲೋಚನೆಯಾಗಿ—ಅಪ್ಪಾ, ಆಯುಷ್ಮಂತನಾಗು, ನಿನ್ನ ವಂಶವು ಹಬ್ಬಲಿ, ಅಖಂಡವಾದ ಐಶ್ವರ್ಯವು ನಿನ್ನನ್ನು ಹೊಂದಲಿ, ಎಂದು ಹರಸಿದಳು. ಗಾಂಭೀರ್ಯ-ಪರಾಕ್ರಮಗಳಿಂದ ಸಿಂಹನಂತೆ ಒಪ್ಪುತ್ತಿದ್ದ ಕಮಲಾಕ್ಷನನ್ನು ನೋಡಿ ಆ ಬ್ರಾಹ್ಮಣದಂಪತಿಗಳಿಗೆ ಬಹಳ ಸಂತೋಷವಾಯಿತು. ಕಮಲಾಕ್ಷನು ತನ್ನನ್ನು ಕೌತುಕದಿಂದ ನೋಡುತ್ತ ನಿಂತಿರುವ ಆ ಹುಡುಗೆಯನ್ನು ಕುರಿತು—ತಂಗೀ,

ಕುಳಿತುಕೊಳ್ಳುವುದಕ್ಕೆ, ನಿಂತುಕೊಂಡೆಯೇಕೆ? ಎಂದು ಮರ್ಯಾದೆಯಿಂದ ಹೇಳಲು. ಆ ಬ್ರಾಹ್ಮಣನು ಕಮಲಾಕ್ಷನನ್ನು ಕುರಿತು—ನಮ್ಮ ಕುಟುಂಬದೊಡೆಯ ಲಗ್ನವು ಇಷ್ಟು ಹೊತ್ತಿಗೆ ಆಗಬೇಕಾಗಿತ್ತು. ಆದರೆ ನಮ್ಮ ದುರ್ದೈವವು ಆಗಗೊಡಲಿಲ್ಲ. ಆಕೆಗೆ ಹತ್ತುವರ್ಷ ತುಂಬುತ್ತ ಬಂದವು, ಹೇಗೂ ನೀವು ಆಕೆಯ ಪ್ರಾಣವನ್ನು ಉಳಿಸಿರುತ್ತೀರಿ. ಪ್ರಾಣವನ್ನು ರಕ್ಷಿಸಿದವನು ತಂದೆಗೆ ಸಮಾನನು. ಯೋಗ್ಯವರನನ್ನು ನೋಡಿ ಆಕೆಯ ಲಗ್ನವನ್ನಿಷ್ಟು ಮಾಡಿ ಪುಣ್ಯ ಕಟ್ಟಿಕೊಳ್ಳಿರಿ. ನಿಮ್ಮ ರಾಜಚಿಹ್ನಗಳನ್ನೂ, ಪ್ರತಾಪವನ್ನೂ ನೋಡಿ ನನ್ನ ಕನ್ಯೆಯನ್ನು ನಿಮ್ಮ ಉಡಿಯಲ್ಲಿ ಹಾಕಿರುತ್ತೇನೆ. ಇನ್ನು ಆಕೆಯ ಲಗ್ನವನ್ನು ಬಿಡುವಂತೆ ಇಲ್ಲ. ತಿರುಗಿ ನಮ್ಮ ಮಾಳವ ರಾಜ್ಯಕ್ಕೆ ಹೋಗುವತನಕ ಲಗ್ನ ಬಿಡುವದು ಅಯೋಗ್ಯವು,ಎಂದು ಹೇಳಿದನು.

ಮಾಳವದ ಹೆಸರನ್ನು ಕೇಳಿದ ಕೂಡಲೆ ಕಮಲಾಕ್ಷನ ಮನಸ್ಸು ಚಂಚಲವಾಯಿತು. ಅವನು ಬ್ರಾಹ್ಮಣನನ್ನು ಕುರಿತು —ಪೂಜ್ಯರೇ, ನಿಮ್ಮ ಅಪ್ಪಣೆಯು ನನಗೆ ಮಾನ್ಯವದೆ. ಬ್ರಾಹ್ಮಣರ ಸೇವೆಯೇ ಈಶ್ವರಸೇವೆಯು. ಅಗತ್ಯವಾಗಿ ನಿಮ್ಮ ಮಗಳ ಲಗ್ನವನ್ನು ಮಾಡುವೆನು, ಚಿಂತೆಬಿಡಿರಿ; ಆದರೆ ಮಾಳವರಾಜ್ಯದಲ್ಲಿ ನೀವು ಯಾವ ಊರವರು? ಇಲ್ಲಿಗೆ ಬಂದ ಕಾರಣವೇನು? ಇದನ್ನು ದಯಮಾಡಿ ಹೇಳಬೇಕು. ಅನ್ನಲು, ಬ್ರಾಹ್ಮಣನು ನಿಟ್ಟುಸಿರು ಬಿಟ್ಟು ನುಡಿದನೇನಂದರೆ —''ಪುಣ್ಯವಂತನೇ, ನೀನು ಪರರ ಸಂಕಟಗಳನ್ನು ನಿವಾರಣಮಾಡುವವನಾದದ್ದರಿಂದ, ದೇವರು ನಿನ್ನ ಸಂಕಟಗಳನ್ನು ನಿಶ್ಚಯವಾಗಿ ನಿವಾರಣ ಮಾಡುವನು. ನಮ್ಮ ಸಂಗತಿಯನ್ನು ಹೇಳಬೇಕಾದರೆ ಲಜ್ಜೆಯು ಉತ್ಪನ್ನವಾಗಿ ದುಃಖವು ಒತ್ತರಿಸುತ್ತದೆ. ಆದರೂ ನಿರ್ವಾಹವಿಲ್ಲ. ನಿನ್ನ ಮುಂದೆ ಅವಶ್ಯವಾಗಿ ಹೇಳತಕ್ಕದ್ದು. ಸ್ವಲ್ಪದರಲ್ಲಿ ಹೇಳುತ್ತೇನೆ ಕೇಳು—ನಾನು ಉಜ್ಜಯಿನೀ ಪಟ್ಟಣದ ಸುಲೋಚನರಾಜನ ಕುಲಪುರೋಹಿತನಾದ ಸುಶರ್ಮನು. ನಾನು ರಾಮೇಶ್ವರದ ಯಾತ್ರೆಗೆ ಹೋಗಬೇಕೆಂದು ಯೋಚಿಸಿ, ರಾಜಾಶ್ರಯವನ್ನು ಹೊಂದಿ ಹೆಂಡತಿಯನ್ನೂ, ಮಗಳನ್ನೂ ಕೂಡಿಕೊಂಡು ಹೊರಟೆನು. ನಮ್ಮೊಡೆಯನಾದ ಸುಲೋಚನನು ಎಲ್ಲ ಅನುಕೂಲತೆಗಳನ್ನು ಮಾಡಿಕೊಟ್ಟು, ನಮ್ಮ ಸಂರಕ್ಷಣಕ್ಕಾಗಿ ಇಪ್ಪತ್ತೈದು ಜನ ರಾವುತರನ್ನು ಕೊಟ್ಟನು. ನಾವು ಮಾರ್ಗಕ್ರಮಣ ಮಾಡುತ್ತಿರಲು, ದುರ್ದೈವದಿಂದ ಹಾದಿಯತಪ್ಪಿ ಅಡವೀ

ಬಿಟ್ಟೆವು. ಹಲವು ರೀತಿಯಿಂದ ಕಷ್ಟಬಡುತ್ತ, ಅರಣ್ಯದಲ್ಲಿ ಮುಂದಕ್ಕೆ ಸಾಗುತ್ತಿರಲು, ಕಾಡು ಜನರದೊಂದು ಗುಂಪು ದೂರ ಇರುವಾಗಲೇ ನಮಗೆ ಕಂಡಿತು. ಮುಂದೆ ಸ್ವಲ್ಪ ವೇಳೆಯಲ್ಲಿ ಆ ನೀಚರು ಹತ್ತರ ಬರಲು, ಅವರ ಉಗ್ರರೂಪಗಳನ್ನು ನೋಡಿ, ನಮ್ಮ ಕೈಕಾಲುಗಳೇ ಹೋದವು. ಭಯದಿಂದ ನಾವು ನಡುಗಹತ್ತಿದೆವು. ನಮ್ಮ ರಾವುತರಿಗೂ, ಆ ಕಾಡು ಜನರಿಗೂ ಯುದ್ಧವಾಗಿ, ಯುದ್ಧದಲ್ಲಿ ನಮ್ಮ ರಾವುತರೆಲ್ಲರೂ ಮಡಿದು ಹೋದರು. ಆ ಕಾಡು ಜನರು ನಮ್ಮ ಸಂಪತ್ತನ್ನೆಲ್ಲ ಸುಲಕೊಂಡು ಹೋದರು. ಅನಾಥರಾದ ನಾವು ಅಡವಡವಿ ತಿರುಗುತ್ತಿರಲು, ರಾಮೇಶ್ವರಕ್ಕೆ ಹೋಗುವ ಯಾತ್ರಿಕರ ಈ ದೊಡ್ಡ ಗುಂಪು ಭೆಟ್ಟಿಯಾಯಿತು. ಅವರಲ್ಲಿ ನಾವೂ ಬೆರೆತು ಮಾರ್ಗವ ಕ್ರಮಿಸುತ್ತಿರುವಾಗ ಸುಲಿಗೆಗಾರರ ಕೈಯಲ್ಲಿ ಸಿಗಲು, ನೀನು ಬಿಡಿಸಿ ಪುಣ್ಯ ಕಟ್ಟಿಕೊಂಡೆ. ರಾಮೇಶ್ವರದಲ್ಲಿಯೇ ಯಶೋದೆಯ ಲಗ್ನ ಮಾಡಬೇಕೆಂದು ಮಾಡಿದ್ದೆವು. ಇನ್ನು ಏನಾಗುತ್ತದೋ ತಿಳಿಯದು! ಸುಲೋಚನಸಾರ್ವಭೌಮನ ಆಶ್ರಯದಲ್ಲಿ ಸುಖದಿಂದಿದ್ದ ನಮ್ಮ ಪಡಿಪಾಟಲನ್ನು ವರ್ಣಿಸಲಾರೆನು, ನಾವು ಈ ರೀತಿಯಿಂದ ದುಃಖದಲ್ಲಿರಲು, ನಮ್ಮ ಅರಸನಾದ ಸುಲೋಚನನು ಕಮಲಾಕ್ಷನೆಂಬ ಪುತ್ರನನ್ನಗಲಿ ದಿನದಿನಕ್ಕೆ ಕೃಶವಾಗುತ್ತಿರುವನು. ಆ ಕಮಲಾಕ್ಷನು ಎಲ್ಲಿ ಹೋದನೆಂಬದು ಈ ವರೆಗೂ ಗೊತ್ತಾಗಲಿಲ್ಲ! ಆ ದುಃಖದ ಸಂಗತಿಯನ್ನು ನಾನು ಹೇಳಲಾರೆನು. ಉಪಾಯವಿಲ್ಲ, ಈಶಸಂಕಲ್ಪವಿದ್ದಂತೆ ಆಗುವದು. ಅದನ್ನು ತಪ್ಪಿಸಲಿಕ್ಕೆ ಯಾರೂ ಸಮರ್ಥರಲ್ಲ. ಯಶೋದೆಯ ಪುಣ್ಯದಿಂದ ನಿನ್ನ ದರ್ಶನವಾದದ್ದಕ್ಕಾಗಿ, ನಮಗೆ ಬಹಳ ಸಂತೋಷವಾಗಿದೆ.

ಈ ಪ್ರಕಾರ ಬ್ರಾಹ್ಮಣನು ಆಡಿದ ಮಾತುಗಳನ್ನು ಕೇಳಿ ಕಮಲಾಕ್ಷನು ಮನಸ್ಸಿನಲ್ಲಿ—“ ಅಹಾ! ದುರ್ದೈವಿಯಾದ ಕಮಲಾಕ್ಷನ ದುಃಖವು ಹೆಚ್ಚುತ್ತ ಹೋಗುವದಲ್ಲ! ನಮ್ಮ ಕುಲಪುರೋಹಿತನಾದ ಸುಶರ್ಮನಿಗೆ ಇಂಥಪ್ರಸಂಗವು ಒದಗಬೇಕೆ? ವೃದ್ಧನಾದ ತಂದೆಗೆ ದುಃಖಕೊಟ್ಟು ನಾನು ಜೀವದಿಂದಿರುವದು ಯೋಗ್ಯವೆ? ನನ್ನ ಕೃತಘ್ನತೆಗೆ ಧಿಕ್ಕಾರ ವಿರಲಿ, ನನ್ನ ಬಾಳುವೆಯನ್ನು ಸುಡಲಿ. ನನ್ನ ಮಿತ್ರನಾದ ಸುಮತಿಯಾದರೂ ಈಗ ಇರುತ್ತಿದ್ದರೆ, ಎಷ್ಟು ಹಿತವಾಗುತ್ತಿತ್ತು! ರೂಪ-ಗುಣ ಸಂಪನ್ನೆಯಾದ ಈ ಯಶೋದೆಯು ಅವನನ್ನು ಲಗ್ನವಾಗಿ ಧನ್ಯಳಾಗುತ್ತಿದ್ದಳು! ಪರಮೇಶ್ವರಾ, ನಿನ್ನ ಇಚ್ಛೆಗೆ

ಬಂದಂತಾಗಲಿ, ಎಂದು ಬ್ರಾಹ್ಮಣನನ್ನು ಕುರಿತು—ವಿಪ್ರೋತ್ತಮರೇ, ನಿಮ್ಮ ವೃತ್ತಾಂತವನ್ನು ಕೇಳಿ ನನಗೆ ಬಹಳ ದುಃಖವಾಗಿದೆ. ಇಲ್ಲಿಯುವರೆಗೆ ನನ್ನ ನಿಜವಾದ ವೃತ್ತಾಂತವನ್ನು ಪದ್ಮನಯನಾ-ಜೀವನಕಲಿಯರ ಹೊರತು ಯಾರಿಗೂ ಹೇಳದಿದ್ದರೂ, ಕುಲುಗುರುಗಳಾದ ತಮ್ಮ ಮುಂದೆ ಅದನ್ನು ಹೇಳುವೆನು, ಕೇಳುವ ಕೃಪೆಮಾಡಬೇಕು, ಎಂದು ನುಡಿದು, ತಾನು ತಂದೆಯ ಸೆರೆಯಿಂದ ತಪ್ಪಿಸಿಕೊಂಡು ಹೋಗಿ, ಪದ್ಮನಯನೆಯನ್ನು ಲಗ್ನವಾಗಿ, ಆಕೆಯನ್ನು ಅಗಲಿ, ವೀರವರ್ಮನ ಆಶ್ರಯಕ್ಕೆ ಬಂದು, ಜೀವನಕಲಿಯ ಲಗ್ನವಾದ ಮೇಲೆ ಮತ್ತೆ ಪದ್ಮನಯನೆಯ ಶೋಧಕ್ಕೆ ಹೊರಟ ಸಂಗತಿಯನ್ನು ಸಾದ್ಯಂತವಾಗಿ ಹೇಳಿದನು.

ತಮ್ಮನ್ನು ಬಂಧಮುಕ್ತರಾಗ ಮಾಡಿದ ಪುಣ್ಯವಂತನು ತನ್ನ ಯಜಮಾನನಾದ ಸುಲೋಚನ ರಾಜನ ಮಗ ಕಮಲಾಕ್ಷನಿರುವನೆಂಬದನ್ನು ತಿಳಿದು, ಸುಶರ್ಮನು ಸಾನಂದಾಶ್ಚರ್ಯವುಳ್ಳವನಾದನು. ಕಮಲಾಕ್ಷನು ಉಜ್ಜಯನಿಯುಲ್ಲಿರುವಾಗ್ಗೆ ಪ್ರಾಯದಲ್ಲ ತಂದೆಯ ಅವಕೃಪೆಗೆ ಪಾತ್ರನಾಗಿ ಸೆರೆಮನೆಯಲ್ಲಿದ್ದರಿಂದ, ಆವನು ಈ ಪರಿ ಶೂರನಿದ್ದನ್ನು ವ್ಯಕ್ತವಾಗಿದ್ದಿಲ್ಲ. ಸುಶರ್ಮನು ಕಮಲಾಕ್ಷನನ್ನು ಕುರಿತು — “ ಪ್ರತಾಪಶಾಲಿಯಾದ ಕಮಲಾಕ್ಷನೇ, ನಿನ್ನ ಅದ್ಭುತವಾದ ಚರಿತ್ರವನ್ನು ಕೇಳಿ ಸೋಜಿಗಗೊಂಡೆನಲ್ಲದೆ ನಿನ್ನ ಅಗಾಧವಾದ ಶೌರ್ಯಕ್ಕಾಗಿ ನನಗೆ ಪರಮ ಹರ್ಷವಾಗಿದೆ. ಆದರೆ ನಿನ್ನ ಈ ಪ್ರತಾಪವನ್ನು ನಿನ್ನ ತಂದೆಯಾದ ಸುಲೋಚನನು ನೋಡಿ ಧನ್ಯನಾಗದಿರುದದು ಅನ್ಯಾಯವುನ್ನ. ನೀನು ಉಜ್ಜಯನಿಯನ್ನು ಬಿಟ್ಟು ಈವೊತ್ತಿಗೆ ಆರುವರ್ಷವಾದುದರಿಂದ ನಿನ್ನ ಪರಿಚಯವು ನನಗೆ ಹತ್ತಲಿಲ್ಲ. ಪ್ರಾಯದಲ್ಲಿ ಮನುಷ್ಯನ ಲಕ್ಷಣ ಹೇಗು ಬದಲಾಗುತ್ತವೆಂಬದು ಸುಳ್ಳಲ್ಲ. ನೀನು ಇದೇ ರೀತಿಯಿಂದ ಅಭಿವೃದ್ಧಿಯನ್ನು ಹೊಂದು; ಮತ್ತು ನಿನ್ನನ್ನಗಲಿದ ಪದ್ಮನಯನೆಯು ಪುನಃ ನಿನಗೆ ಪ್ರಾಪ್ತಳಾಗಿ, ನೀನು ಅವಳನ್ನೂ, ಜೀವನಕಲಿಯನ್ನೂ ಕೂಡಿಕೊಂಡು, “ನೀನು ವಿವಾಹ ಮಾಡಿಕೊಳ್ಳಲಿಲ್ಲೆ”ಂಬ ಚಿಂತೆಯಿಂದ ಮುಪ್ಪಾಗಿರುವ ಸುಲೋಚನರಾಜನನ್ನು ಕಂಡು ಆತನನ್ನು ಸಂತೋಷಗೊಳಿಸು. ಇನ್ನು ಮೇಲೆ ಮಾತ್ರ ನಿನ್ನ ತಂದೆಯನ್ನು ಕಾಣುವದಕ್ಕೆ ವಿಲಂಬ ಮಾಡಬೇಡ. ಯಾಕಂದರೆ, ಆತನು ನಿನ್ನ ವಿಯೋಗ ದುಃಖದಿಂದ ದಿನದಿನಕ್ಕೆ ಕೃಶವಾಗುತ್ತ ನಡೆದಿರುವನು.

ಗೋ—ಬ್ರಾಹ್ಮಣರ ರಕ್ಷಣ ಮಾಡತಕ್ಕದ್ದು ಕ್ಷತ್ರಿಯರ, ವಿಶೇಷವಾಗಿ ನಿಮ್ಮ ವಂಶದವರ ಧರ್ಮವಿರುವದರಿಂದ, ಈವೊತ್ತು ನಮ್ಮ ಬಂಧ ವಿಮೋಚನೆಮಾಡಿದ್ದು ನಿನ್ನ ಕರ್ತವ್ಯವಾಗಿದ್ದರೂ, ಅದುದುರ್ಘಟಪ್ರಸಂಗವಿದ್ದದ್ದರಿಂದ ಅವನ್ನು ದೂರಮಾಡಿದ ನಿನ್ನ ಉಪಕಾರವನ್ನು ನಾನು ಮರೆಯಲಾರೆನು. "ಅನ್ನಲು, ಕಮಲಾಕ್ಷನು ಕಣ್ಣುಗಳಲ್ಲಿ ನೀರುತಂದು ನುಡಿದನೇನಂದರೆ—"ಪೂಜ್ಯರೇ, ಚಾಂಡಾಲನಾದ ನನ್ನನ್ನು ನೆನಸಿ ತಂದೆಯು ಕೃಶನಾಗುತ್ತಿರುವನೆ! ನನ್ನ ನೀಚತನವನ್ನು ಎಷ್ಟು ವರ್ಣಿಸಿದರೂ ಸ್ವಲ್ಪವೇ ಇರುವದು, ಉಪಾಯವಿಲ್ಲ. ನನಗೆ ಒಂದಕ್ಕಿಂತಲೂ ಒಂದು ದುರ್ಘಟ ಪ್ರಸಂಗಳು ಬಂದದ್ದರಿಂದ ತಂದೆಯ ದರ್ಶನಕ್ಕೆ ಇಲ್ಲಿಯವರೆಗೆ ವಿಲಂಬವಾಯಿತು. ಇನ್ನು ಬೇಗನೆ ತಂದೆಯ ಚರಣನನ್ನು ಕಾಣುವೆನು. ಈಗ ನನ್ನಿಂದಾದ ಅಪರಾಧಕ್ಕಾಗಿ ತಾವು ಅಸಮಾಧಾನ ಪಡದೆ, ನನ್ನನ್ನು ಕ್ಷಮಿಸಿರಿ. ನಿಮ್ಮ ಆಶೀರ್ವಾದವಿದ್ದರಾಯಿತು; ಇದಕ್ಕಿಂತ ಹೆಚ್ಚಿನ ಕಠಿಣ ಪ್ರಸಂಗಗಳನ್ನು ನೀಗುವೆನು. ತಮ್ಮ ಶ್ಲಾಘನೆಗೆ ನಾನು ತಕ್ಕವನಲ್ಲ.

ಕಮಲಾಕ್ಷನ ವಿನಯ ವಚನಗಳಿಂದ ಸುಶರ್ಮನ ಅಂತಃಕರಣವು ಪ್ರಸನ್ನವಾಯಿತು; ಆದರೆ ಆ ವಚನಗಳ ಶ್ರವಣದಿಂದ ದುಷ್ಟಬುದ್ಧಿಯ ಹೊಟ್ಟೆಯಲ್ಲಿ ಸಾಸಿವೆ ಅರೆದಂತೆ ಆಯಿತು. ಅವನು ಮನದಲ್ಲಿ— "ಕಮಲಾಕ್ಷನು ಪದ್ಮನಯನೆಯ ಪತಿಯೆಂಬದು ವೀರವರ್ಮನಿಗೆ ತಿಳಿದರೆ, ಅವನು ನನ್ನನ್ನು ನಿಶ್ಚಯವಾಗಿ ನಿರಾಕರಿಸುವನು. ಏನಿಲ್ಲದೆ ಕಮಲಾಕ್ಷನ ಮೇಲೆ ಕುಳಿತಿದ್ದ ವೀರವರ್ಮನ ಪ್ರೇಮವು, ಇವನ ನಿಜವಾದ ವೃತ್ತಾಂತಶ್ರವಣದಿಂದ ವೃದ್ಧಿಂಗತವಾಗಿ, ಅದು ಕಡೆಗೆ ಇವನನ್ನು ವೀರವರ್ಮನ ಹಿಂದೆ ಅರಸನಾಗಮಾಡಬಹುದು. ನನಗೆ ಇದು ಸಾಧಾರಣವಾದ ಅವಮಾನವೇ? ಯಾವದೊಂದು ಯುಕ್ತಿಯಿಂದ ಕಮಲಾಕ್ಷನನ್ನು ನಾಶ ಮಾಡಿದ ಹೊರತು ಈ ಅಪಮಾನದ ನಿವಾರಣವಾಗುವಂತೆ ಇಲ್ಲ. ಈ ಕೆಲಸನಲ್ಲಿ ನನ್ನ ಪ್ರಾಣಹಾನಿಯಾದರೂ ಚಿಂತೆಯಿಲ್ಲ. ಕಮಲಾಕ್ಷನ ಸಂಹಾರವನ್ನು ಮಾಡದೆ ಬಿಡಬಾರದು." ಎಂದು ಯೋಚಿಸಿ ಹೊತ್ತು ಕಾಯಹತ್ತಿದನು; ಆದರೆ ಸರಳ ಮನಸ್ಸಿನವನಾದ ಕಮಲಾಕ್ಷನಿಗೆ ಈ ಮೋಸವು ತಿಳಿಯದೆ, ಅವನು ದುಷ್ಟಬುದ್ಧಿಯ ಸಂಗಡ ಮೊದಲಿನಂತೆ ನಂಬಿಗೆ ಇಟ್ಟು ನಡೆಯುತ್ತಿದ್ದನು. ಕಮಲಾಕ್ಷನು ಯಾತ್ರಿಕರನ್ನೆಲ್ಲ ಕಳಿಸಿ, ತಾಯಿತಂದೆಗಳೊಡನೆ ಕೂಡಿರುವ ಯಶೋದೆಯನ್ನೊಡಗೊಂಡು ಸಾಗಿದನು. ದುರ್ಜನರಿಗೆ ಶಿಷ್ಟ

ನನು ಸಹ ದುರ್ಜನರಂತೆ ತೋರುವದರಿಂದ, ದುರ್ಜನನಾದ ದುಷ್ಟಬುದ್ಧಿಗೆ ನಿರ್ಮಲಾಂತಃಕರಣವವನೂ, ಶಿಷ್ಟಾನುಪ್ರೀತಿಯುವನೂ, ಧರ್ಮತತ್ಪರನೂ ಆದ ಕಮಲಾಕ್ಷನು ಸಹ ದುರ್ಜನನಾಗಿಯೇ ತೋರಿದನು. ಪಾಪಮಲಿನರೂ, ದುರಭಿಮಾನಿಗಳೂ ಆದ ಜನರು ತಮ್ಮ ಕೃತಿಯು ಅನುಚಿತವೆಂದು ತಿಳಿದಾಗೂ, ತಮ್ಮ ದುರ್ವ್ಯಾಪಾರಗಳನ್ನು ನಡಿಸದೆ ಬಿಡುವದಿಲ್ಲ. ಆದರಿಂದಲೇ ಅವರಿಗೆ ದುರ್ಜನರೆಂಬ ಬಿರುದು ಪ್ರಾಪ್ತವಾಗಿರುತ್ತದೆ. ದುಷ್ಟಬುದ್ಧಿಯ ಸ್ಥಿತಿಯಾದರೂ ಹೀಗೆಯೇ ಆಯಿತು. ಅವನ ಮನಸು ಕಮಲಾಕ್ಷನ ಮೇಲಣ ಅಸೂಯೆಯಿಂದ ಹೆಚ್ಚು ಹೆಚ್ಚು ಅಸಮಾಧಾನ ಹೊಂದಿ, ಅವನು ಕಮಲಾಕ್ಷನ ನಾಶದ ಯುಕ್ತಿಯನ್ನು ಯೋಚಿಸಹತ್ತಿದನು.

ಕಮಲಾಕ್ಷನು ತನ್ನ ಪರಿವಾರದೊಡನೆ ಮಾರ್ಗಕ್ರಮಣಮಾಡುತ್ತ, ವಿಂಧ್ಯಾದ್ರಿಯ ನೆರೆಯಲ್ಲಿರುವ ಸುವರ್ಣಪುರವೆಂಬ ಹಳ್ಳಿಗೆ ಬರಲು, ಸೂರ್ಯನು ಅಸ್ತಂಗತನಾದನು. ಅವರೆಲ್ಲರು ಊರಹೊರಗಿರುವ ಮಾರುತಿಯ ದೇವಾಲಯದಲ್ಲಿಯೂ, ಅದರ ನೆರೆಯಲ್ಲಿರುವ ಮಾವಿನ ತೋಪಿನಲ್ಲಿಯೂ ಇಳಕೊಂಡರು. ಆ ಸ್ಥಳವು ಬಹು ರಮ್ಯವಾಗಿತ್ತು. ದುಷ್ಟಬುದ್ಧಿಯು ಆ ದಿನ ವಿಶ್ರಾಂತಿಯನ್ನು ಹೊಂದಲಿಚ್ಛಿಸಿದ್ದರಿಂದ ಕಮಲಾಕ್ಷನು ಪಯಣವನ್ನು ನಿಲ್ಲಿಸಬೇಕಾಯಿತು. ಈ ಸಂಧಿಯನ್ನು ಸಾಧಿಸಿ ದುಷ್ಟಬುದ್ಧಿಯು ತನ್ನ ದುರಾಲೋಚನೆಯನ್ನು ಕೊನೆಗಾಣಿಸುವವನ್ನು ನಿಶ್ಚಯಿಸಿದನು. ಒಂದುದಿನ ಏಳುತಾಸು ರಾತ್ರಿಯಾಗಿದೆ, ಕಗ್ಗತ್ತಲು ಮುಸುಕಿದೆ, ಎಲ್ಲರೂ ನಿದ್ರಾಪರವಶರಾಗಿದ್ದಾರೆ, ಶಾಂತಿಯ ಸಾಮ್ರಾಜ್ಯವು ಪ್ರಸ್ಥಾಪಿತವಾದದ್ದರಿಂದ ಪ್ರಾಣಿಮಾತ್ರಗಳ ಸುಖದ ಮಾನವು ಹೆಚ್ಚಾಗಿದೆ; ಅಷ್ಟರಲ್ಲಿ ಒಂದು ಸಾಂಕೇತಿಕ ಧ್ವನಿಯು ಆಗಲು, ದುಷ್ಟಬುದ್ಧಿಯು ನಿದ್ರಾಪರವಶನಾದ ಕಮಲಾಕ್ಷನ ಎದೆಯಮೇಲೆ ಕುಳಿತು ಕಠಾರಿಯಿಂದ ಅವನನ್ನು ಇರಿಯಹತ್ತಿದನು. ಅತ್ತ ನಿದ್ದೆಮಾಡುತ್ತಿದ್ದ ಕಮಲಾಕ್ಷನ ಅಲ್ಪಸೈನ್ಯವನ್ನು ಒಂದು ದೊಡ್ಡಸೈನ್ಯವು ಮುತ್ತಿ ಸ್ವಲ್ಪ ವೇಳೆಯಲ್ಲಿ ಅದನ್ನು ಸಂಪೂರ್ಣವಾಗಿ ನಾಶಗೊಳಿಸಿತು. ದುಷ್ಟಬುದ್ಧಿಯು ಹಲವು ಇರಿತಗಳಿಂದ ಕಮಲಾಕ್ಷನನ್ನು ಇರಿದು, ಸತ್ತನೆಂದು ತಿಳಿದು ಅವಸರದಿಂದ ಹೊರಟುಹೋದನು. ಇಷ್ಟು ಜನರ ಪ್ರಾಣಹಾನಿಯು ಸದ್ದಿಲ್ಲದೆ ಆದದ್ದರಿಂದ ಗರ್ಭಾಗಾರದಲ್ಲಿ ಮಲಗಿದ್ದ ಸುಶರ್ಮನಿಗೂ, ಅವನ ಹೆಂಡತಿಗೂ ಎಚ್ಚರವೇ

ಆಗಿದ್ದಿಲ್ಲ. ದುಷ್ಟಬುದ್ಧಿಯು ಕಮಲಾಕ್ಷನ ಕೊಲೆಮಾಡಲುದ್ಯೋಗಿಸುವ ಮೊದಲು, ಗರ್ಭಾಗಾರದ ಹೊರಗಿನ ಚಿಲಕವನ್ನು ಹಾಕಿಕೊಂಡಿದ್ದನು. ಮುಂದೆ ಕೆಲವು ಹೊತ್ತಿನಮೇಲೆ ಸುಶರ್ಮನು ಹೊರಗೆ ಬರುವದಕ್ಕಾಗಿ ಬಾಗಿಲು ತೆರೆಯಲು, ಅದು ಬರಲಿಲ್ಲ. ಆ ವೃದ್ಧಬ್ರಾಹ್ಮಣನು ಕಮಲಾಕ್ಷನನ್ನೂ, ದುಷ್ಟಬುದ್ಧಿಯನ್ನೂ ಒದರಿ ಒದರಿ ಬೇಸತ್ತನು. ಅವನ ಗದ್ದಲಕ್ಕೆ ಅವನ ಹೆಂಡತಿಯೂ, ಮಗಳೂ ಎಚ್ಚತ್ತರು. ಆ ಮೂವರೂ ಎದ್ದು ಕುಳಿತು ಹೀಗೆ ಯಾಕಾಗಿರಬಹುದೆಂಬದನ್ನು ಆಲೋಚಿಸತೊಡಗಿದರು. ಅವರ ಮನಸ್ಸಿನಲ್ಲಿ ತರತರದ ದುಷ್ಟಕಲ್ಪನೆಗಳು ಬರಲು, ಆ ಮೂವರೂ ಕೂಡಿ ಗದ್ದಲಮಾಡಿದರು. ಆ ಗದ್ದಲಕ್ಕೆ ನೆರೆಯ ಜನರು ಎದ್ದು ಬಂದು ದೀಪಹಚ್ಚಿ ನೋಡುತ್ತಾರೆ- ಗಾಯಪಟ್ಟು ಮರಣೋನ್ಮುಖನಾದ ಒಬ್ಬ ಮನುಷ್ಯನು ಬಿದ್ದಿದ್ದಾನೆ, ಗುಡಿಯೊಳಗೆ ಮೂವರು ಆಕ್ರೋಶ ಮಾಡತೊಡಗಿದ್ದಾರೆ. ಇದನ್ನು ನೋಡಿ ನೆರೆಯವರು ಹೆದರಿ ಈ ಸಂಗತಿಯನ್ನು ಗ್ರಾಮಾಧಿಕಾರಿಗೆ ತಿಳಿಸಿದರು. ಗುಡಿಯಲ್ಲಿ ಜನರ ಗದ್ದಲವು ನೆರೆಯಿತು. ಗರ್ಭಾಗಾರದ ಚಿಲಕವನ್ನು ತೆಗೆದದ್ದರಿಂದ ಸುಶರ್ಮನೂ ಮೀನಾಕ್ಷಿಯೂ ಬಂದು ಕಮಲಾಕ್ಷನ ಬಳಿಯಲ್ಲಿ ಕುಳಿತುಕೊಂಡರು. ಯಶೋದೆಯು ದೊಡ್ಡದನಿಯಿಂದ ಅಳತೊಡಗಿದಳು.

ಗ್ರಾಮಾಧಿಕಾರಿಯು ಕಮಲಾಕ್ಷನ ಕೊಲೆಯಬಗ್ಗೆ ವಿಚಾರಮಾಡಿದನು; ಏನೂ ಗೊತ್ತಾಗಲಿಲ್ಲ. ಕಮಲಾಕ್ಷನ ದುಸ್ಥಿತಿಯನ್ನು ನೋಡುತ್ತಿದ್ದ ಸುಶರ್ಮ—ಮೀನಾಕ್ಷಿಯರು ದುಃಖದಿಂದ ಮೈಮರೆತರು. ಯಶೋದೆಯು ಹೌಹಾರಿ ಕುಳಿತಳು. ಹೊರಗಿನಿಂದ ಚಿಲಕಹಾಕಿದ್ದರಿಂದ ಒಳಗಿನವರು ಈ ಘೋರಕೃತ್ಯದಲ್ಲಿ ಸೇರಿದ್ದರ ಸಂಶಯವು ಯಾರಿಗೂ ಬರಲಿಲ್ಲ. ಅತ್ತ ಮಾವಿನತೋಪಿನಲ್ಲಿ ಇಳಕೊಂಡಿದ್ದ ಸೈನಿಕರೆಲ್ಲ ಮರಣಹೊಂದಿ ಬಿದ್ದಿರುವದನ್ನು ನೋಡಿ ಜನರು ಭಯಗ್ರಸ್ತರಾಗಿದ್ದರು. ಅವರು ಇದೇನೋ ದ್ವೇಷಮೂಲಕವಾಗಿ ದೊಡ್ಡ ಮೋಸವಾಗಿದೆಯೆಂದು ಭಾವಿಸಿದರು. ಮೃತಪ್ರಾಯವಾಗಿ ಬಿದ್ದಿರುವ ಕಮಲಾಕ್ಷನ ಶರೀರವನ್ನು ನೋಡಿ, ನೆರೆದವರೆಲ್ಲರೂ ಮರಮರನೆ ಮರುಗಿದರು. ಕಮಲಾಕ್ಷನು ಅತಿ ಸಾವಕಾಶವಾಗಿ ಉಸುರಾಡಿಸುತ್ತಿದ್ದನು. ಅದನ್ನು ಕಂಡು ಕೆಲವರು ಓಡಿ ಹೋಗಿ ಆ ಊರಲ್ಲಿ ಧರ್ಮಾರ್ಥವಾಗಿ ಔಷಧಕೊಡುತ್ತಿದ್ದ ಒಬ್ಬ ಬ್ರಾಹ್ಮಣನನ್ನು ಕರೆತಂದರು. ಅವನ ವಯಸ್ಸು ಇಪ್ಪತ್ತು—

ಇಪ್ಪತ್ತೈದು ವರ್ಷಗಳಿಗಿಂತ ಹೆಚ್ಚಿದ್ದಿಲ್ಲ; ಅವನಿಗೆ ಅದೇ ಮೀಸೆಗಳು ಬರತೊಡಗಿದ್ದವು; ಅವನು ಕೌಪೀನವನ್ನು ಹಾಕಿ ಕಫನಿಯನ್ನು ತೊಟ್ಟಿದ್ದನು; ಅವನ ಮುಖದಲ್ಲಿ ಬ್ರಹ್ಮತೇಜಸ್ಸು ಉಕ್ಕುತ್ತಿತ್ತು. ಈ ಮಹಾತಪಸ್ವಿಯನ್ನು ನೋಡಿ ಸುಶರ್ಮನು ಬೆರಗಾದನು. ಆ ತರುಣ ಬ್ರಾಹ್ಮಣನು ಸುಶರ್ಮ-ಮೀನಾಕ್ಷಿಯರನ್ನು ನೋಡಿದ ಕೂಡಲೆ ಬಹು ವಿನಯದಿಂದ ನಮಸ್ಕಾರಮಾಡಿದನು. ಮಂಗಲಸ್ವರೂಪರಾದ ಈ ವೃದ್ಧದಂಪತಿಗಳ ದುಃಖಕ್ಕೆ ನಿಶ್ಚೇಷ್ಟಿತನಾಗಿ ಬಿದ್ದಿರುವ ಈ ಮನುಷ್ಯನೇ ಕಾರಣನೆಂದು ತಿಳಿದು, ಕನಿಕರಪಟ್ಟು ಹತ್ತರ ಹೋಗಿ ಅವನ ಸರ್ವಾಂಗವನ್ನು ದಿಟ್ಟಿಸಿ ನೋಡಕತ್ತಿದನು. ಆಗ ಅವನಿಗೆ ಆ ಮನುಷ್ಯನ ಮುಸಮುಸಕಾದ ಗುರುತು ಹತ್ತಿದಂತೆ ಆಗುತ್ತಿತ್ತು. ಕೆಲವು ಹೊತ್ತಿನ ಮೇಲೆ ಆ ಬ್ರಾಹ್ಮಣನ ನೇತ್ರಗಳಿಂದ ಅಶ್ರುಗಳು ಸುರಿಯಹತ್ತಿದವು. ಅವನು ಮೇಲೆ ಮೇಲೆ ಕಮಲಾಕ್ಷನ ಮೈ ಮೇಲೆ ಕೈಯಾಡಿಸುವನು. ಅವನ ಗುಣಾಗಳನ್ನೂ, ಮಿತ್ರಾಭಿಮಾನವನ್ನೂ, ನೆನಿಸಿ ನೆನಿಸಿ ದೊಡ್ಡದನಿಯಿಂದ ಅಳಹತ್ತಿದನು. ಅವನು ದೀನಸ್ವರದಿಂದ—“ಮಿತ್ರಾ, ಕಮಲಾಕ್ಷಾ, ನಿನ್ನ ಅವಸ್ಥೆಯು ಏನಾಯಿತು? ಈ ಸ್ಥಿತಿಯಲ್ಲಿ ನಿನ್ನನ್ನು ನೋಡುವ ನನಗೆ ಎಷ್ಟು ದುಃಖವಾಗಿರಬಹುದೆಂಬದನ್ನು ನಾನೇ ಬಲ್ಲೆನು. ನಿನ್ನನ್ನು ಹುಡುಕುತ್ತ ದೇಶದೇಶಗಳನ್ನು ತಿರುಗಹತ್ತಿದ್ದೇನೆ. ಪದ್ಮನಯನೆಯ ಶೋಧಕ್ಕಾಗಿ ನಾವಿಬ್ಬರೂ ಹೊರಟಿರಲು, ನೀನು ಹೀಗೆ ನಡುವೆ ಪರಲೋಕವನ್ನು ಕುರಿತು ತೆರಳುವದು ಯಾವ ನ್ಯಾಯವು? ಇದು ನಿನ್ನ ಮಿತ್ರತ್ವದ ಲಕ್ಷಣವಲ್ಲ. ನನ್ನನ್ನು ಕಣ್ದೆರೆದು ನೋಡು. ನಿನ್ನ ಪ್ರಿಯಪದ್ಮನಯನೆಯ ಮಿತ್ರನಾದ ಸುಮತಿಯು ಬಂದಿದ್ದೇನೆ. ನನ್ನ ನಿನ್ನ ಗೆಳೆತನವು ಅಲ್ಪಕಾಲದ್ದಾದರೂ, ಕಲಂಕವಿಲ್ಲದ್ದಿರುತ್ತದೆ.”



## ೧೬ನೆಯ ಪ್ರಕರಣ.

# ಪ್ರಾಣಪ್ರತಿಷ್ಠಾಪನೆ.



ಈ ಪ್ರಕಾರ ಸುಮತಿಯು ವ್ಯಸನಬಡುತ್ತಿರಲು, ನೆರೆವವರೆಲ್ಲರೂ ಆಶ್ಚರ್ಯಪಟ್ಟರು. ಮಿತ್ರನ ಮೊರೆ ಕೇಳಿ ಎಚ್ಚತ್ತವನಂತೆ, ಕಮಲಾಕ್ಷನು ಸ್ವಲ್ಪ

ಮಿಸುಕಾಡಹತ್ತಿದನು. ದುಷ್ಟಬುದ್ಧಿಯ ಶಸ್ತ್ರ-ಪ್ರಹಾರಗಳಿಂದ ಅವನ ಪ್ರಾಣವು ಹೋಗಿದ್ದಿಲ್ಲ; ಮಿತಿಮೀರಿದ ವ್ಯಥೆಯ ಮೂಲಕ ಅವನ ಮೈ ಮೇಲಿನ ಎಚ್ಚರವು ಮಾತ್ರ ತಪ್ಪಿತ್ತು; ಅವನಿಗೆ ಬಲವಾದ ಗಾಯಗಳು ಬಹಳ ಆಗಿದ್ದವು. ಆಗ ಸುಮತಿಯು ತನ್ನ ಕಮಂಡಲೂದಕದಿಂದ ಕಮಲಾಕ್ಷನ ಶರೀರಕ್ಕೆ ಹತ್ತಿದ್ದ ರಕ್ತವನ್ನು, ವಿಶೇಷವಾಗಿ ಮುಖಕ್ಕೆ ಹತ್ತಿದ್ದ ರಕ್ತವನ್ನು ಚನ್ನಾಗಿ ತೊಳೆದನು. ಸುಮತಿಯು ವನಸ್ಪತಿಗಳ ಸಾಮರ್ಥ್ಯವನ್ನು ಬಲ್ಲವನಾದ ಕಾರಣ, ಗಾಯಗಳಿಗೆ ಕೆಲವು ಔಷಧಿಗಳನ್ನು ಅರೆದು ಹಚ್ಚಿದನು. ರಕ್ತದ ಬಿಗತವು ಕಡಿಮೆಯಾದದ್ದರಿಂದಲೂ, ವನಸ್ಪತಿಗಳ ಸಾಮರ್ಥ್ಯದಿಂದ ಗಾಯಗಳ ನೋವು ಕೆಲವಂಶ ಕಡಿಮೆಯಾದಂತಾದ್ದರಿಂದಲೂ ಕಮಲಾಕ್ಷನು ಕಣ್ದೆರೆದು ಸುತ್ತುಮುತ್ತು ನೋಡಹತ್ತಿದನು. ಅವನ್ನು ನೋಡಿ ಎಲ್ಲರಿಗೂ ಸಮಾಧಾನವಾಗಿ, ಸುಮತಿಯ ಪ್ರಾರ್ಥನೆಯಂತೆ ನೆರೆದವರೆಲ್ಲರೂ ಗಾಳಿಯಾಡಲಿಕ್ಕೆ ಆಸ್ಪದವಾಗಬೇಕೆಂದು ಕಮಲಾಕ್ಷನನ್ನು ಬಿಟ್ಟು ಹಿಂದಕ್ಕೆ ಸರಿದು ದೂರ ನಿಂತರು. ಕಮಲಾಕ್ಷನಿಗೆ ಇನ್ನೂ ಚನ್ನಾಗಿ ಎಚ್ಚರ ಹುಟ್ಟಿದ್ದಿಲ್ಲ. ಸುಮತಿಯು ಅವನಿಗೆ ಗಾಳಿಹಾಕಿ ನೆತ್ತಿಗೆ ನೀರು ತಟ್ಟಿದನು. ಆಗ ಕಮಲಾಕ್ಷನು ಸ್ವಲ್ಪ ಎಚ್ಚತ್ತು ಸುಮತಿಯನ್ನು ದಿಟ್ಟಿಸಿ ನೋಡಹತ್ತಿದನು. ಸುಮತಿಯು ವಿರಕ್ತನಾಗಿ ರೂಪಾಂತರ ಹೊಂದಿದ್ದರಿಂದ ಕಮಲಾಕ್ಷನಿಗೆ ಅವನ ಗುರುತು ಹತ್ತಲಿಲ್ಲ. ಧಷ್ಟಪುಷ್ಟವಾಗಿದ್ದ ಸುಮತಿಯ ಶರೀರವು, ಮಿತ್ರವಿಯೋಗ ದುಃಖದಿಂದ ಕೃಶವಾಗಿತ್ತು; ಅವನ ಗೌರಕಾಯವು ಶೀತೋಷ್ಣಗಳ ಬಾಧೆಯಿಂದ ಕೃಷ್ಣವರ್ಣವನ್ನು ಹೊಂದಿತ್ತು. ಸುಮತಿಯು ಕಮಲಾಕ್ಷನನ್ನು ಕುರಿತು ಸಮಾಧಾನದಿಂದ-"ಮಿತ್ರಾ, ಈಗ ಮಾತ್ರ ನನಗೆ ಸಮಾಧಾನವಾಯಿತು. ಇನ್ನು ಮೇಲೆ ನಿನಗೆ ಅಪಾಯವಾಗುವ ಭಯವಿಲ್ಲ. ಹೇಗಾದರೂ ಮಾಡಿ ನಿನ್ನನ್ನು ನೆಟ್ಟಗೆ ಮಾಡುತ್ತೇನೆ. ಗುರುವಿನ ಕೃಪೆಯೊಂದಿದ್ದರಾಯಿತು. ಆದರೆ ಇದುವರೆಗೆ ನಾನು ಸುಮತಿ ಎಂಬದು ನಿನಗೆ ತಿಳಿಯದೆ ಇದ್ದದ್ದೇ ಬಹಳ ಆಶ್ಚರ್ಯವು." ಎಂದು ಹೇಳಿದನು. ಕಮಲಾಕ್ಷನ ಮಿತ್ರವಾತ್ಸಲ್ಯವು ಎಷ್ಟು ಬಲವಾದದ್ದೋ ತಿಳಿಯದು. ಸುಮತಿಯೆಂಬ ಶಬ್ದವು ಕಿವಿಗೆ ಬಿದ್ದ ಕೂಡಲೆ, ತನ್ನಲ್ಲಿ ಮೇಲಕ್ಕೆ ಏಳುವಷ್ಟು ಸಾಮರ್ಥ್ಯವು ಇರದಿದ್ದರೂ, ಅವನು ಆವೇಶದಿಂದ ಮೇಲಕ್ಕೆ ಎದ್ದು, ಸುಮತಿಯ ಮೈ ಮೇಲೆ ಬಿದ್ದನು. ಆಗ್ಗೆ ಅವನಿಗೆ ಮಾತಾಡುವಷ್ಟು ಅವಸಾನವು

ಇಲ್ಲದ್ದರಿಂದ, ಅವನ ಕಣ್ಣುಗಳೊಳಗಿಂದ ಒಂದೇ ಸವನೆ ನೀರು ಮಾತ್ರ ಹೋಗಹತ್ತಿದವು. ಈ ಎಲ್ಲ ಸಂಗತಿಯನ್ನು ನೋಡಿ ಸುಶರ್ಮ—ಮೀನಾಕ್ಷಿಯುರಿಗೆ ಆದ ಆನಂದವನ್ನು ವರ್ಣಿಸಲಾಸಲ್ಲ. ತನ್ನ ಮಿತ್ರನಾದ ಸುಮತಿಯೆಂಬ ಒಬ್ಬ ಬ್ರಾಹ್ಮಣನು ಇದ್ದನೆಂದು ಕಮಲಾಕ್ಷನು ಈ ಮೊದಲೇ ಅವರ ಮುಂದೆ ಹೇಳಿದ್ದನಲ್ಲದೆ, ಅವನು ಇದ್ದರೆ ಅವನೊಡನೆ ಯಶೋದೆಯ ವಿವಾಹ ಮಾಡುತ್ತಿದ್ದೆನೆಂದು ಸಹ ಹೇಳಿದ್ದನು. ಆದರಿಂದ ಪ್ರಾಯಸ್ಥನೂ, ತೇಜಸ್ವಿಯೂ, ಚಲುವನೂ ಆದ ಸುಮತಿಯನ್ನು ನೋಡಿ, ಆ ವೃದ್ಧ ದಂಪತಿಗಳಿಗೆ ಪರಮಾನಂದವಾಯಿತು. ಆ ಮೇಲೆ ಸುಮತಿಯು ಸುಶರ್ಮನ ಮುಖದಿಂದ ಕಮಲಾಕ್ಷನ ಎಲ್ಲ ವೃತ್ತಾಂತವನ್ನು ಸ್ವಲ್ಪದರಲ್ಲಿ ಕೇಳಿಕೊಂಡು, ವ್ಯಸನಬಟ್ಟು, ನೆರೆದವರ ಸಹಾಯದಿಂದ ಕಮಲಾಕ್ಷನನ್ನು ಆ ಊರೊಳಗಿರುವ ಒಂದು ಪ್ರಶಸ್ತವಾದ ಮನೆಯಲ್ಲಿರಿಸಿ, ಸುಶರ್ಮ, ಮೀನಾಕ್ಷಿಯರೊಡನೆ ಅವನ ಆರೈಕೆ ಮಾಡಹತ್ತಿದನು.

ಇತ್ತ ದುಷ್ಟಬುದ್ಧಿಯು ಕಮಲಾಕ್ಷನು ಮರಣಹೊಂದಿದನೆಂದು ತಿಳಿದು ದೇವಾಲಯದಿಂದ ಹೊರಟುಹೋದ್ದನ್ನು ಹಿಂದೆ ಹೇಳಿದೆ. ಅವನು ಕೆಲವು ಅಂತರವನ್ನು ಕ್ರಮಿಸಿದ ಬಳಿಕ, ಕಮಲಾಕ್ಷನ ಸೈನ್ಯವನ್ನು ಸಂಹರಿಸಿದ ದೊಡ್ಡ ಸೈನ್ಯವು ದುಷ್ಟಬುದ್ಧಿಯನ್ನು ಕೂಡಿಕೊಂಡಿತು. ದುಷ್ಟಬುದ್ಧಿಯ ಒಳಸಂಚಿನಿಂದಲೇ ಆ ಸೈನ್ಯವು ಕಮಲಾಕ್ಷನ ಸೈನ್ಯವನ್ನು ಸಂಹರಿಸಿತ್ತು. ದುಷ್ಟಬುದ್ಧಿಯು ಆ ಸೈನ್ಯವನ್ನು ಕೂಡಿಕೊಂಡು ಕನೋಜ ಪಟ್ಟಣಕ್ಕೆ ಹೊರಟು, ಸಾಂಕೇತಿಕ ಸ್ಥಳದಲ್ಲಿ ಅದನ್ನು ಬಿಟ್ಟು ಒಬ್ಬನೇ ವೀರವರ್ಮನಿಗೆ ಬೆಟ್ಟಿಯಾದನು. ಆ ವೃದ್ಧ ಸಾರ್ವಭೌಮನು ಕಮಲಾಕ್ಷನಿಲ್ಲದೆ ದುಷ್ಟಬುದ್ಧಿಯೊಬ್ಬನೇ ಬಂದದ್ದನ್ನು ನೋಡಿ ಅಸಮಾಧಾನಪಟ್ಟು—"ತಮ್ಮಾ, ಕಮಲಾಕ್ಷನೆಲ್ಲಿ?" ಎಂದುಕೇಳಿದನು. ಅದಕ್ಕೆ ದುಷ್ಟಬುದ್ಧಿಯು—ಪ್ರಭುವೇ, ಕಮಲಾಕ್ಷನು ನನ್ನನ್ನು ಮೋಸಗೊಳಿಸಿ ತನ್ನ ಸೈನ್ಯದೊಡನೆ ಎಲ್ಲಿಯೋ ಹೋದನು. ಪ್ರಭುಗಳ ಚರಣಗಳಲ್ಲಿ ಅವನ ವಿಶ್ವಾಸವಿದ್ದಂತೆ ತೋರುವದಿಲ್ಲ. ಅವನು ಮಹಾ ಕಪಟಿಯು, ಮಹತ್ವಾಕಾಂಕ್ಷಿಯು; ಪ್ರಭುಗಳು ಅವನ ವರ್ಚಸ್ಸನ್ನು ಅಬಾಧಿತವಾಗಿ ಬೆಳೆಯಗೊಟ್ಟದ್ದರಿಂದ ಅವನು ಬಲಿಷ್ಠನಾಗಿರುವನು. ಅವನು ತಮ್ಮ ಸಿಂಹಾಸನಕ್ಕೆ ಕೇಡುಬಗೆಯದೆ ಇರನು. ನನ್ನನ್ನು ಮೋಸಗೊಳಿಸಿದವನು ಪ್ರಭುಗ

ಳನ್ನು ಪೋಸಗೋಳಿಸಲಿಕ್ಕಿಲ್ಲೆಂದು ಹೇಗೆ ಹೇಳಬೇಕು? ಎಂದು ದೇವದತ್ತ ಮಂತ್ರಿಯ ಸಮಕ್ಷ ಕಮಲಾಕ್ಷನನ್ನು ಹಳಿದನು. ದುಷ್ಟಬುದ್ಧಿಯ ಅಸೂಯದ ಭಾಷಣಗಳನ್ನು ಕೇಳಿ ಅರಸನಿಗೆ ಸಮಾಧಾನವಾಗಲಿಲ್ಲ. ಕಮಲಾಕ್ಷನ ಬಾಹುಬಲದ ಯೋಗದಿಂದಲೇ ಆವನಿಗೆ ಸ್ವಚಕ್ರ—ಪರಚಕ್ರಗಳ ಬಾಧೆಯು ತಪ್ಪಿತ್ತು. ದೇವದತ್ತನಿಗಂತು, ತನ್ನ ಅಳಿಯನಾದ ಕಮಲಾಕ್ಷನ ಅವಸ್ಥೆಯುಏನಾಯಿತೋ, ಈ ದುಷ್ಟನೇನಾದರೂ ಅವನಿಗೆ ಕೇಡುಬಗೆದನೋ, ಆವನನ್ನು ತಿರುಗಿ ಕಾಣುವೆನೋ ಇಲ್ಲವೋ ಎಂಬ ಬಗ್ಗೆ ಮಿತಿಮೀರಿ ದುಃಖವಾಯಿತು. ಅಷ್ಟರಲ್ಲಿ ಆಕಸ್ಮಿಕವಾಗಿ ಪಾಂಡ್ಯದೇಶದ ರಾಜಧಾನಿಯಾದ ಮಧುರೆಯಿಂದ ಒಬ್ಬ ದೂತನು ಬಂದು, ತನ್ನ ಒಡೆಯನಾದ ಸಿಂಹಕೇತುರಾಜನು ಕೊಟ್ಟಿದ್ದ ಪತ್ರವನ್ನು ವೀರವರ್ಮನ ಸನ್ನಿಧಿಯಲ್ಲಿರಿಸಿದನು. ಅದರಲ್ಲಿ ಸಿಂಹಕೇತುವು—"ನನ್ನ ರಾಜಧಾನಿಯಾದ ಮಧುರೆಯಲ್ಲಿ, ನಿಮ್ಮ ಪುತ್ರಿಯೂ, ನನ್ನ ತಂಗಿಯೂ ಆದ ಪದ್ಮನಯನಾದೇವಿಯು ವಿಕ್ರಮಾರ್ಕನೆಂಬ ಮಗನೊಡನೆ ಸುಖದಿಂದಿರುವಳೆಂ"ದು ಬರೆದಿದ್ದನು. ಅದನ್ನು ಕೇಳಿ ವೀರವರ್ಮನೇ ಮೊದಲಾದವರಿಗೆ ಸಾನಂದಾಶ್ಚರ್ಯವಾಯಿತು. ವಿವಾಹವಾಗದೆ ಕನೋಜಪಟ್ಟಣದಿಂದ ಹೋಗಿದ್ದ ಪದ್ಮನಯನೆಯು, ಪುತ್ರವತಿಯಾಗಿ ಮಧುರೆಯಲ್ಲಿದ್ದದಕ್ಕಾಗಿ ಬೇರೆಬೇರೆ ಜನರ ತರ್ಕಗಳು ಬೇರೆಬೇರೆ ಆದವು. ವೀರವರ್ಮನು ಆನಂದದ ಭರದಿಂದ ತಾನೇ ತನ್ನ ಪುತ್ರಿಯನ್ನು ಕರತರುವೆನೆಂದು ಮಧುರೆಗೆ ಹೊರಡಲುದ್ಯೋಗಿಸಿದನು. ದೇವದತ್ತನು ಆತನನ್ನು ಕುರಿತು—"ಪ್ರಭುಗಳೇ, ಸೇವಕನಾದ ನಾನು ಸ್ವಲ್ಪದಿವಸಗಳಲ್ಲಿ ಪದ್ಮನಯನಾದೇವಿಯನ್ನು ಕರತರುತ್ತೇನೆ, ನನಗೆ ಅಪ್ಪಣೆ ದೊರೆಯಬೇಕು. ಸೇವಕನಿರಲು, ತಾವುಹೊರಡುವದೇಕೆ? ಎಂದು ನುಡಿಯಲು, ಅರಸನು ಒಡಂಬಟ್ಟು ದೇವದತ್ತನಿಗೆ ಮಧುರೆಗೆ ಹೋಗುವದಕ್ಕಾಗಿ ಅಪ್ಪಣೆಕೊಟ್ಟನು.

ದೇವದತ್ತನು ಅರಸನ ಅಪ್ಪಣೆಯನ್ನು ಹೊಂದಿ ತನ್ನ ಮನೆಗೆ ಹೋಗಿ, ಅಸಮಾಧಾನದಿಂದ ಜೀವನಕಲೆಗೆ ಕಮಲಾಕ್ಷನ ಸಂಬಂಧದ ಯಾವತ್ತೂ ಸಂಗತಿಯನ್ನೂ, ಪದ್ಮನಯನೆಯ ವೃತ್ತಾಂತವನ್ನೂ, ಅರಸನ ಅಪ್ಪಣೆಯನ್ನೂ ತಿಳಿಸಲು, ಅವಳು ತನ್ನ ತಂದೆಯನ್ನು ಕುರಿತು—"ಅಪ್ಪಾ, ದುಷ್ಟನಾದ ಆ ದುಷ್ಟಬುದ್ಧಿಯ ಮಾತುಗಳ ಮೇಲಿಂದ ವಿಚಾರಮಾಡಿ ನೋಡಿದರೆ,

ಆವನಿಂದ ನನ್ನ ಪತಿಗೆ ಏನೋ ಅಪಾಯವು ಸಂಭವಿಸಿದಂತೆ ತೋರುತ್ತದೆ. ನನ್ನ ಪ್ರಾಣದೊಡೆಯರಾದ ಕಮಲಾಕ್ಷಪ್ರಭುಗಳೇ ನನ್ನ ಬಾಲಸಖಿಯಾದ ಪದ್ಮನಯನೆಯ ಪತಿಯೆಂಬದು ನನ್ನ ಹೊರತು ಇಲ್ಲಿಯವರೆಗೆ ಯಾರಿಗೂ ಗೊತ್ತಿಲ್ಲ. ಇನ್ನು ಗೊತ್ತಾಗಿಯಾದರೂ ಮಾಡುವದೇನು? ಸುಮ್ಮನೆ ಜನರ ಮನಸ್ಸು ಮಾತ್ರ ಅಸಮಾಧಾನವಾಗುವದು. ನಾನು ಯಾವ ಆಧಾರದಿಂದ ಪತಿಯ ಮಾರ್ಗಪ್ರತೀಕ್ಷೆಯನ್ನು ಮಾಡುತ್ತ ಕುಳಿತುಕೊಳ್ಳಲಿ? ಪತಿಯನ್ನ ಗಲಿದ ಸ್ತ್ರೀಯ ಜನ್ಮವು ವ್ಯರ್ಥವಲ್ಲವೇ? ನನ್ನ ಬಾಲಮಿತ್ರಳೂ, ಸುಖದುಃಖ ಗಳ ಪಾಲುಗಾರಳೂ ಆದ ಪದ್ಮನಯನೆಯ ಅನುಮತಿಯಂತೆ ನಾನು ನಡೆಯ ಬೇಕಾಗಿರುವದರಿಂದ, ನಾನೂ ನಿನ್ನ ಸಂಗಡ ಮಧುರೆಗೆ ಬರುತ್ತೇನೆ. ಇದರಿಂದ ನಾನು ಪದ್ಮನಯನೆಗೆ ಒಂದು ಬಗೆಯಾಗಿ ಮಾನಕೊಟ್ಟಂತೆ ಆಗಿ, ಆಕೆಯು ನನಗೆ ಪ್ರಸನ್ನಳಾಗಬಹುದು." ಅನ್ನಲು, ಪುತ್ರಿಯಲ್ಲಿ ಹೇರಳವಾದ ವಾತ್ಸ ಲ್ಯವುಳ್ಳ ದೇವದತ್ತನು ಆಕೆಯ ಮಾತಿಗೆ ಒಡಂಬಟ್ಟು, ಅವಳನ್ನೊಡಗೊಂಡು ಸೈನ್ಯದೊಡನೆ ಮಧುರೆಗೆ ಹೊರಟನು.

ಪ್ರಯಾಣಸ್ಥನಾದ ದೇವದತ್ತನು ಮಾರ್ಗಕ್ರಮಣಮಾಡುತ್ತಿರಲು, ವೃದ್ಧಾ ಪ್ಯದ ಮೂಲಕವಾಗಿ ಅವನಿಗೆ ಮಾರ್ಗಾಯಾಸವೂ, ಭಿನ್ನವಾದ ಹವೆಯೂತಡೆ ಯದ್ದರಿಂದಜ್ವರೋಪದ್ರವವೂಆಗಿ ಅವನು ನಡುದಾರಿಯಲ್ಲಿಯೇ ಮರಣಹೊಂದಿ ದನು. ಆಗ ಜೀವನಕಲಿಗಾದ ದುಃಖವನ್ನು ಹೇಳಲಾಸಲ್ಲ. ಪ್ರಾಯಸ್ಥಳಾದ ಆ ಅಬಲೆಯನ್ನು ಆವಳ ತಂದೆಯು ನಡುವೆ ಕೈಬಿಟ್ಟು ಹೋದದ್ದರಿಂದ, ನೀರಬಿಟ್ಟಮರಿಮೀನದಂತೆ ಆ ವನಿತೆಯು ಬಹಳತಳಮಳಿಸಹತ್ತಿದಳು. ಆದರೂ ಆ ಚದುರೆಯು ನಡುಹಾದಿಯಲ್ಲಿ ಸುಮ್ಮನೆ ದುಃಖಿಸುತ್ತ ವಿಚಾರಗೇಡಿಯಾಗಿ ಕೂಡದೆ, ತಂದೆಯ ಪ್ರೀತಿಯ ಸರದಾರರನ್ನು ಕರೆದು ತನ್ನನ್ನು ಅವರಿಗೆ ಒಪ್ಪಿಸಿ– "ನೀವು ನನ್ನ ತಂದೆಯ ನಂಬಿಗೆಯವರೂ, ಹಿತಕರ್ತರೂ ಆದದ್ದರಿಂದ ಈ ಸ್ಥಿತಿಯಲ್ಲಿ ನನ್ನನ್ನು ರಕ್ಷಿಸುವದು ನಿಮ್ಮನ್ನೇ ಕೂಡಿದೆ." ಎಂದು ಹೇಳಿ ಕಣ್ಣೀ ರು ಸುರಿಸಲು, ಅವರು ಮಮತೆಯಿಂದ—"ಅಮ್ಮಾ, ನೀನು ದುಃಖಿಸಬೇಡ. ಈ ಸೈನ್ಯದವರಿಂದ ಎಷ್ಟು ಮಾತ್ರವೂ ನಿನಗೆ ಮೋಸವು ಬಾರದು. ನಮ್ಮ ಮೇಲೆ ನಂಬಿಗೆಯನ್ನಿಟ್ಟು ನಿಶ್ಚಿಂತೆಯಿಂದ ಇರು, ಮಧುರೆಗೆ ಮುಟ್ಟುವವರೆಗೆ ನಿನಗೆ ಯಾವಮಾತಿನ ಭಯವೂ, ಕೊರತೆಯೂ, ಬಾರದು. ಮಧುರೆಗೆ ಹೋದ

ಬಳಿಕ ಮಾತ್ರ ನಿನ್ನ ಸಂರಕ್ಷಣಕ್ಕೆ ನಮ್ಮ ಸಹಾಯಕ್ಕಿಂತಲೂ, ನಿನ್ನ ಚಾತುರ್ಯವೇ ಅವಶ್ಯವಾಗಿರುವದು.''

ಸರದಾರರ ಮಾತುಗಳನ್ನು ಕೇಳಿ ಜೀವನಕಲೆಯು ಇದ್ದದ್ದರಲ್ಲಿ ಸಮಾಧಾನ ಮಾಡಿಕೊಂಡಳು. ತಾನು ಹೀಗೆ ಸ್ತ್ರೀರೂಪದಿಂದ ಹೊರಟರೆ, ತನ್ನ ರೂಪವು ಪರರಾಜರ ಕಣ್ಣುಗಳಲ್ಲಿ ಒತ್ತಿ, ಅನರ್ಥಕ್ಕೆ ಕಾರಣವಾದೀತೆಂದು ಯೋಚಿಸಿ, ಪುರುಷವೇಷವನ್ನು ಧರಿಸಿದಳು. ಶಸ್ತ್ರಾಸ್ತ್ರಗಳಿಂದ ಸಜ್ಜಾಗಿ ಉತ್ತಮವಾದ ಕುದುರೆಯನ್ನೇರಿ, ಅವಳು ಕೆಲವು ದಿವಸ ಮಾರ್ಗಕ್ರಮಣ ಮಾಡಿ, ಮಧುರಾ ಪಟ್ಟಣದ ಸೀಮೆಯಲ್ಲಿದ್ದ ಅರಣ್ಯವನ್ನು ಹೊಕ್ಕಳು. ಅಲ್ಲಿ ಮೃಗಯಾರ್ಥ ಬಂದಿದ್ದ ಸಿಂಹಕೇತುವು ಜೀವನಕಲೆಯ ಪುರುಷವೇಷದ ಠೀವಿಯನ್ನೂ, ಗಾಂಭೀರ್ಯವನ್ನೂ, ಸೌಂದರ್ಯವನ್ನೂ ನೋಡಿ ಬೆರಗಾದನು. ಅಷ್ಟರಲ್ಲಿ ಒಂದು ಹುಲಿಯು ಅಕಸ್ಮಾತ್ತಾಗಿ ಸಿಂಹಕೇತುವಿನ ಮೈಮೇಲೆ ಬರಲು, ಜೀವನಕಲೆಯು ದೂರದಿಂದಲೇ ಆ ಹುಲಿಯನ್ನು ನೋಡಿ ಬಾಣಪ್ರಯೋಗದಿಂದ ಅದನ್ನು ಭೂಮಿಗೆ ಉರುಳಿಸಿದಳು. ಅಕಲ್ಪಿತವಾಗಿ ಜೀವನಕಲೆಯಿಂದ ತನಗಾದ ಉಪಕಾರವನ್ನು ತಿಳಿದು ಸಿಂಹಕೇತುವು ಸಮಾಧಾನಪಟ್ಟು, ಅವಳು ಇದ್ದೆಡೆಗೆ ಬಂದು ವಿನಯದಿಂದ—"ಪರಾಕ್ರಮಿಯೇ, ಎಂಥ ಪ್ರಸಂಗದಲ್ಲಿ ನೀನು ನನಗೆ ಸಹಾಯ ಮಾಡಿದೆಯಲ್ಲ! ನೀನು ಇಲ್ಲಿ ಬರದಿದ್ದರೆ ನಾನು ಪ್ರಾಣಸಂಕಟದಲ್ಲಿ ಬೀಳುತ್ತಿದ್ದೆನು. ನನ್ನ ಮೇಲೆ ಆದ ನಿನ್ನ ಉಪಕಾರವು ಇಷ್ಟೆಂದು ಹೇಳುವಹಾಗಿಲ್ಲ. ಬಹಿರಂಗದಲ್ಲಿ ವ್ಯಕ್ತವಾಗುವ ನಿನ್ನ ಸುಲಕ್ಷಣಗಳಿಗೆ, ಈ ಭೂತದಯವು ಭೂಷಣವೇ ಸರಿ. ದಯಮಾಡಿ ನೀನು ನನ್ನ ರಾಜಧಾನಿಯಾದ ಮಧುರಾ ಪಟ್ಟಣಕ್ಕೆ ಬಂದು, ಕೆಲವು ದಿನ ವಿಶ್ರಾಂತಿಯನ್ನು ತೆಗೆದುಕೊಂಡು ಹೋಗಬೇಕೆಂದು ನಾನು ಹೇಳಿಕೊಳ್ಳುತ್ತೇನೆ.'' ಅನ್ನಲು, ಜೀವನಕಲೆಯು—"ನೃಪೋತ್ತಮನೇ, ನಿನ್ನ ವಿನಯವು ತಾನೇ ಪರರನ್ನು ಅಂಕಿತವಾಗಿ ಮಾಡಿಕೊಳ್ಳುತ್ತದೆ. ನಿನ್ನ ಪುಣ್ಯಪ್ರಭಾವವು ನಿನ್ನನ್ನು ಸಂಕಟದಿಂದ ಮುಕ್ತಮಾಡಿತಲ್ಲದೆ, ಅನ್ಯರು ಮಾಡಲಿಕ್ಕೆ ಎಷ್ಟರವರು? ನಾನು ಮಧುರಾಪಟ್ಟಣಕ್ಕೆ ಸಂತೋಷದಿಂದ ಬರುತ್ತೇನೆ. ಅನಾಯಾಸವಾಗಿ ನಿನ್ನಂಥ ವೀರನ ಸ್ನೇಹಲಾಭವು ಒದಗುತ್ತಿರಲು, ನಾನು ಅದನ್ನು ಹೇಗೆ ನಿರಾಕರಿಸಲಿ?'' ಅನ್ನಲು, ಸಿಂಹಕೇತುವು ಸಂತೋಷಪಟ್ಟು ಕೂಡಲೆ ಪಟ್ಟಣಕ್ಕೆ ತಿರು

ಸಿದನು. ಅವರಿಬ್ಬರೂ ಕೂಡಿ, ಸಕಲ ಸೈನ್ಯದೊಡನೆ ಸ್ವಲ್ಪ ವೇಳೆಯಲ್ಲಿಯೇ ಮಥುರಾ ಪಟ್ಟಣಕ್ಕೆ ತಲುಪಿದರು. ಸಿಂಹಕೇತುವು ಜೀವನಕಲೆಗಾಗಿ ಒಂದು ಉತ್ತಮವಾದ ಮಂದಿರವನ್ನು ಗೊತ್ತುಮಾಡಿ, ಅಲ್ಲಿ ಎಲ್ಲಬಗೆಯ ರಾಜಭೋಗಾರ್ಹವಾದ ಸಾಹಿತ್ಯಗಳನ್ನು ಒದಗಿಸಿಕೊಟ್ಟನು. ಆಕೆಯ ಸೈನಿಕರ ವ್ಯವಸ್ಥೆಯನ್ನೂ ಚನ್ನಾಗಿ ಇಡಿಸಿದನು. ಸಿಂಹಕೇತುವಿನ ಗುಣಗಳು ತಿಳಿಯದ್ದರಿಂದಲೂ, ಪದ್ಮನಯನೆಯ ಸದ್ವರ್ತನದ ಮೋರೆಯನ್ನು ನೋಡಬೇಕಾದದ್ದರಿಂದಲೂ ಜೀವನಕಲೆಯು, ತನ್ನ ಅಪ್ಪಣೆಯ ಹೊರತು ತಮ್ಮ ನಿಜವಾದ ವರ್ತಮಾನವನ್ನು ಹೇಳದಂತೆ ತನ್ನ ಸೈನಿಕರಿಗೆ ಅಪ್ಪಣೆಮಾಡಿದ್ದಳು. ಅವಳ ಚಾತುರ್ಯವು ಸಿಂಹಕೇತುವಿನ ಮನಸ್ಸನ್ನು ಪ್ರಸನ್ನೀಕರಿಸಿಕೊಂಡಿತ್ತು. ಅವನು ಜೀವನಕಲೆಯನ್ನು ಕುರಿತು ಪುರುಷನೆಂಬ ಭಾವದಿಂದ—"ಮಿತ್ರಾ, ನಿನ್ನ ದೇಶವಾವುದು? ಯಾವಕಾರಣದಿಂದ ನೀನು ಪ್ರವಾಸಮಾಡುತ್ತೀ? ನಿನ್ನ ಹೆಸರೇನು?" ಎಂದು ಕೇಳಲು, ಅವನು ತನ್ನ ನಿಜವಾದ ವರ್ತಮಾನವನ್ನು ಮುಚ್ಚಿ ಹೇಳತೊಡಗಿದನು—"ನೃಪೋತ್ತಮನೇ, ನಾನು ಚೋಳರಾಜ್ಯದ ಅರಸನ ಪ್ರೀತ್ಯಾಸ್ಪದನಾದ ಮನಮೋಹನನೆಂಬ ಸರದಾರನಿದ್ದೇನೆ. ಬೇರೆಬೇರೆ ದೇಶದೇಶಗಳ ಬೇರೆಬೇರೆ ವ್ಯವಸ್ಥೆಗಳನ್ನು ತಿಳಕೊಳ್ಳುವದಕ್ಕಾಗಿ ಅರಸನ ಅಪ್ಪಣೆಯನ್ನು ಹೊಂದಿ, ಪ್ರವಾಸ ಮಾಡಹತ್ತಿರುವೆನು. ನಾನು ಕಾಂಚೀಪುರವೆಂಬ ರಾಜಧಾನಿಯನ್ನು ಬಿಟ್ಟು ಈ ಹೊತ್ತಿಗೆವನಿಲ್ಲಿಂದರೂ ಆರು ತಿಂಗಳಾಗಿರಬಹುದು. ಇನ್ನು ಸ್ವಲ್ಪ ದಿನಗಳಲ್ಲಿಯೇ ನನ್ನ ಸೈನ್ಯದೊಂದಿಗೆ ಅರಸನ ಸನ್ನಿಧಿಗೆ ಹೋಗಬೇಕಾಗಿದೆ."

ಸಿಂಹಕೇತುವು ಜೀವನಕಲೆಯ ಮಾತುಗಳನ್ನು ಕೇಳಿ— "ಮಿತ್ರಾ, ಮನಮೋಹನಾ, ನಿನ್ನ ವಿಯೋಗವು ಸ್ವಲ್ಪ ದಿನಗಳಲ್ಲಿಯೇ ಆಗುವದನ್ನು ಕೇಳಿ ನನಗೆ ಪರಮಾವಧಿ ವ್ಯಸನವಾಗುತ್ತದೆ. ಅಪರಿಚಿತನಾದ ನಿನ್ನ ಮೇಲೆ ನನ್ನ ಪ್ರೇಮವು ಕುಳಿತುಕೊಳ್ಳಲಿಕ್ಕೆ ಪೂರ್ವದ ಋಣಾನುಬಂಧವಲ್ಲದೆ ಮತ್ತೊಂದು ಕಾರಣವಿಲ್ಲ. ನಿನ್ನ ಉಪಕಾರವನ್ನು ಹೇಗೆ ತೀರಿಸಬೇಕೆಂಬದರ ಕಲ್ಪನೆಯೇ ನನಗೆ ಹರಿಯಲೊಲ್ಲದು, ಇರಲಿ, ಆ ಸಂಬಂಧದಿಂದ ನಾನು ನಿನ್ನ ಋಣಿಯಾಗಿದ್ದೇನೆ. ಆದರೆ ನೀನು ಇನ್ನು ಒಂದು ತಿಂಗಳಾದರೂ ನನ್ನ ರಾಜಧಾನಿಯಲ್ಲಿ ಇರಲಿಕ್ಕೆ ಬೇಕು." ಎಂದು ಹೇಳಲು, ಜೀವನಕಲೆಯು ಸಿಂಹಕೇತು

ವಿನ ಮಾತಿಗೆ ಆದರಪೂರ್ವಕವಾಗಿ ಒಡಂಬಟ್ಟು, ಪದ್ಮನಯನೆಯ ಭೆಟ್ಟಿಯಾಗುವ ಸಂಧಿಯನ್ನು ಹುಡುಕುತ್ತ ಮಥುರೆಯಲ್ಲಿರಹತ್ತಿದಳು. ಜೀವನಕಲೆಯು ತನ್ನ ಸ್ತ್ರೀರೂಪವನ್ನು ಪ್ರಕಟಮಾಡದೆ ಇದ್ದದ್ದು, ಆವಳ ಅನಿರ್ವಾಚ್ಯವಾದ ಚಾತುರ್ಯದ ಉದಾಹರಣವಾಗಿದೆ.

ಹೀಗೆ ಇರಇರುತ್ತ, ಒಂದು ದಿನ ಜೀವನಕಲೆಯು ದಿನದಂತೆ ಅರಸನ ದರ್ಶನಕ್ಕಾಗಿ ಅರಮನೆಗೆ ಹೋಗಿರಲು, ಆಗ ಅರಸನು ಐದು ವರ್ಷದ ಹುಡುಗನೊಡನೆ ವಿನೋದ ಮಾಡುತ್ತ ಕುಳಿತಿದ್ದನು. ಅವನು ಜೀವನಕಲೆಯು ಬಂದದ್ದನ್ನು ನೋಡಿ— “ಮಿತ್ರಾ, ಮನಮೋಹನಾ, ಇತ್ತ ಬಾ.” ಎಂದು ಬಹಳ ಮರ್ಯಾದೆಯಿಂದ ಆವನನ್ನು ಹತ್ತರ ಕುಳ್ಳಿರಿಸಿಕೊಂಡನು. ಅಪರಿಚಿತನಾದ ಮನುಷ್ಯನು ಅರಸನ ಹತ್ತರ ಕುಳಿತದ್ದನ್ನು ನೋಡಿ, ಆ ಹುಡುಗನು— “ಮಾಮಾ, ಇವರು ಯಾರು? ಇಷ್ಟು ದಿವಸ ಇವರು ಎಲ್ಲಿಗೆ ಹೋಗಿದ್ದರು? ನಿನ್ನ ಅಪ್ಪಣೆಯನ್ನು ಕೇಳದೆ ಒಳಗೆ ಹೇಗೆ ಬಂದರು? ಅದು ನೋಡು, ಅವರ ಉಂಗರವು ಎಷ್ಟು ಚಂದ ಕಾಣಿಸುತ್ತದೆ. ಅದನ್ನು ನನಗೆ ಕೊಡಿಸಬಾರದೆ?” ಎಂದು ಹೇಳಿ ಸಿಂಹಕೇತುವನ್ನು ಪರಿಪರಿಯಿಂದ ಪೀಡಿಸಹತ್ತಿದನು. ಆಗ ಅರಸನು—ಬಾಳಾ, ವಿಕ್ರಮಾರ್ಕಾ, ಆ ಉಂಗರವು ನಮ್ಮದಲ್ಲ. ನಿನಗೆ ಬೇಕಾದರೆ ನಾನು ಬೇರೆ ಉಂಗರವನ್ನು ಕೊಡುತ್ತೇನೆ. ನೀನು ಹೀಗೆ ಎರಡನೆಯವರ ಒಡವೆಯನ್ನು ಬೇಡಹತ್ತಿದರೆ, ಅವರು ನಿನ್ನ ಮನೆಗೆ ಹೇಗೆ ಬಂದಾರು? ಸುಮ್ಮನೆ ಕೂಡ್ರಬೇಕು. ಹೀಗೆ ಹುಚ್ಚನಹಾಗೆ ಮಾಡಬಾರದು. ಯಾಕೆ ಮೊನ್ನೆ ಅವ್ವ ಹೇಳಿದ ಮಾತು ಮರೆತೆಯಾ?” ಎಂದು ಕೇಳಲು, ವಿಕ್ರಮಾರ್ಕನು— “ಮಾಮಾ, ಇಲ್ಲ, ಮರೆತಿಲ್ಲ. ಇನ್ನು ಮೇಲೆ ನಿನಗೆ ಉಂಗರ ಕೇಳುವದಿಲ್ಲ. ಅವ್ವನ ಮುಂದೆ ಮಾತ್ರ ನಾನು ಉಂಗರ ಕೇಳಿದನೆಂದು ಹೇಳಬೇಡ. ಯಾಕಂದರೆ ನಾನು ಏನಾದರೂ ತಪ್ಪು ಮಾಡಿದರೆ, ಆಕೆಯು ನನ್ನ ಸಂಗಡ ನೆಟ್ಟಗೆ ಮಾತಾಡುವದಿಲ್ಲ; ಮತ್ತು ನನ್ನನ್ನು ಕರೆದುಕೊಳ್ಳುವದಿಲ್ಲ.

ಜೀವನಕಲೆಯು ಆ ಹುಡುಗನ ತಿಳುವಳಿಕೆಯ ಮಾತುಗಳನ್ನು ಕೇಳಿ ಬೆರಗಾದದ್ದಲ್ಲದೆ, ಕಮಲಾಕ್ಷನ ರೂಪವನ್ನು ಅಚ್ಚಿಳಿಯದೆ ಹೋಲುತ್ತಿದ್ದ ಆ ಹುಡುಗನ ರೂಪವನ್ನು ನೋಡಿ, ಪದ್ಮನಯನೆಯ ಧನ್ಯತೆಗೆ ಸಂತೋಷಪಟ್ಟಳು. ಪದ್ಮನಯನೆಗೆ ವಿಕ್ರಮಾರ್ಕನೆಂಬ ಮಗನಿರುವನೆಂಬದನ್ನು ಆಕೆಯು

ಕನೋಜಪಟ್ಟಣದಲ್ಲಿರುವಾಗಲೇ ತನ್ನ ತಂದೆಯ ಮುಖದಿಂದ ಕೇಳಿದ್ದಳು. ತನ್ನ ಪತಿಯ ರೂಪದ ಪ್ರತಿಬಿಂಬವಾದ ರೂಪವು ಕಣ್ಣಿಗೆ ಬಿದ್ದಕೂಡಲೆ, ಆಕೆಯ ಅಂತಃಕರಣವು ಕರಗಿ, ಪ್ರಾಣಕ್ಕಿಂತಲೂ ಹೆಚ್ಚೆಂದು ತಿಳಿದು ಜತನ ಮಾಡುತ್ತಿದ್ದ ಆ ಉಂಗರವನ್ನು ಕೂಡಲೆ ಉಚ್ಚಿ, ವಿಕ್ರಮಾರ್ಕನ ಕೈಯಲ್ಲಿ ಹಾಕಿದಳು. ಆಗ ವಿಕ್ರಮಾರ್ಕನು ಆನಂದದಿಂದ ಕುಣಿದಾಡುತ್ತ "ಅವ್ವನಿಗೆ ತೋರಿಸಿ ಬರುತ್ತೇನೆ." ಎಂದು ಹೇಳಿ, ಓಡಿಹೋಗುತ್ತಿರಲು, ಸಿಂಹಕೇತುವು ಪ್ರತಿಬಂಧಿಸಿದನು. ಆಗ ಜೀವನಕಲೆಯು—"ಮಿತ್ರಾ, ಬಿಡು, ಉಂಗರವು ಎಲ್ಲಿ ಹೋಗುತ್ತದೆ? ಅವನು ತನ್ನ ತಾಯಿಗೆ ತೋರಿಸಿಬರಲೊಲ್ಲನೇಕೆ. ಅವನನ್ನು ನೋಡಿದಾಗಿನಿಂದ ಅವನ ಮೇಲೆ ನನ್ನ ಪ್ರೇಮವು ಬಹಳ ಕೂಡಿದೆ" ಎಂದು ಹೇಳಿ, ವಿಕ್ರಮಾರ್ಕನನ್ನು ಅಪ್ಪಿಕೊಂಡು—"ಬಾಳಾ, ವಿಕ್ರಮಾರ್ಕಾ, ಹೋಗು. ನಿಮ್ಮ ಅವ್ವನಿಗೆ ತೋರಿಸಿ ಬಾ" ಎಂದು ಕೈಬಿಡಲು, ಅವನು ಓಡುತ್ತ ತಾಯಿಯ ಒಳಿಗೆ ಹೋಗಿ—"ಅವ್ವಾ, ಇಲ್ಲಿ ನೋಡು; ಮಾವನ ಹತ್ತರ ಯಾರೋ ಬಂದಿದ್ದರು. ಅವರು ನನಗೆ ಈ ಉಂಗರವನ್ನು ಕೊಟ್ಟರು." ಎಂದು ಹೇಳಿ, ಉಂಗರವನ್ನು ಪದ್ಮನಯನೆಯ ಕೈಯಲ್ಲಿ ಕೊಟ್ಟನು. ಆಗ ಆಕೆಯು ತನ್ನ ಪತಿಯಾದ ಕಮಲಾಕ್ಷನ ಹೆಸರಿನ ಮುದ್ರಿಕೆಯುಳ್ಳ ತನ್ನ ಗುರುತಿನವಾದ ಉಂಗುರವನ್ನು ನೋಡಿ ಬಹಳ ಗೊಂದಲದಲ್ಲಿ ಬಿದ್ದಳು. ಅವಳು ಕೌತುಕದಿಂದ ಅದನ್ನು ಪರೀಕ್ಷಿಸಿ ನೋಡಿ, ಇದು ನಿಜವಾಗಿಯೇ ತನ್ನ ಪ್ರಾಣದೊಡೆಯನ ಉಂಗರವೆಂದು ಗೊತ್ತು ಹಿಡಿದು, ಅದನ್ನು ಹಲವು ಸಾರೆ ಚುಂಬಿಸಿದಳು. ತನ್ನನ್ನು ದುಃಖದಿಂದ ಮುಕ್ತಳಾಗ ಮಾಡುವದಕ್ಕಾಗಿ ಪ್ರತ್ಯಕ್ಷ ಕಮಲಾಕ್ಷನೇ ಬಂದನೆಂಬ ಸಂಶಯದಿಂದ, ಅವಳು ವಿಕ್ರಮಾರ್ಕನನ್ನು ಕುರಿತು— "ಬಾಳಾ, ನಿನಗೆ ಈ ಉಂಗರವನ್ನು ಕೊಟ್ಟವರು ಯಾರ ಹಾಗೆ ಇದ್ದರು? ಹೇಳು ನೋಡೋಣ, ಅನ್ನಲು" ಅವನು ತೊದಲುಬದಲು ಮಾತಾಡುತ್ತ—ಅವ್ವಾ, ಅತಗಲ್ಲ, ಮೀಸಿ ಬಂದಿಲ್ಲ; ಮತ್ತ ಕೆಂಪಗಿದ್ದ; ತೆಳ್ಳಗಿದ್ದ; ಗಿಡ್ಡ ಇದ್ದ; ಮತ್ತ ಒಳ್ಳೇ ಚಂದಗಿದ್ದ ನೋಡು." ಎಂದು ಹೇಳಲು, ಪದ್ಮನಯನೆಯು, ಇವು ತನ್ನ ಪತಿಯ ರೂಪದ ಲಕ್ಷಣಗಳಲ್ಲೆಂದು ತಿಳಿದು ವ್ಯಸನಪಟ್ಟಳು. ಆದರೂ ಈ ಉಂಗರವಿದ್ದವರಿಗೆ ತನ್ನ ಪತಿಯ ಸಂಗತಿಯೇನಾದರೂ ಗೊತ್ತಿರಬಹುದೆಂದು ಯೋಚಿಸಿ, ಆ ಮನುಷ್ಯನನ್ನು ಯಾವಾಗ

ನೋಡೇನೆಂಬ ಕುತೂಹಲವು ಅವಳ ಮನದಲ್ಲಿ ಉತ್ಪನ್ನವಾಯಿತು. ಉಂಗರವನ್ನು ತಿರುಗಿ ಕಳಿಸಿಕೊಡದಿದ್ದರೆ, ಆ ಮನುಷ್ಯನು ಯಾವ ರೀತಿಯಿಂದಾದರೂ ತನ್ನ ಕಣ್ಣಿಗೆ ಬಿದ್ದಾನೆಂದು ತಿಳಿದು, ಪದ್ಮನಯನೆಯು ವಿಕ್ರಮಾರ್ಕನನ್ನು ಮರಳಿ ಅರಸನ ಬಳಿಗೆ ಕಳುಹಲಿಲ್ಲ.

ಇತ್ತ ಜೀವನಕಲೆಯು, ಬಹಳ ಹೊತ್ತಾದರೂ ವಿಕ್ರಮಾರ್ಕನು ಬಾರದ್ದನ್ನು ನೋಡಿ ಪದ್ಮನಯನೆಯು ಅವನನ್ನು ತಡೆದಿರಬಹುವೆಂದು ನಿಶ್ಚಯಿಸಿ, ಅರಸನ ಅಪ್ಪಣೆಯನ್ನು ಹೊಂದಿ ತನ್ನ ಮಂದಿರಕ್ಕೆ ಹೋದಳು. ಜೀವನಕಲೆಯು ಇರುತ್ತಿದ್ದ ಮಂದಿರಕ್ಕೆ ಹೊಂದಿಯೇ ಪದ್ಮನಯನೆಯ ಮಂದಿರವಿತ್ತು. ಆದರೂ ಇಲ್ಲಿಯವರೆಗೆ ಪರಸ್ಪರರ ಮುಖಾವಲೋಕನವಾಗಿದ್ದಿಲ್ಲ. ಆ ಪೊತ್ತಿನ ದಿವಸ ಜೀವನಕಲೆಯು ಸಂಧ್ಯಾರಾಗದಸೊಬಗನ್ನು ನೋಡಿ, ಸಂತೋಷದಿಂದ ಗಾಯನ ಮಾಡಹತ್ತಿದಳು. ಅವಳ ಸುಸ್ವರವೂ ಪದ್ಯದ ಮಾಧುರ್ಯವೂ ಕೇಳುವವರ ಮನಸ್ಸನ್ನು ಆನಂದಗೊಳಿಸುತ್ತಿದ್ದವು. ಪದ್ಮನಯನೆಯು ತನ್ನ ಪತಿಯಿಂದ ರಚಿಸಲ್ಪಟ್ಟ ಪದ್ಯವು ಮಧುರ ಸ್ವರದೊಂದಿಗೆ ಕಿವಿಗೆ ಬೀಳುವದನ್ನು ತಿಳಿದು ಬೆರಗಾದಳು. ಅವಳು ಧ್ವನಿಯ ಸುಳುವನ್ನು ಹಿಡಿದು ಆಲಿಸಿ, ತನ್ನ ಮಂದಿರದ ನೆರೆಯ ಮಂದಿರದಲ್ಲಿಯೇ ಯಾರೋ ಗಾಯನ ಮಾಡುತ್ತಿರುವರೆಂಬದನ್ನು ಗೊತ್ತು ಹಚ್ಚಿದಳು. ಕೂಡಲೆ ಪದ್ಮನಯನೆಯು ತನ್ನ ದಾಸಿಯಾದ ಮೌಕ್ತಿಕೆಯನ್ನು ಕರೆದು—"ಮೌಕ್ತಿಕೇ, ನೀನು ಈಗಲೇ ಆ ನೆರೆಯ ಮಂದಿರಕ್ಕೆ ಹೋಗಿ, ಅಲ್ಲಿ ಹಾಡುವವರನ್ನು ನಾನು ಕರೆದೆನೆಂದು ಹೇಳಿ ಬೇಗನೆ ಕರಕೊಂಡು ಬಾ; ಹೆಂಗಸಿನ ಧ್ವನಿಯಂತೆ ಕೇಳುತ್ತದೆ" ಎಂದು ಹೇಳಲು, ಮೌಕ್ತಿಕೆಯು ತವಕದಿಂದ ಜೀವನಕಲೆಯ ಹತ್ತರಬಂದು—"ದೊರೆಗಳೇ, ತಮ್ಮನ್ನು ನಮ್ಮ ಒಡತಿಯರಾದ ಪದ್ಮನಯನಾದೇವಿಯರು ಕರೆತರುವದಕ್ಕೆ ಹೇಳಿದ್ದಾರೆ. ಬೇಗನೆ ಬರೋಣವಾಗಬೇಕೆ"ಂದು ಹೇಳಿದಳು. ಜೀವನಕಲೆಯು ತನ್ನ ಕಾರ್ಯಸಾಧನದ ವೇಳೆಯು ಸಮೀಪಿಸಿತೆಂದು ತಿಳಿದು ಆತುರದಿಂದ ಮೌಕ್ತಿಕೆಯೊಡನೆ ಪದ್ಮನಯನೆಯ ಬಳಿಗೆ ಹೋದಳು. ಆಗ ವಿಕ್ರಮಾರ್ಕನು ಪದ್ಮನಯನೆಯನ್ನು ಕುರಿತು—"ಅಪ್ಪಾ, ನನಗೆ ಉಂಗರವನ್ನು ಕೊಟ್ಟವರು ಇಲ್ಲಿಯೇ ಬಂದಿದ್ದಾರೆ ನೋಡು"ಎಂದು ಹೇಳಲು, ಪದ್ಮನಯನೆಯು ಜೀವನಕಲೆಯ ಕಡೆಗೆ ತಿರುಗಿಸಿ ನೋಡಿ, ಯಾವನೋ ಪುರುಷನು ಬಂದಿರುವನೆಂದು ತಿಳಿದು, ತಕ್ಕ ಮರ್ಯಾದೆಯಿಂದ ಅವನಿಗೆ ಆದರ ಮಾಡಿದಳು.

ಬಾಲ್ಯದಲ್ಲಿ ಜೀವನಕಲೆಯೂ, ಪದ್ಮನಯನೆಯೂ, ಕೂಡಿ ಆಡಿದವರಾಗಿದ್ದರೂ, ಈಗ್ಗೆ ಪದ್ಮನಯನೆಗೆ ಜೀವನಕಲೆಯ ಗುರುತು ಸಿಗುವ ಸಂಭವವಿದ್ದಿಲ್ಲ. ಅಗ ಪದ್ಮನಯನೆಯು ಜೀವನಕಲೆಯನ್ನು ಕುರಿತು—ಸದ್ಗೃಹಸ್ಥರೇ, ಯೋಗ್ಯಾಯೋಗ್ಯ ವಿಚಾರ ಮಾಡದೆ, ಅಪರಿಚಿತರಾದ ತಮ್ಮನ್ನು ಉದ್ಧಟತನದಿಂದ ನಾನು ಕರೆಸಿದ್ದಕ್ಕಾಗಿ ಕ್ಷಮಿಸಿರಿ. ಒಡಹುಟ್ಟಿದವಳೆಂಬ ಭಾವದಿಂದ ನನ್ನ ಮೇಲೆ ದಯವಿಟ್ಟು, ನನ್ನ ಪ್ರಶ್ನೆಗಳಿಗೆ ಉತ್ತರಕೊಡುವದಕ್ಕಾಗಿ ನಾನು ತಮಗೆ ಅಂಗಲಾಚಿ ಬೇಡಿಕೊಳ್ಳುತ್ತೇನೆ. ನಿಮ್ಮ ಗಾಯನವನ್ನು ಕೇಳಿ, ನನಗೆ ಬಹಳ ಸಂತೋಷವಾಯಿತು. ಆದರೆ ಈ ಪದ್ಯವನ್ನು ತಾವು ಯಾರಿಂದ ಸಂಪಾದಿಸಿದಿರಿ? ಮತ್ತು ಈವೊತ್ತಿನ ದಿವಸ ವಿಕ್ರಮಾರ್ಕನಿಗೆ ನೀವು ಕೊಟ್ಟ ಉಂಗರವು ನಿಮ್ಮ ಹತ್ತರ ಹೇಗೆ ಬಂದಿತು? ಅನ್ನಲು, ಜೀವನಕಲೆಯು ಮನದಲ್ಲಿ—" ಪದ್ಮನಯನೆಯು ತನ್ನ ಪತಿಯನ್ನಗಲಿ ಇಲ್ಲಿ ವಾಸಮಾಡಿದ ಬಳಿಕ ವಿಕ್ರಮಾರ್ಕನು ಹುಟ್ಟಿರಬಹುದು. ಸಿಂಹಕೇತುವು ನಮ್ಮೊಡೆಯನಿಗೆ ಪತ್ರಕಳಿಸಿದ್ದು ನಿಜವಾಯಿತು. ಆದರೆ ಇವಳ ಪಾತಿವ್ರತ್ಯದ ನಿಕಟವು ಎಷ್ಟರಮಟ್ಟಿಗೆ ಇರುವದೆಂಬದನ್ನು ಪರೀಕ್ಷಿಸುವವರೆಗೆ, ನನ್ನ ನಿಜವಾದ ವೃತ್ತಾಂತವನ್ನು ಹೇಳಬಾರದು. " ಎಂದು ಯೋಚಿಸಿ, ಪದ್ಮನಯನೆಯನ್ನು ಕುರಿತು ಕಪಟದಿಂದ—' ದೊರೆಸಾನಿಯೇ, ನೀನು ಕೇಳುವ ಪ್ರಶ್ನಗಳಿಗೆ ಉತ್ತರ ಕೊಡಬೇಕೆಂದರೆ ದುಃಖದಿಂದ ನನ್ನ ಕುತ್ತಿಗೆಯ ಶಿರಗಳು ಬಿಗಿಯುತ್ತವೆ. ಆದರೂ ನಿನ್ನ ಮಾತನ್ನು ಮುರಿಯಬಾರದೆಂಬ ಉದ್ದೇಶದಿಂದ ಹೇಳುತ್ತೇನೆ; ಚಿತ್ತಗೊಟ್ಟು ಕೇಳು;—ನಾನು ಸುಮಾರು ಈಗ ಆಯ್ದು ವರ್ಷಗಳ ಹಿಂದೆ, ಅರಣ್ಯದಲ್ಲಿ ಬೇಟೆಯಾಡುತ್ತಿರಲು, ಅಲ್ಲಿಗೆ ಅಪ್ರತಿಮ ರೂಪಶಾಲಿಯಾದ ಕಮಲಾಕ್ಷನೆಂಬವನೊಬ್ಬ ರಾಜಪುತ್ರನು ಬಂದನು. ಅವನು ಮಾರ್ಗಶ್ರಮದಿಂದ ಬಹಳ ಬಳಲಿರಲು ನಾನು ಅವನಿಗೆ ಆದರ ಮಾಡಿ ತಕ್ಕ ಉಪಚಾರದಿಂದ ಅವನ ಮಾರ್ಗಶ್ರಮವನ್ನು ಹೋಗಲಾಡಿಸಿದೆನು. ಇದರಿಂದ ನಮ್ಮಿಬ್ಬರ ಮಿತ್ರತ್ವ ಕೂಡಿ, ಮುಂದೆ ಅದು ವೃದ್ಧಿಂಗತವಾಗುತ್ತ ಹೋಯಿತು. ಅವನು ಯಾವಾಗಲೂ ತನ್ನ ಪ್ರಿಯಪತ್ನಿಯಾದ ಪದ್ಮನಯನೆಯೆಂಬವಳನ್ನು ನೆನಿಸಿ ನೆನಿಸಿ, ಪ್ರಳಾಪಿಸುತ್ತಿದ್ದನು. ಅವನ ಶೌರ್ಯದ ಹಾಗು ಪದ್ಮನಯನೆಯ ಮೇಲಿದ್ದ ಆವನ ಪ್ರೇಮದ ಸಂಗತಿಗಳನ್ನು ಹೇಳಹತ್ತಿದರೆ ಎರಡು ದಿನ

ಗಳು ಸಾಲಲಿಕ್ಕಿಲ್ಲ. ಆ ಕಮಲಾಕ್ಷನೇ ತನ್ನ ಪ್ರಿಯ ಪದ್ಮನಯನೆಯ ವರ್ಣನೆದಿಂದ ತುಂಬಿದ ಈ ಪದ್ಯವನ್ನು ಯಾವಾಗಲೂ ಅನ್ನುತ್ತಿದ್ದುದರಿಂದ, ಅದು ತನ್ನಿಂದ ತಾನೇ ನನ್ನ ಸ್ಮರಣದಲ್ಲಿ ನಿಂತಿತು. ಆ ಪುಣ್ಯವಂತನ ಸುಗುಣಗಳನ್ನೂ, ಮಿತ್ರತ್ವವನ್ನೂ ಎಷ್ಟು ವರ್ಣಿಸಿದರೂ ಸ್ವಲ್ಪವೇ ಅದೆ. ಇಂಥ ದುರ್ಲಭನಾದ ಮಿತ್ರನು ಒಂದು ದಿನ ರಾತ್ರಿಯಲ್ಲಿ ಮಲಗಿರಲು, ಅವನಿಗೆ ಸರ್ಪದಂಶವಾಗಿ, ಬೆಳಗಾಗುವದರೊಳಗೇ ಅವನು ಹಾಸಿಗೆಯ ಮೇಲೆ ಮರಣಹೊಂದಿದ್ದನು. ಅವನ ಸ್ಥಿತಿಯನ್ನು ನೋಡಿ, ನನಗಾದ ದುಃಖವನ್ನು ಹೇಳಲಸಾಧ್ಯವು. ಆದರೆ ಈಶ್ವರೇಚ್ಛೆಗೆ ವಿರುದ್ಧವಾಗಿ ಯಾರ ಯತ್ನವು ನಡೆಯುವದು? ನಾನು ನಿರುಪಾಯನಾಗಿ, ಮಿತ್ರಧರ್ಮಕ್ಕನುಸರಿಸಿ ಯಥಾಪ್ರಕಾರ ಅವನ ಉತ್ತರಕ್ರಿಯೆಯನ್ನು ಮಾಡಿದೆನು. ಈ ಉಂಗರವು ಆ ಕಮಲಾಕ್ಷನ ಬೆರಳಿನಲ್ಲಿಯೇ ಇತ್ತು.

ಜೀವನಕಲೆಯ ಮುಖದಿಂದ ಕಮಲಾಕ್ಷನ ವೃತ್ತಾಂತವನ್ನು ಕೇಳುತ್ತಿದ್ದಾಗ, ಪದ್ಮನಯನೆಯ ಕಣ್ಣುಗಳೊಳಗಿಂದ ನೀರುಗಳು ಏಕಪ್ರಕಾರವಾಗಿ ಸುರಿಯುತ್ತಿದ್ದವು. ಕಮಲಾಕ್ಷನು ಮರಣಹೊಂದಿದನೆಂಬದನ್ನು ಕೇಳಿದ ಬಳಿಕಂತು ಅವಳ ದುಃಖವು ಅನಿವಾರವಾಯಿತು. ಹಲವು ರೀತಿಯಿಂದ ಕಮಲಾಕ್ಷನ ಗುಣಗಳನ್ನು ನೆನಿಸುತ್ತ ಪದ್ಮನಯನೆಯು ಮೂರ್ಛಿತಳಾದಳು. ಕೂಡಲೆ ಮೌಕ್ತಿಕೆಯು ತಕ್ಕ ಉಪಚಾರಗಳಿಂದ ಅವಳನ್ನು ಎಚ್ಚರಗೊಳಿಸಿದಳು. ಜೀವನಕಲೆಯಾದರೂ ಪದ್ಮನಯನೆಯ ಶೋಕವನ್ನು ನೋಡಿ, ಪತಿಯಾದ ಕಮಲಾಕ್ಷನನ್ನು ನೆನಿಸಿ ತಾನೂ ಮನವಣೆಯ ಅತ್ತಳು. ಪದ್ಮನಯನೆಯ ಪ್ರೇಮವು ಕಮಲಾಕ್ಷನ ಮೇಲೆ ಪೂರ್ಣವಾಗಿರುವದೆಂಬದನ್ನು ಜೀವನಕಲೆಯು ಮನಗಂಡರೂ, ಅವಳ ಮನಸ್ಸನ್ನು ಪೂರ್ಣವಾಗಿ ಪರೀಕ್ಷಿಸುವ ಉದ್ದೇಶದಿಂದ ಪದ್ಮನಯನೆಯನ್ನು ಕುರಿತು—"ಸುಂದರಿಯೇ, ಆದ ಮಾತಿಗೆ ದುಃಖಪಟ್ಟು ಪ್ರಯೋಜನವೇನು? ನಿನ್ನ ಪತಿಯೂ, ನನ್ನ ಮಿತ್ರನೂ ಆದ ಕಮಲಾಕ್ಷನು ತಿರುಗಿ ಬರುವ ಮಾರ್ಗದಿಂದ ಹೋಗಿರುವನೇ? ಇನ್ನು ಮೇಲೆ ಅವನ ಆಶೆಯು ನಮಗೇಕೆ? ಭೂಮಿಯ ಮೇಲೆ ಇರುವವರೆಗೆ ಸುಖವನ್ನನುಭವಿಸಿ, ಕಾಲವು ತುಂಬಿದ ಬಳಿಕ ಒಂದು ದಿವಸ ಕಮಲಾಕ್ಷನನ್ನು ಹಿಂಬಾಲಿಸಿ ನಾವು ಹೋದರಾಯಿತು. ಈಗ ನೀನು ಐದುವರ್ಷಗಳಿಂದ ಪತಿಯ ವಿಯೋಗ ದುಃಖವನ್ನು ಅನುಭವಿಸುತ್ತ, ಇಂದ್ರಿಯನಿಗ್ರಹಮಾಡಿ ಶರೀರವನ್ನು ಒಣ

ಷ್ಟು ನನಗೆ ಯೋಗ್ಯವಾಗಿ ತೋರುವದಿಲ್ಲ. ಆದದ್ದು ಆಗಿಹೋಯಿತು. ನಿನ್ನ ಸೌಂದರ್ಯವನ್ನು ನೋಡಿ ನನ್ನ ಮನಸ್ಸು ಆಗಲೇ ಕರಗಿಹೋಗಿದೆ; ಮಿತ್ರವಾತ್ಸಲ್ಯವೂ, ನೀತಿಮಾರ್ಗವೂ ಹಾಳಾಗಿಹೋಗಿವೆ" ಎಂದು ಹೇಳಿ, ಜೀವನಕಲೆಯು ಕೆಟ್ಟಭಾವದಿಂದ ಪದ್ಮನಯನೆಯನ್ನು ಎವೆಬಡಿಯದೆ ನೋಡಹತ್ತಿದಳು. ಪರೇಂಗಿತಜ್ಞಳಾದ ಪದ್ಮನಯನೆಯು, ಪುರುಷವೇಷವನ್ನು ಧರಿಸಿದ ಜೀವನಕಲೆಯನ್ನು ಸ್ತ್ರೀಯೆಂದು ತಿಳಿಯದೆ, ಅವಳ ದುಷ್ಟವಾಸನೆಯನ್ನು ಕೂಡಲೆ ತಿಳಿದು, ಅವಳನ್ನು ಮನಸ್ಸಿನಲ್ಲಿ ಹಳಿಯುತ್ತ, ನುಡಿದಳೇನಂದರೆ– "ಸದ್ಗೃಹಸ್ಥನೆ, ನೀನು ನನ್ನ ಪತಿಯ ಮಿತ್ರನಾದುದರಿಂದ ನನಗೆ ಒಡಹುಟ್ಟಿದವನಾಗಲಿಲ್ಲವೇ? ಈ ವಿಚಾರವನ್ನು ಮನಸ್ಸಿನಲ್ಲಿ ತರದೆ ಯಾವ ಧೈರ್ಯದಿಂದ ದುರಾಲೋಚನೆಮಾಡಿದೆ? ನಿನ್ನ ಮಿತ್ರವಾತ್ಸಲ್ಯಕ್ಕೂ, ಸದ್ವರ್ತನಕ್ಕೂ ಬೆಂಕಿಹಚ್ಚಲಿ. ಪತಿಯ ವಿಯೋಗದುಃಖದಿಂದ ಸಂತಪ್ತಳಾದ ನನ್ನನ್ನು ಹೃದಯಭೇದಕಭಾಷಣಗಳಿಂದ ನೋಯಿಸಿದ ಅಪರಾಧಕ್ಕಾಗಿ ಪರಮೇಶ್ವರನು ನಿನಗೆ ಬಲವಾದ ಶಿಕ್ಷೆಯನ್ನು ಮಾಡದೆ ಇರನು. ಪ್ರಿಯಪತಿಯಾದ ಕಮಲಾಕ್ಷನು ಮರಣಹೊಂದಿದ ಬಳಿಕ ವೈಧವ್ಯವನ್ನು ಅನುಭವಿಸುತ್ತ ಕಾಲಹರಣ ಮಾಡುವದು ಎಂಥ ನೀಚತನವು! ಇದಲ್ಲದೆ, ಅನಾಥರಾದ ಅಬಲೆಯರನ್ನು ನಿನ್ನಂಥ ದುರ್ಜನರು ಇಚ್ಛಿಸುವದರಿಂದ ಪಾತಿವ್ರತ್ಯಕ್ಕೆ ತಪ್ಪದೆ ಭಂಗಬರುವದು. ಇಂಥ ನಿಂದ್ಯವಾದ ಜೀವನವು ಕಮಲಾಕ್ಷನ ವೀರಪತ್ನಿಯಾದ ಈ ಪದ್ಮನಯನೆಗೆ ಸಹನವಾಗುವದೇ? ನನ್ನ ಪತಿಯ ಮರಣವನ್ನು ಕೇಳಿ, ನಾನು ಅನ್ಯರ ಸಹಾಯದಿಂದ ಸೌಖ್ಯಹೊಂದಲಿಯಾ? ಇಂಥ ನಿನ್ನ ದುರ್ಭಾಷಣಗಳನ್ನು ಕೇಳುತ್ತ ಇಲ್ಲಿಯವರೆಗೆ ನಾನು ಬದುಕಿದ್ದದ್ದು, ನನ್ನ ಪೂರ್ವಾರ್ಜಿತ ಪಾಪದ ಫಲವಾಗಿದೆ. ಪತಿಯ ವಿಯೋಗದಿಂದ ಮಲಿನವಾದ ಈ ದೇಹವನ್ನು ಅಗ್ನಿಯಲ್ಲಿ ಈಡಾಡಿದ ಹೊರತು ಸಮಾಧಾನವಾಗದು. ಆದರೆ ಇನ್ನು ನೀನು ಇಲ್ಲಿ ಕುಳಿತುಕೊಳ್ಳಬೇಡ. ದುರ್ಮಾರ್ಗಿಗಳಾದ ನಿಮ್ಮಂಥವರ ದರ್ಶನವೇ ನಿಂದ್ಯವು. ನಿನ್ನ ಮಂದಿರಕ್ಕೆ ಹೋಗು, ಅನ್ನಲು ಜೀವನಕಲೆಯು ಪದ್ಮನಯನೆಯ ಪತಿಭಕ್ತಿಗೆ ಆಶ್ಚರ್ಯಪಡುತ್ತ, ಎರಡನೆಯ ಯಾವ ಮಾತನ್ನೂ ಆಡದೆ, ತನ್ನ ಮನಸ್ಸು ನೊಂದಂತೆ ತೋರಿಸಿ, ಅಲ್ಲಿಂದಹೊರಟು ತನ್ನ ಮಂದಿರಕ್ಕೆ ಬಂದಳು. ಆದರೆ ಈ ಪರಿ ಪದ್ಮನಯನೆಯ ಮನಸ್ಸನ್ನು ನೋಯಿಸಿದ್ದಕ್ಕಾಗಿ ಅವಳ ಜೀವಕ್ಕೆ ಸೊಗಸಾಗಲಿಲ್ಲ.

ಇತ್ತ ಪದ್ಮನಯನೆಯು, ಮನಮೋಹನನಿಂದ ತನಗೆ ತಿಳಿದ ಪತಿಯ ಮರಣದ ಸಂಗತಿಯನ್ನಷ್ಟೇ ಸಿಂಹಕೇತುವಿಗೆ ತಿಳಿಸಿ, ಸಹಗಮನಕ್ಕಾಗಿ ಅಪ್ಪಣೆಯನ್ನು ಕೇಳಿದಳು. ಆದರೆ ಸಿಂಹಕೇತುವು ಅದಕ್ಕೆ ಸಮ್ಮತಿಸದೆ—"ತಂಗೀ, ಪದ್ಮನಯನಾ, ನಿನ್ನ ವಿಚಾರವು ಪತಿಭಕ್ತಿಗೆ ತಕ್ಕದ್ದಾಗಿದ್ದರೂ, ಹಸುಗೂಸಾದ ಈ ವಿಕ್ರಮಾರ್ಕನನ್ನು ನೋಡಿದರೆ, ಅದು ಅಯೋಗ್ಯವಾಗಿ ತೋರುತ್ತದೆ. ನೀನು ಮೂರ್ಖತನದಿಂದ ಅಗ್ನಿಪ್ರವೇಶ ಮಾಡಿದರೆ ಅದರಿಂದಾಗುವ ಪ್ರಯೋಜನವಾದರೂ ಯಾವದು? ಮನುಷ್ಯರ ಬೇರೆ ಬೇರೆ ಕರ್ಮಗಳಿಗನುಸರಿಸಿ, ಅವರ ಪರಲೋಕದ ಹಾದಿಗಳು ಬೇರೆ ಬೇರೆ ಇರಲು, ನೀನು ನಿನ್ನ ಪತಿಯನ್ನು ಹಿಂಬಾಲಿಸುವದಂತೂ ದುಸ್ತರವೇ. ಅದೂ ಇರಲಿ; ಇದರಿಂದ ನಿನ್ನ ಪತಿಗಾದರೂ ಹಿತಮಾಡಿದಂತಾಗುವದೇನು? ಇಲ್ಲ. ನಿನ್ನ ದುಃಖಶಮನಕ್ಕೆ ಮಾತ್ರ ಪ್ರಾಣಕೊಟ್ಟಂತೆ ಆಗುವದು. ಜೀವದಿಂದ ಇದ್ದು, ತರ್ಪಣಾದಿಗಳಿಂದ ಪತಿಯನ್ನು ತೃಪ್ತಿಬಡಿಸುವದನ್ನು ಬಿಟ್ಟು, ಹುಚ್ಚಿಯಂತೆ ಇಂಥ ಸಾಹಸಕೃತ್ಯವನ್ನು ಮಾಡಬೇಡ. ಯಾಕೆ? ಕುಂತಿ, ಉತ್ತರೆ ಮೊದಲಾದ ಎಷ್ಟೋ ಸ್ತ್ರೀಯರು ತಮ್ಮ ಪತಿಯ ಮರಣಕ್ಕಾಗಿ ಪ್ರಾಣಕೊಟ್ಟರೇನು? ಈ ತರದ ಸ್ವಾರ್ಥಪರವಾದ ಕೃತ್ಯವನ್ನು ಮಾಡುವದು ನಿನ್ನಂಥ ಸುಜ್ಞಳಿಗೆ ಯೋಗ್ಯವಲ್ಲ. ಇದಲ್ಲದೆ ನಿನ್ನ ತಂದೆಗೆ, ನೀನು ಇಲ್ಲಿ ಇರುವ ವರ್ತಮಾನವನ್ನು ತಿಳಿಸಿರುತ್ತೇನೆ. ಅತ್ತಕಡೆಯ ಯಾವದೊಂದು ವರ್ತಮಾನವು ತಿಳಿದ ಹೊರತು ಹಾರಿಕೆಯ ವರ್ತಮಾನದಿಂದ ಇಂಥ ಸಾಹಸಕೃತ್ಯ ಮಾಡುವದು ತಕ್ಕದ್ದಲ್ಲ," ಎಂದು ಉಪದೇಶ ಮಾಡುತ್ತಿರಲು, ಮಂಜುಘೋಷೆಯು ತನ್ನ ಗೆಳತಿಯಾದ ಪದ್ಮನಯನೆಯು ಅಗ್ನಿಪ್ರವೇಶಮಾಡುವಳೆಂಬದನ್ನು ಕೇಳಿ ದುಃಖದಿಂದ ಅವಳೆಡೆಗೆ ಬಂದಳು. ಪದ್ಮನಯನೆಯು ಮಂಜುಘೋಷೆಯನ್ನು ನೋಡಿ ದೊಡ್ಡ ಧ್ವನಿಯಿಂದ ಅಳುತ್ತ—"ಮಂಜುಘೋಷೇ, ಈ ಚಾಂಡಾಲೆಯ ಮುಖವು ನಿಮ್ಮಂಥ ಸುಮಂಗಲೆಯರಿಗೆ ನೋಡಲಿಕ್ಕೆ ಅಯೋಗ್ಯವಾಯಿತು. ಅಂದ ಬಳಿಕ ಅದನ್ನು ಸುಡದೆ ಬಿಡುವದು ಯೋಗ್ಯವೆ? ಈ ವಿಕ್ರಮಾರ್ಕನು ನನ್ನ ಮಗನಲ್ಲ, ನಿನ್ನ ಮಗನೆಂದು ತಿಳಿದು ಜೋಕೆಮಾಡು, ಎಂದು ಹೇಳಿ, ಮಂಜುಘೋಷೆಯನ್ನು ಬಿಗಿಯಾಗಿ ಅಪ್ಪಿಕೊಂಡಳು. ಮಂಜುಘೋಷೆಯು ದುಃಖದಿಂದ ಕಣ್ಣೀರು ಸುರಿಸುತ್ತ ಪದ್ಮನಯನೆಗೆ ಸಹಗಮನ ಮಾಡಬೇ

ಬೆಂದು ಹಲವು ಬಗೆಯಾಗಿ ಹೇಳಿದಳು. ಆದರೂ ಆಕೆಯ ಮನಸ್ಸು ತಿರುಗ ಪ್ಪದನ್ನು ನೋಡಿ ಸಿಂಹಕೇತುವು ನಿರುಪಾಯನಾಗಿ ಧರ್ಮಸಮ್ಮತವೂ, ಪರಂಪ ರಾಗತವೂ ಆದ ಪದ್ಮನಯನೆಯ ವಿಚಾರಕ್ಕೆ ಒಡಂಬಟ್ಟನು.

ಮುಂದೆ ಕೆಲವು ಹೊತ್ತಿನ ಮೇಲೆ ಸಿಂಹಕೇತುವಿನ ಅಪ್ಪಣೆಯಿಂದ ಚಿತೆ ಯುಸಿದ್ಧವಾಯಿತು. ಪದ್ಮನಯನೆಯುಳಿಸಂಪದದಿಂದ ಅದರಕಡೆಗೆ ಹೋದಳು. ಆಗ್ಗೆ ಆಬಾಲವೃದ್ಧರು ಪದ್ಮನಯನೆಯ ಸ್ಥಿತಿಯನ್ನು ನೋಡಿ, ಅವಳ ಸುಗುಣ ಗಳಿಗಾಗಿಯೂ, ಔದಾರ್ಯಕ್ಕಾಗಿಯೂ ಮರಮರನೆ ಮರುಗಿದರು. ಆದರೆ ಅವಳ ಪತಿಭಕ್ತಿಗಾಗಿ ಜನರು ಮಾಡುವ ಅವಳ ಸ್ತೋತ್ರದಿಂದ, ಪದ್ಮನಯನೆ ಯಂಥ ಪತಿವ್ರತೆಯರ ಅಂತಃಕರಣಗಳು ಸಾಫಲ್ಯವನ್ನು ಹೊಂದಿ, ಅವರ ಕಣ್ಣುಗಳೊಳಗಿಂದ ಆನಂದಾಶ್ರುಗಳು ಉದುರಹತ್ತಿದವು. ಆಗ ವಿಕ್ರಮಾರ್ಕನು ಮುದ್ದು ಮಾತುಗಳನ್ನಾಡುತ್ತ ತಾಯಿಯ ಬಳಿಗೆ ಹೋದನು. ಅವನು ತಾಯಿ ಯಉದಾಸೀನವೃತ್ತಿಯನ್ನು ನೋಡಿ, ಅಳುವ ಮೋರೆಮಾಡಿ—“ ಅವ್ವಾ, ಹಿಂದ ಕ್ಕೆಸರಿಯೇ. ಬೆಂಕಿ ಸುಟ್ಟೀತು; ಬಾ, ಮನೆಗೆ ಹೋಗೋಣ. ಮಾವನು ಯಾಕೆ ಅಳುತ್ತಾನೆ? ನೀನು ಮನೆಗೆ ಬರದಿದ್ದರೆ ನಾನು ಉಣ್ಣುವದೇ ಇಲ್ಲ. ನೀನು ಈವೊತ್ತು ಹಣೆಯತುಂಬ ಕುಂಕುಮ ಯಾಕೆ ಹಚ್ಚಿಕೊಂಡಿರುವೆ? ಇವರೆಲ್ಲರೂ ನಿನ್ನನ್ನು ಇಷ್ಟೇಕೆ ನೋಡುತ್ತಾರೆ? ನನ್ನನ್ನು ಎತ್ತಿಕೊ. ಹೀಗೆ ಮಾಡಿದರೆ ನಾನು ನಿನಗೆ ಮುದ್ದು ಕೊಡುವದಿಲ್ಲ ನೋಡು” ಎಂದು ಪದ್ಮನಯನೆಯ ಸೆರ ಗನ್ನು ಹಿಡಿದು ಜಗ್ಗಹತ್ತಿದನು. ಈ ಅನರ್ಥವನ್ನು ನೋಡಿ ಮಕ್ಕಳೊಂದಿಗರು ಘೋಳೆಂದು ಅತ್ತರು. ಮಿತಿಮೀರಿದ ಪುತ್ರವಾತ್ಸಲ್ಯವುಳ್ಳ ಪದ್ಮನಯನೆಯು ಮಗನ ಮಾತುಗಳನ್ನು ಕೇಳಿ ಕಣ್ಣೀರು ಸುರಿಸುತ್ತ —“ ಬಾಳಾ, ವಿಕ್ರ ಮಾರ್ಕಾ, ಅಲ್ಲಿ ಮಾವನ ಹತ್ತರ ಹೋಗು. ಆತನು ನಿನ್ನನ್ನು ಯಾವ ಕೊರ ತೆಯೂ ಬಾರದ ಹಾಗೆ ರಕ್ಷಿಸುತ್ತಾನೆ. ನಾನು ನಿನ್ನ ತಾಯಿಯಾಗಿದ್ದರೆ ನಿನಗೆ ಇಷ್ಟು ದುಃಖ ಕೊಡುತ್ತಿದ್ದಿಲ್ಲ.” ಎಂದು ವಿಕ್ರಮಾರ್ಕನನ್ನು ಎದೆಗೆ ಅವಚಿ ಕೊಂಡು ದೊಡ್ಡ ಧ್ವನಿಯಿಂದ ಅಳುತ್ತ—“ ಅಪ್ಪಾ ವಿಕ್ರಮಾ, ಇನ್ನೊಮ್ಮೆ ನನಗೆ ನಿನ್ನ ಮುದ್ದು ಮೋರೆಯನ್ನು ತೋರಿಸು; ಸ್ವಲ್ಪ ಹೊತ್ತಿನಲ್ಲಿಯೇ ನಿನ್ನ ನ್ನಗಲಿ, ನಾನು ಪರಲೋಕಕ್ಕೆ ಹೋಗುತ್ತೇನೆ. ಅಣ್ಣಾ, ಸಿಂಹಕೇತೂ, ನಿನ್ನ ಅಳಿಯ್ಯನನ್ನು ಕರೆದುಕೊ: ಹಲವು ಪರಿಯಿಂದ ನನ್ನನ್ನು ನೀನು ಇಲ್ಲಿಯವೆ

ಶೆಗೆ ಜೋಪಾನ ಮಾಡಿದೆ. ಇನ್ನು ಮೇಲೆ ನನ್ನ ಮಗನೊಬ್ಬನನ್ನೇ ನಿನ್ನ
ಕೈಯಲ್ಲಿ ಕೊಡುತ್ತೇನೆ. ಅವನ ರಕ್ಷಣ ಮಾಡತಕ್ಕ ಭಾರವು ನಿನ್ನನ್ನೇ ಕೂಡಿ
ಯದೆ." ಎಂದು ವಿಕ್ರಮಾರ್ಕನನ್ನು ಜುಲುಮೆಯಿಂದ ಸಿಂಹಕೇತುವಿನ ಕೈಯಲ್ಲಿ
ಕೊಟ್ಟಳು. ಆಗ ವಿಕ್ರಮಾರ್ಕನು ದೊಡ್ಡ ಧ್ವನಿಯಿಂದ ಬಿಕ್ಕಿ ಬಿಕ್ಕಿ ಅಳುತ್ತ-
" ಮಾಮಾ, ಬಿಡೊ; ನಾನೂ ಅಪ್ಪನ ಸಂಗಡ ಪರಲೋಕಕ್ಕೆ ಹೋಗುತ್ತೇನೆ.
ನಾನು ಬಹಳ ದಿವಸ ಹೋಗದೆ, ಬೇಗನೆ ಅಪ್ಪನನ್ನು ಕರಕೊಂಡು ನಿನ್ನ ಹತ್ತರ
ಬರುವೆನು. ನಾನು ಪರಲೋಕವನ್ನು ನೋಡಿಲ್ಲ. " ಎಂದು ಕೈಕಾಲುಗಳನ್ನು
ಜಾಡಿಸುತ್ತ, ಸಿಂಹಕೇತುವಿನ ಕೈಯಿಂದ ಕೊಸರಿ ಹೋಗುವದಕ್ಕೆ ಪ್ರಯತ್ನ
ಮಾಡಹತ್ತಿದನು. ಆಗ ಆ ಕೂಸಿನ ಮಾತುಗಳನ್ನು ಕೇಳಿ ನಿಂತವರ ಕಣ್ಣುಗ
ಳಿಂದ ನೀರುಗಳು ತಾವೇ ಹೋಗಹತ್ತಿದವು.

ಇತ್ತ ಜೀವನಕಲೆಯು ತನ್ನ ಮನೆಗೆ ಹೋಗಿ, ಪದ್ಮನಯನೆಯು ಪತಿ
ವ್ರತಾ ಶಿಖಾಮಣಿಯೆಂತಲೂ, ಸಿಂಹಕೇತುವು ಪಾಪಭೀರುವೆಂತಲೂ ಮನ
ಗಂಡು, ತನ್ನ ಪುರುಷವೇಷವನ್ನು ಬಿಟ್ಟು, ನಿಜವಾದ ತನ್ನ ಸ್ತ್ರೀರೂಪದಿಂ
ದಲೇ ಪದ್ಮನಯನೆಯನ್ನು ಕಾಣುವದಕ್ಕಾಗಿ ಹೊರಟಳು. ಆದರೆ ಪದ್ಮನಯ
ನೆಯು ಸಹಗಮನಕ್ಕೆ ಸಿದ್ಧಳಾಗಿರುವಳೆಂಬದನ್ನು ತಿಳಿದು, ಆಕೆಯು ಗಾಬರಿ
ಯಾಗಿ, ತನ್ನ ಮೂರ್ಖತನವನ್ನು ಹಳಿದುಕೊಳ್ಳುತ್ತ, ಪದ್ಮನಯನೆಯು
ಅಗ್ನಿಪ್ರವೇಶ ಮಾಡುತ್ತಿರುವಲ್ಲಿಗೆ ಲಗಬಗೆಯಿಂದ ಬಂದಳು.ಆಗ ಪದ್ಮನಯ
ನೆಯು ಗಂಡುಗಚ್ಚೆಯನ್ನು ಹಾಕಿ, ಅಗ್ನಿಗೆ ಮೂರುಸಾರೆ ಪ್ರದಕ್ಷಿಣೆ ಮಾಡಿ
ದೀನಮುದ್ರೆಯಿಂದ ಆಕಾಶದ ಕಡೆಗೆ ಮುಖವೆತ್ತಿ—ಪರಮೇಶ್ವರಾ, ನಾನು
ನಿನಗೆ ಮೊರೆಹೊಕ್ಕಿದ್ದೇನೆ. ಪರಲೋಕದಲ್ಲಾದರೂ ನನಗೆ ನನ್ನ ಪತಿಯದ
ರ್ಶನಮಾಡಿಸು. ಅನಾಥರಕ್ಷಕನೆಂಬ ಬಿರುದು ನಿನಗಿದ್ದದ್ದರಿಂದ, ನನ್ನ ಕೂಸಿನ
ಚಿಂತೆಯು ನನಗಿಲ್ಲ. ನಿನಗೆ ಸೆರಗೊಡ್ಡಿ ಬೇಡಿಕೊಳ್ಳುವದೇನಂದರೆ, ಅನಿಮಿತ್ತ
ಬಾಂಧವನಾದ ಈ ಸಿಂಹಕೇತುರಾಜನಿಗೆ ಕಲ್ಯಾಣಮಾಡಿ, ಜನ್ಮ—ಜನ್ಮಾಂತರ
ದಲ್ಲಾದರೂ ಕಮಲಾಕ್ಷ ಪ್ರಭುವೇ ನನಗೆ ಪತಿಯಾಗುವಂತೆ ಅನುಗ್ರಹಿಸು."
ಎಂದು ಪ್ರಾರ್ಥಿಸಿ, ಅಗ್ನಿಯಲ್ಲಿ ಹಾರಿಕೊಳ್ಳುವ ಸಂಧಿಯಲ್ಲಿ, ಜೀವನಕಲೆಯು
ಓಡುತ್ತ ಬಂದು, ಪದ್ಮನಯನೆಯ ಕೈಯನ್ನು ಹಿಡಿದು— " ಪೂಜ್ಯಳಾದ
ನನ್ನ ಸಖಿಯೇ, ನಿಲ್ಲು; ಇಂಥ ಸಾಹಸಕೃತ್ಯವನ್ನು ಮಾಡಬೇಡ. ನಿನ್ನ ಬಾಲ

ಸಖಿಯೂ, ದೇವದತ್ತನ ಪುತ್ರಿಯೂ ಆದ ಜೀವನಕಲೆಯು ನಿನ್ನ ಕೈ ಹಿಡಿ ದಿರುವಳೆಂದು ತಿಳಿ. ನಿನ್ನ ಪಾತಿವ್ರತ್ಯದ ಕೀರ್ತಿಯು ಜಗತ್ತಿನಲ್ಲಿ ಸ್ಥಿರವಾಗಿ ನಿಲ್ಲುವದು. ನನ್ನ ಸಂಗತಿಯನ್ನು ಪೂರ್ಣವಾಗಿ ತಿಳಕೊಂಡ ಬಳಿಕ, ನಿನ್ನ ಮನಸ್ಸಿಗೆ ಬಂದಂತೆ ಮಾಡು. ಅಲ್ಲಿಯ ವರೆಗೆ ಮಾತ್ರ ನಿನ್ನ ಶರೀರವನ್ನು ಅಗ್ನಿಗೆ ಆಹುತಿಯಾಗಮಾಡಬೇಡ." ಎಂದು ನುಡಿಯುತ್ತಿರಲು, ನೆರೆದವರಿ ಗೆಲ್ಲ ಬಹಳ ಆಶ್ಚರ್ಯವಾದದ್ದಲ್ಲದೆ, ಅವಳ ಮಾತುಗಳನ್ನು ಕೇಳಿ, ಅವರು ಸಮಾ ಧಾನಪಟ್ಟರು. ಪದ್ಮನಯನೆಯು ಜೀವನಕಲೆಯನ್ನು ದಿಟ್ಟಿಸಿ ನೋಡಿ, ಇವಳು ತನ್ನ ಬಾಲಸಖಿಯಾದ ಮಂತ್ರಿ ಪುತ್ರಿ ಎಂದು ನಿಶ್ಚಯಿಸಿ ಅವಳನ್ನು ಬಿಗಿಯಾ ಗಿ ಅಪ್ಪಿಕೊಂಡಳು. ಬಹು ದಿನ ಬಳಗದವರ ವಾರ್ತೆಯರಿಯದ ಪದ್ಮನಯನೆಗೆ ಜೀವನಕಲೆಯ ದರ್ಶನದಿಂದ ಸಮಾಧಾನವಾಯಿತು. ಆಗ ಪದ್ಮನಯನೆಯು ದುಃಖದಿಂದ—"ಜೀವನಕಲಾ, ನನ್ನ ಪ್ರಾಣದೊಡೆಯರಾದ ಕಮಲಾಕ್ಷ ಪ್ರಭುಗಳು ಮರಣಹೊಂದಿದರೆಂಬ ಅಮಂಗಲವಾದ ವರ್ತಮಾನವು ಈಪೊತ್ತು ನನಗೆ ಗೊತ್ತಾದದ್ದರಿಂದ, ನಾನು ಅಗ್ನಿಪ್ರವೇಶ ಮಾಡತೊಡಗಿರುವೆನು. ಈ ಸಂಬಂಧದಿಂದ ನಿನಗೇನಾದರೂ ವರ್ತಮಾನವಿರುವದೋ?" ಅನ್ನಲು, ಜೀವನ ಕಲೆಯು—"ರಾಜಪುತ್ರೀ, ಕಮಲಾಕ್ಷ ಪ್ರಭುಗಳು ಮರಣ ಹೊಂದಿದ್ದು ನಿಜ ವಲ್ಲ. ಅವರಿಗೆ ಅಖಂಡವಾದ ಆಯುಷ್ಯವನ್ನು ಕೊಡುವದಕ್ಕಾಗಿ ನಾನು ದೇವ ರನ್ನು ಪ್ರಾರ್ಥಿಸುತ್ತೇನೆ. ಅವರ ಸಂಬಂಧದ ಪೂರ್ಣವಾದ ಸಂಗತಿಯು ನನಗೆ ಗೊತ್ತಿದೆ; ನಿನ್ನ ಮನಸ್ಸಿನ ದುಗುಡನ್ನು ಬಿಟ್ಟು, ನನ್ನ ಮಾತನ್ನು ನಂಬು" ಅನ್ನಲು, ಪದ್ಮನಯನೆಯ ದೇಹದಲ್ಲಿ ಪ್ರಾಣಪ್ರತಿಷ್ಠಾಪನೆಯಾದಂತಾಗಿ ಆಕೆಯು ಅಗ್ನಿಪ್ರವೇಶ ಮಾಡುವದನ್ನು ಬಿಟ್ಟು, ಸಿಂಹಕೇತುವಿನೊಡನೆ ವಿಕ್ರ ಮಾರ್ಕನನ್ನು ಕೂಡಿಕೊಂಡು ಅರಮನೆಗೆ ತಲುಪಿದಳು.

---

## ೧೭ನೆಯ ಪ್ರಕರಣ.

## ಸುಖಸಾಮ್ರಾಜ್ಯ.

ಇತ್ತ ಜೀವನಕಲೆಯ ಅಪ್ಪಣೆಯಂತೆ, ಅವಳ ಸೈನಿಕರೆಲ್ಲರೂ ಹೊಸ ಪೋಷಾಕಿನಿಂದ ಮೆರೆಯುತ್ತ, "ತಾವು ಕನೋಜದ ರಾಜನಾದ ವೀರವ

ರ್ಮನ ಸೈನಿಕರಿಷ್ಟು, ಪದ್ಮನಯನಾದೇವಿಯನ್ನು ಕರೆಯಲಿಕ್ಕೆ ಬಂದಿರುವೆವೆಂದು ಹೇಳಹತ್ತಿದರು. ಇದನ್ನು ನೋಡಿ ಸಿಂಹಕೇತುವಿಗೂ ಪದ್ಮನಯನೆಗೂ ಬಹಳ ಸಂತೋಷವಾಯಿತು. ಮದನಮೋಹನನು ತನ್ನ ನೀಚಕೃತ್ಯಕ್ಕಾಗಿ ಭಯಪಟ್ಟು, ತನ್ನ ಸೈನ್ಯದೊಡನೆ ಓಡಿಹೋದನೆಂದು ಪದ್ಮನಯನೆಯೂ, ಸಿಂಹಕೇತುವೂ ತಿಳಿದರಲ್ಲದೆ, ಇದೆಲ್ಲ ಜೀವನಕಲೆಯ ತಂತ್ರವೆಂಬುದು ಅವರ ಸ್ವಪ್ನದಲ್ಲಿ ಸಹ ಬರಲಿಲ್ಲ. ಇದು ಜೀವನಕಲೆಯ ಧೈರ್ಯ—ಚಾತುರ್ಯಗಳ ಪರಿಣಾಮವೆಂದು ಹೇಳಬಹುದು. ಜೀವನಕಲೆಯು ಏಕಾಂತದಲ್ಲಿ ಪದ್ಮನಯನೆಗೆ ತನ್ನ ಯಾವತ್ತೂ ನಿಜವಾದ ವರ್ತಮಾನವನ್ನು ತಿಳಿಸಿ, ಸುಮದಳೆಂದರೆ—" ಸಖೀ, ಪರಗೃಹವಾಸದೋಷವು, ಸೀತೆಯಂಥ ಪತಿವ್ರತೆಯನ್ನು ಸಹ ಬಿಟ್ಟಿಲ್ಲ. ಆದರಿಂದ ನಿನ್ನ ಸದ್ವರ್ತನವೂ, ಪಾತಿವ್ರತ್ಯವೂ ಜನರಿಗೂ, ದೈವಯೋಗದಿಂದ ಕಮಲಾಕ್ಷ ಪ್ರಭುಗಳ ಸಂದರ್ಶನವಾದಲ್ಲಿ ಅವರಿಗೂ ತಿಳಿಯಲೆಂಬ ಉದ್ದೇಶದಿಂದ ಈ ಮೋಸವನ್ನು ಮಾಡಿದೆನು. ಈ ತಪ್ಪಿಗಾಗಿ ನನ್ನನ್ನು ಕ್ಷಮಿಸು" ಎಂದು ಅನ್ನಲು, ಪದ್ಮನಯನೆಯು ಜೀವನಕಲೆಯ ಮಾತುಗಳನ್ನು ಕೇಳಿ ಸಮಾಧಾನ ತಾಳಿ—" ಮಂತ್ರಿಪುತ್ರೀ, ಕ್ಷಮಿಸೆಂದು ನನ್ನನ್ನು ಪ್ರಾರ್ಥಿಸುವಂಥ ತಪ್ಪೇನೂ ನಿನ್ನಿಂದ ಆಗಿಲ್ಲ. ವಿಚಾರಮಾಡಿದರೆ, ಈಗಿನ ನನ್ನ ಸ್ಥಿತಿಗೆ ನೀನು ಮಾಡಿದ ಯುಕ್ತಿಯು ಹಿತಕರವೆಂದು ನನಗೆ ತೋರುತ್ತದೆ. ಬಹಿರಂಗವನ್ನಲ್ಲದೆ ಅಂತರಂಗವನ್ನು ತಿಳಿಯಲು ಜನರು ಸಮರ್ಥರಲ್ಲ. ಇರಲಿ, ನನ್ನ ಪತಿಯೇ ನಿನ್ನ ಪತಿಯಾದ್ದರಿಂದ, ನಮ್ಮಿಬ್ಬರ ವಿಯೋಗವಾಗುವ ಸಂಭವವು ಇಲ್ಲವೇ ಇಲ್ಲ. ಆದರೆ ಆ ಸುಯೋಗವನ್ನು ಕಾಣಬೇಕಾದರೆ, ಕಮಲಾಕ್ಷಪ್ರಭುಗಳ ಶೋಧವಾಗಬೇಕಷ್ಟೆ? ನಿನ್ನ ವಿಚಾರದಂತೆ ನನ್ನ ತಂದೆಯಾದ ವೀರವರ್ಮನ ದರ್ಶನಕ್ಕಾಗಿ ಕನೋಜಪಟ್ಟಣಕ್ಕೆ ನಾನು ಬರುತ್ತೇನೆ. ವೃದ್ಧರಾದ ನನ್ನ ತಾಯಿ-ತಂದೆಗಳ ದುಃಖವನ್ನು ದೂರಮಾಡುವದು ನನ್ನ ಕರ್ತವ್ಯವಾಗಿದೆ" ಎಂದು ಹೇಳಿ, ಪದ್ಮನಯನೆಯು ಸಿಂಹಕೇತುವಿನ ಅಪ್ಪಣೆಯನ್ನು ಪಡೆದು ವಿಕ್ರಮಾರ್ಕನೊಡನೆ ತಂದೆಯನ್ನು ಕಾಣುವದಕ್ಕಾಗಿ ಕನೋಜಪಟ್ಟಣಕ್ಕೆ ಹೊರಟಳು. ಮಂಜುಘೋಷೆಗೂ, ಸಿಂಹಕೇತುವಿಗೂ ಪದ್ಮನಯನೆಯ ವಿಯೋಗವಾಗುವದೆಂದು ಬಹಳ ವ್ಯಸನವಾಯಿತು. ಜೀವನಕಲೆಯೂ, ಪದ್ಮ

ನಯನೆಯೂ ಪುರುಷವೇಷವನ್ನು ಧರಿಸಿ, ತಮ್ಮ ಸೈನ್ಯವನ್ನೂ, ಸಿಂಹಕೇತುವು ಸಹಾಯಾರ್ಥವಾಗಿ ಕೊಟ್ಟಿದ್ದ ಸೈನ್ಯವನ್ನೂ ಕೂಡಿಕೊಂಡು ಮಧುರಾ ಪಟ್ಟಣದಿಂದ ಮುಂದಕ್ಕೆ ಸಾಗಿದರು.

ಈ ಪ್ರಕಾರ ಇವರು ಮಾರ್ಗಕ್ರಮಣಮಾಡುತ್ತಿರಲು, ಇತ್ತ ಸುವರ್ಣಪುರದಲ್ಲಿ ಕಮಲಾಕ್ಷನ ವ್ಯವಸ್ಥೆಯು ಏನಾಯಿತೆಂಬದನ್ನು ವಿಚಾರಿಸುವಾ. ಸುಮತಿಯ ವನಸ್ಪತಿಗಳ ಸಾಮರ್ಥ್ಯದಿಂದ ಆವನ ಗಾಯಗಳು ಮಾಯುತ್ತ ಹೋಗಿ, ಸ್ವಲ್ಪ ದಿನಗಳಲ್ಲಿಯೇ ಅವನು ಮೊದಲಿನಂತೆ ಆದನು. ಒಂದುದಿನಕಮಲಾಕ್ಷನು ಸುಮತಿಯನ್ನು ಕುರಿತು—"ಮಿತ್ರಾ ಸುಮತಿ, ನೀನು ಯಶೋದೆಯ ಪಾಣಿಗ್ರಹಣಮಾಡಿ, ಆಕೆಯ ತಾಯಿತಂದೆಗಳನ್ನು ಸಂತೋಷಪಡಿಸಬೇಕೆಂದು ಕೇಳಿಕೊಳ್ಳುವೆನು." ಅನ್ನಲು, ಸುಮತಿಯು —ಮಿತ್ರಾ, ನಿನ್ನ ಮಾತು ಅಯೋಗ್ಯವಾದದ್ದಲ್ಲ. ಗೃಹಸ್ಥಾಶ್ರಮವುಧನ್ಯವಾದದ್ದೆಂದು ದೊಡ್ಡವರು ಹೇಳುತ್ತಾರೆ ಆ ಆಶ್ರಮವು ಪರೋಪಕಾರಕ್ಕೆ ಬಹುಅನುಕೂಲವಾದದ್ದು. ಮನುಷ್ಯನ ನಿಜವಾದ ಉನ್ನತಿಯು ಗೃಹಸ್ಥಾಶ್ರಮದಿಂದಲೇಆಗುವದೆಂದು ಹೇಳಬಹುದು. ಮನಸ್ಸಿನ ಶುದ್ಧೀಕರಣಕ್ಕೂ, ಸತ್ವಪರೀಕ್ಷೆಗೂ ಇದೇಆಶ್ರಮವು ತಕ್ಕದ್ದು. ನ್ಯಾಯ ನೀತಿಗಳು ಈ ಆಶ್ರಮದಲ್ಲಿಯೇ ವಿಶೇಷವಾಗಿ ತೋರುವವು. ನಿಜವಾದ ಸಂಸಾರಪರಮಾರ್ಥಗಳೆರಡೂಒಂದೇ ಎಂದು ತೋರಿಸುವವರು ಈ ಆಶ್ರಮವನ್ನು ಅಂಗೀಕರಿಸಬೇಕಾಗುವದು. ಹೃದಯವು ಕೋಮಲವಾಗಲಿಕ್ಕೆ ಇದರಷ್ಟು ಅನುಕೂಲವಾದ ಬೇರೊಂದು ಆಶ್ರಮವಿಲ್ಲ. ಅಂದಬಳಿಕ ನಾನು ನಿನ್ನ ಮಾತನ್ನು ಹೇಗೆ ನಿರಾಕರಿಸಲಿ? ಆದರೆ ಪದ್ಮನಯನೆಯ ಶೋಧವಾದ ಹೊರತು ನಾನು ವಿವಾಹಕ್ಕೆ ಸಮ್ಮತಿಸುವ ಹಾಗಿಲ್ಲ. ದೇವರ ದಯದಿಂದ ಇಂದೇ ಪದ್ಮನಯನೆಯ ಶೋಧವಾದರೆ, ನಾಳೆ ಈ ಯಶೋದೆಯ ಪಾಣಿಗ್ರಹಣವನ್ನು ಆನಂದದಿಂದ ಮಾಡುವೆನು. ಸರೋವರದಲ್ಲಿ ಮುಳುಗಿದ ನಾನು ಮೊಸಳೆಯಿಂದ ಎಳೆಯಲ್ಪಟ್ಟವನಾಗಿ ಬಹಳ ಕಷ್ಟಪಟ್ಟೆನು. ನನ್ನ ಮೈಮೇಲಿನ ಎಚ್ಚರವು ತಪ್ಪಿದಂತಾಗಿರಲು, ಯಾರೋ ನನ್ನನ್ನು ದಂಡೆಗೆ ತಂದು ಚಲ್ಲಿದಂತಾಯಿತು! ನೀನೂ ನನ್ನನ್ನು ಅಗಲಿ ಹೋದದ್ದರಿಂದ ನನಗೆ ಬಹಳ ದುಃಖವಾಯಿತು. ಕಡೆಗೆ ನಾನು ಯಾವತ್ತೂ ಸುಖಗಳನ್ನು ತ್ಯಜಿಸಿ ವಿರಕ್ತನಾಗಿ, ದೇಶ ದೇಶಗಳನ್ನು ತಿರುಗುತ್ತ ನಿರಾಶ್ರಿ

ತನಾಗಿ ಹೊಂದಿ, ಕನೋಜರಾಜ್ಯದ ಉಕ್ಕಡವಾದ ಈ ಸುವರ್ಣಪುರದಲ್ಲಿ ವಾಸಮಾಡಿದೆನು. ಕನೋಜರಾಜ್ಯಕ್ಕೆ ಹೋಗುವವರು ಬಹುತರವಾಗಿ ಈ ಪಟ್ಟಣದಲ್ಲಿ ವಸ್ತಿಯನ್ನು ಮಾಡುವರು. ಈ ಗ್ರಾಮದ ಪುಣ್ಯದಿಂದ ನಿನ್ನ ಬೋಧವಾದದ್ದರಿಂದ, ನನಗೆ ಕೆಲಮಟ್ಟಿಗೆ ಆನಂದವಾಗಿದೆ. ಗುರುವಿನ ಪಾದಾನುಗ್ರಹದಿಂದ ಸ್ವಲ್ಪ ದಿನಗಳಲ್ಲಿಯೇ ಪದ್ಮನಯನೆಯ ಬೋಧವಾಗಬಹುದು. ಆಮೇಲೆ ಯಾವ ಸುಖೋಪಭೋಗಕ್ಕೂ ವಿಘ್ನವಿಲ್ಲ. " ಎಂದು ಹೇಳಲು, ಕಮಲಾಕ್ಷನು ನಿರುಪಾಯನಾಗಿ ಸುಮ್ಮನಾದನು.

ಹೀಗೆ ಇರಇರುತ್ತ, ಒಂದುದಿನ ಕಮಲಾಕ್ಷನು ಇಳಿಹೊತ್ತಿನಲ್ಲಿ ವಸ್ತ್ರಾಲಂಕಾರಗಳಿಂದ ಅಲಂಕೃತನಾಗಿ, ಕುದುರೆಯನ್ನೇರಿ ವ್ಯಾಯಾಮ ಮಾಡುವದಕ್ಕಾಗಿ ನಿತ್ಯಕ್ರಮದಂತೆ ಊರಹೊರಗೆ ಹೋದನು. ಅವನು ಕೆಲವು ಅಂತರವನ್ನು ಕ್ರಮಿಸಿ ಹೋದಮೇಲೆ ಒಂದು ಮರದ ಕೆಳಗೆ, ಮಾರ್ಗಶ್ರಮವನ್ನು ಕಳೆದುಕೊಳ್ಳುತ್ತ ಕುಳಿತಿರುವ ಇಬ್ಬರು ಚಲುವರಾದ ಪುರುಷರನ್ನು ನೋಡಿದನು. ಅವರ ಬಳಿಯಲ್ಲಿ ಲಾವಣ್ಯಯುಕ್ತನಾದ ಒಬ್ಬ ಹುಡುಗನು ಆಡುತ್ತಿದ್ದನು. ಆ ಹುಡುಗನ ಚಾಪಲ್ಯಕ್ಕೂ, ಚಲ್ವಿಕೆಗೂ ಕಮಲಾಕ್ಷನು ಬೆರಗಾದದ್ದಲ್ಲದೆ, ಅವನನ್ನು ಅಪ್ಪಿಕೊಳ್ಳುವ ಇಚ್ಛೆಯು ಕಮಲಾಕ್ಷನಿಗಾಯಿತು. ಕಾರಣ ಅವನು ಮುಂದಕ್ಕೆ ಒಂದು ಹೆಜ್ಜೆಯನ್ನು ಸಹ ಇಡದೆ, ಅಲ್ಲಿಯೇ ಕುದುರೆಯನ್ನಿಳಿದು, ಮರದಕೆಳಗೆ ಕುಳಿತಿರುವ ಪುರುಷರನ್ನು ತನ್ನ ಪ್ರಾಣಪ್ರಿಯರಾದ ಪದ್ಮನಯನಾ-ಜೀವನಕಲೆಯರೆಂದು ತಿಳಿಯದೆ, ನಿಜವಾದಪುರುಷರೇ ಎಂದು ತಿಳಿದು, ಮರ್ಯಾದಾರ್ಥವಾಗಿ ತಲೆವಾಗಿ ಅವರಿಗೆ ನಮಸ್ಕಾರ ಮಾಡಿದನು. ಪತಿವ್ರತಾಶಿರೋಮಣಿಗಳಾದ ಪದ್ಮನಯನಾ-ಜೀವನಕಲೆಯರು, ಕಮಲಾಕ್ಷನ ಹತ್ತರ ಬಂದಕೂಡಲೆ, ತಮ್ಮ ತೀಕ್ಷ್ಣವಾದ ಬುದ್ಧಿಸಾಮರ್ಥ್ಯದಿಂದ ಅವನನ್ನು ತಮ್ಮ ಪತಿಯೆಂದು ಕೂಡಲೆ ಗೊತ್ತುಹಿಡಿದರು. ಆಗ ಅವರಿಗಾದ ಆನಂದವನ್ನು ಯಾರು ವರ್ಣಿಸುವರು!! ಆನಂದದ ಭರದಲ್ಲಿ ಅವರಿಗೆ ತಮ್ಮ ಪತಿಯನ್ನು ಅಪ್ಪಿಕೊಳ್ಳುವ ಕುತೂಹಲವು ಉತ್ಪನ್ನವಾಯಿತು. ಆದರೆ ಮನೋನಿಗ್ರಹಧುರೀಣರಾದುದರಿಂದ, ಅವರು ಹಾಗೆ ಮಾಡದೆ, ತಮ್ಮ ಮನಸ್ಸನ್ನು ಬಿಗಿ ಹಿಡಿದರು. ಸಂತೋಷದಿಂದ ಅವರ ಮೈಮೇಲಿನ ಕೂದಲುಗಳು ನೆಟ್ಟಗಾದವು; ಆನಂದಬಾಷ್ಪಗಳು ಉದುರಹತ್ತಿದವು; ಪ್ರಿಯನ

ಮುಖಾವಲೋಕನದಿಂದ ಅವರ ಹೊಟ್ಟೆಯೊಳಗಿನ ದುಃಖವು ಪ್ರಕಟವಾಗಹತ್ತಿತು. ಆದರೂ ಅವರು ಬಹು ಪ್ರಯಾಸದಿಂದ ತಮ್ಮ ಮನೋಭಾವಗಳನ್ನು ಮುಚ್ಚಿಕೊಂಡು, ಕಮಲಾಕ್ಷನನ್ನು ಮರ್ಯಾದೆಯಿಂದ ಮೇಲೆ ಕುಳ್ಳಿರಿಸಿದರು. ಪರಸ್ಪರ ಕುಶಲ ಪ್ರಶ್ನೆಗಳು ನಡೆದಿರಲು, ಸಮೀಪದಲ್ಲಿಯೇ ಆಡುತ್ತಿದ್ದ ವಿಕ್ರಮಾರ್ಕನು ಓಡುತ್ತ ಬಂದು, ಕಮಲಾಕ್ಷನ ಮೇಲೆ ಬಿದ್ದನು. ಕೂಡಲೆ ಕಮಲಾಕ್ಷನು ವಿಕ್ರಮಾರ್ಕನನ್ನು ಹಿಡಿದೆತ್ತಿ, ಮುದ್ದಿಡುತ್ತ, ಅವನನ್ನು ಬಿಗಿಯಾಗಿ ಅಪ್ಪಿಕೊಂಡನು. ಆಮೇಲೆ ಅವನು ಅವರೆಲ್ಲರನ್ನು ಆಗ್ರಹದಿಂದ ತನ್ನ ಮನೆಗೆ ಕರೆತಂದನು. ಆಗ ಸುಮತಿಯು ಸುರೂಪಿಗಳಾದ ಆ ಇಬ್ಬರು ಪುರುಷರನ್ನೂ, ಪ್ರೀತಿಗೆ ಪಾತ್ರನಾದ ವಿಕ್ರಮಾರ್ಕನನ್ನೂ ನೋಡಿ ಬೆರಗಾದದ್ದಲ್ಲದೆ, ಅವರ ದೊಡ್ಡ ಸೈನ್ಯವನ್ನು ನೋಡಿ, ಇವರು ಯಾರೋ ರಾಜಪುತ್ರರಿರಬಹುದೆಂದು ತರ್ಕಿಸಿದನು.

ಪದ್ಮನಯನಾ—ಜೀವನಕಲೆಯರು, ತಮ್ಮ ಪತಿಯು ಆಕಸ್ಮಿಕವಾಗಿ ದೊರೆತದ್ದಕ್ಕಾಗಿ ದೇವರನ್ನು ಮನಸ್ಸಿನಲ್ಲಿ ಕೊಂಡಾಡುತ್ತ, ತಮ್ಮ ಪುರುಷವೇಷವನ್ನು ಬಿಟ್ಟು ಲಾವಣ್ಯಯುಕ್ತವಾದ ತಮ್ಮ ಸ್ತ್ರೀರೂಪದಿಂದ ಕಮಲಾಕ್ಷ-ಸುಮತಿಗಳಿಗೆ ಭೆಟ್ಟಿಯಾದರು. ಆಗ ಕಮಲಾಕ್ಷನು ಸಾನಂದಾಶ್ಚರ್ಯದಿಂದ ಸಂಶಯದೊಡನೆ ಅವರನ್ನು ನೋಡುತ್ತಿರಲು, ಪದ್ಮನಯನೆಯು ಅವನನ್ನು ಆಲಿಂಗಿಸಿ—“ಪ್ರಾಣವಲ್ಲಭರೇ, ಈ ಅನಾಥ ಅಬಲೆಯರ ಪರಿಚಯವು ಇನ್ನೂ ತಮಗೆ ಹತ್ತಲೊಲ್ಲದೋ” ಎಂದು ಕಣ್ಣೀರಿನಿಂದ ಅವನ ಹೃದಯವನ್ನು ತೋಯಿಸಿದಳು. ಆಗ ಕಮಲಾಕ್ಷನು ಆನಂದಪರವಶನಾಗಿ, ಜೀವನಕಲಾ-ಪದ್ಮನಯನೆಯರನ್ನು ಎಡಬಲ ಪಾರ್ಶ್ವಗಳಲ್ಲಿ ಕುಳ್ಳಿರಿಸಿಕೊಂಡು ತನ್ನ ದೋತರದ ಸೆರಗಿನಿಂದ ಅವರ ಕಣ್ಣುಗಳನ್ನು ಒರೆಸುತ್ತ—“ಹರಿಣಾಕ್ಷಿಯರೇ, ನಿಮ್ಮ ದುಃಖವನ್ನು ಸಾಕುಮಾಡಿರಿ. ಇಲ್ಲಿಯವರೆಗೆ ನೀವು ಅನುಭವಿಸಿದ ದುಃಖಗಳು ಸಾಕಾಗಲಿಲ್ಲವೆ?” ಎಂದು ಹೇಳಿ ಅವರನ್ನು ಸಮಾಧಾನಗೊಳಿಸಿದನು. ಜೀವನಕಲೆಯ ಮುಖದಿಂದ ಪದ್ಮನಯನೆಯ ಅದ್ಭುತವಾದ ಪಾತಿವ್ರತ್ಯವನ್ನು ಕೇಳಿ, ಕಮಲಾಕ್ಷನೂ, ಸುಮತಿಯೂ ಆಶ್ಚರ್ಯಪಟ್ಟು, ಸಮಾಧಾನವನ್ನು ಹೊಂದಿದರು. ಸುಮತಿಯು ತನ್ನ ಸಲುವಾಗಿ ಇಷ್ಟು ಕಷ್ಟಪಟ್ಟನೆಂದು ತಿಳಿದು, ಪದ್ಮನಯನೆಯು ಅವನನ್ನು ಕೊಂಡಾಡಿದಳು. ವಿಕ್ರ

ಮಾರ್ಕನು ಕಮಲಾಕ್ಷನ ಮಗನೆಂಬದನ್ನು ತಿಳಿದು ಎಲ್ಲರೂ ಆನಂದಪಟ್ಟರು.

ಹಲವು ಕಷ್ಟಗಳನ್ನು ಅನುಭವಿಸಿ, ಪುನಃ ಪತಿಯನ್ನು ಹೊಂದಿದ್ದಕ್ಕಾಗಿ ಪದ್ಮನಯನೆಗೆ ಪರಮಾನಂದವಾಯಿತು. ಅವಳು ಏಕಾಂತದಲ್ಲಿ ಪತಿಯನ್ನು ಕಣ್ಣುತುಂಬಾ ನೋಡಲು ಬಯಸುತ್ತಿದ್ದಳು. ಧೂರ್ತಳಾದ ಜೀವನಕಲೆಯು ಈ ಸಂಗತಿಯನ್ನು ತಿಳಿದು, ಆವೊತ್ತಿನ ರಾತ್ರಿ ಪದ್ಮನಯನೆಯನ್ನು ಕಮಲಾಕ್ಷನ ಏಕಾಂತವಾಸಕ್ಕಾಗಿ ಆಗ್ರಹದಿಂದ ಕಳಿಸಿದಳು. ಪದ್ಮನಯನೆಯ ಪ್ರೇಮವು ಕಮಲಾಕ್ಷನ ಮೇಲೆ ಮಿತಿಮೀರಿ ಇತ್ತು. ಆದರಿಂದಲೇ ಅವಳು ಹಲವು ಸಂಕಟಗಳು ಬಂದಾಗೂ ಅವನ್ನೆಲ್ಲ ತಾಳಿಕೊಂಡು, ನಿಷ್ಕಲಂಕವಾದ ಭಕ್ತಿಯಿಂದ ಪತಿಯ ಸಮಾಗಮವನ್ನು ಎದುರು ನೋಡುತ್ತಿದ್ದಳು. ಪತಿಯ ಮುಖವನ್ನು ಏಕಾಂತದಲ್ಲಿ ನೋಡಿದಕೂಡಲೆ ಆಕೆಯ ಮನದ ನೋವುಗಳೆಲ್ಲ ಇಲ್ಲದಂತಾದವು; ಆಕೆಯ ಮುಖಕಮಲವು ಪ್ರಫುಲ್ಲಿತವಾಯಿತು; ಆನಂದವೃತ್ತಿಯು ಉಕ್ಕೇರಿತು. ಅವಳು ತಟ್ಟನೆ ಹಾಯ್ದು ಪತಿಯ ಕೊರಳಿಗೆ ಬಿದ್ದಳು. ಅವರಿಬ್ಬರ ವಿಯೋಗವಾಗಿ ಬಹಳ ದಿವಸಗಳಾಗಿದ್ದರೂ, ಪರಸ್ಪರರ ಪ್ರೇಮಭಾವವು ಕುಂದಿದ್ದಿಲ್ಲ. ಇದೇ ನಿಜವಾದ ಪ್ರೇಮದಲಕ್ಷಣವು. ಆ ಪ್ರೇಮವೇ ಅವರಿಬ್ಬರನ್ನು ಎಳೆದು ತಂದು ಕೂಡಿಸಿತೆಂಬದಕ್ಕೆ ಸಂದೇಹವಿಲ್ಲ. ಕಮಲಾಕ್ಷನು ಪದ್ಮನಯನೆಯನ್ನು ಅತ್ಯಾದರದಿಂದ ಹಲವು ಸಾರೆ ಚುಂಬಿಸಿದನು. ಆ ದಂಪತಿಗಳು ಪರಸ್ಪರರ ವಿಯೋಗವಾದ ಮೇಲೆ ತಮಗೆ ಒದಗಿದ ಕಥೆಗಳನ್ನು ಹೇಳಲಾರಂಭಿಸಿ, ಪ್ರೇಮಪೂರಿತವಾದ ಮನಸ್ಸಿನಿಂದ ಮಾತಾಡುತ್ತ ಮಲಗಿರಲು, ಬೆಳಗಾದರೂ ಅವರ ಕಥೆಗಳು ಮುಗಿಯಲಿಲ್ಲ. ಮರುದಿವಸವೇ ಕಮಲಾಕ್ಷನು ಎಲ್ಲರನ್ನು ಕರಕೊಂಡು, ತನ್ನ ತಂದೆಯ ದರ್ಶನಕ್ಕಾಗಿ ಉಜ್ಜಯಿನಿಗೆ ಹೊರಟನು.

ಪುತ್ರವಿಯೋಗದುಃಖದಿಂದ ಕ್ಷೀಣವಾಗುತ್ತ ನಡೆದಿದ್ದ ಸುಲೋಚನರಾಜನು ತನ್ನ ಮಗನಾದ ಕಮಲಾಕ್ಷನು ಸತೀಪುತ್ರರೊಡನೆ ಅಕಲ್ಪಿತವಾಗಿ ಬಂದದ್ದನ್ನು ನೋಡಿ ಧನ್ಯನಾದನು. ಮೊಮ್ಮಗನಾದ ವಿಕ್ರಮಾರ್ಕನನ್ನು ನೋಡಿ, ಅವನಿಗಾದ ಆನಂದವು ಅವನ ಹೊಟ್ಟೆಯಲ್ಲಿ ಹಿಡಿಸದಾಯಿತು. ಸುಶರ್ಮನು ತನ್ನ ಮಗಳಾದ ಯಶೋದೆಯನ್ನು ಕಮಲಾಕ್ಷನ ಮಿತ್ರನಾದ

ಸುಮತಿಗೆ ಸಮಾರಂಭದಿಂದ ಲಗ್ನ ಮಾಡಿಕೊಟ್ಟನು. ಕಮಲಾಕ್ಷನು ಸತೀ ಪುತ್ರಮಿತ್ರರನ್ನೊಡಗೊಂಡು ಉಜ್ಜಯಿನಿಯಲ್ಲಿ ಒಂದು ತಿಂಗಳು ಇದ್ದು, ತರುವಾಯ ತನ್ನ ತಂದೆಯ ಅಪ್ಪಣೆಯನ್ನು ಪಡೆದು, ತನ್ನ ಮಾವನಾದ ವೀರವರ್ಮನ ದರ್ಶನಕ್ಕಾಗಿ ಕನೋಜಪಟ್ಟಣಕ್ಕೆ ಹೊರಟನು. ಆಗ ಪದ್ಮನಯನೆಯೂ, ಜೀವನಕಲೆಯೂ, ವಿಕ್ರಮಾರ್ಕನೂ, ಸುಮತಿಯೂ, ಕೆಲವು ಸೈನ್ಯವೂ ಅವನನ್ನು ಹಿಂಬಾಲಿಸಿದವು.

ಇತ್ತ ಕನೋಜರಾಜ್ಯದಲ್ಲಿ ವೀರವರ್ಮನ ಹಿತಶತ್ರುವಾದ ದುಷ್ಟಬುದ್ಧಿಯು ಕನೋಜಪಟ್ಟಣಕ್ಕೆ ಮುತ್ತಿಗೆ ಹಾಕಿದನು. ಆಗ ವೀರವರ್ಮನು ಅವನನ್ನು ಓಡಿಸಲು ವಿಶ್ವಪ್ರಯತ್ನ ಮಾಡಿದಾಗೂ ಆ ಕೆಲಸವು ಕೈಗೂಡಲಿಲ್ಲ. ಉಭಯಸೈನ್ಯಗಳಲ್ಲಿಯೂ ಹಲವು ಸರದಾರರೂ, ಆನೆ ಕುದುರೆಗಳೂ, ಶೂರರಾದ ರಥಿಕರೂ, ಕಾಲಾಳುಗಳೂ ಕಾಲಾಧೀನವಾದರು. ಕಡೆಯಲ್ಲಿ ದುಷ್ಟಬುದ್ಧಿಗೇ ಜಯವಾಗುವ ಲಕ್ಷಣತೋರಹತ್ತಿತು. ಆಗ ವೀರವರ್ಮನು ಕಮಲಾಕ್ಷನನ್ನು ನೆನಸಿ ದುಃಖಿಸಿದನು. ಅವನು ಮನದಲ್ಲಿ " ಈ ಕಾಲಕ್ಕೆ ನನ್ನ ಶೂರಸರದಾರನಾದ ಕಮಲಾಕ್ಷನು ಇದ್ದರೆ, ಅವನು ಈ ವೈರಿಗಳನ್ನು ಲೆಕ್ಕಿಸುತ್ತಿದ್ದನೇ? ವೃದ್ಧಾಪ್ಯದಲ್ಲಿ ನಾನು ಹಗೆಗಳ ಅಧೀನವಾಗಬೇಕಾಯಿತು! ಇನ್ನೇನು ಮಾಡಲಿ? " ಎಂದು ಚಿಂತೆ ಮಾಡುತ್ತಿರಲು, ಸೇವಕರು ವೀರವರ್ಮನ ಬಳಿಗೆ ಬಂದು ಕೈಜೋಡಿಸಿನಿಂತು—" ರಾಜಾಧಿರಾಜರೇ, ಉನ್ಮತ್ತನಾಗಿ ನಮ್ಮ ಪಟ್ಟಣವನ್ನು ಸ್ವಾಧೀನಮಾಡಿಕೊಳ್ಳಲು ಯತ್ನಿಸಿದ್ದ ದುಷ್ಟಬುದ್ಧಿಯನ್ನು ಯಾವನೋ ಒಬ್ಬ ಪುಣ್ಯವಂತನು ಕೆಲವು ಸೈನ್ಯದೊಡನೆ ಕಲಿತನದಿಂದ ಕಾದಿ ಸೋಲಿಸಿದನು. ಅವನ ಪರಾಕ್ರಮಕ್ಕೆ ಈಡಾಗದೆ ವೈರಿಯು ಓಡಿದನು" ಎಂದು ಹೇಳಿದರು. ಅದನ್ನು ಕೇಳಿ ವೀರವರ್ಮನು ಸಂತೋಷಪಟ್ಟು, ತನಗೆ ಮಹದುಪಕಾರ ಮಾಡಿದ ಪುಣ್ಯವಂತನ ದರ್ಶನಕ್ಕಾಗಿ ಸಮಾರಂಭದಿಂದ ಹೊರಟನು.

ವೀರವರ್ಮನ ವೈರಿಗಳನ್ನು ಓಡಿಸಿದ ವೀರನು ಕಮಲಾಕ್ಷನೇ ಆಗಿದ್ದನು. ಕಮಲಾಕ್ಷನು ತನ್ನ ಸತೀಪುತ್ರಮಿತ್ರರನ್ನು ಕೂಡಿಕೊಂಡು ಕನೋಜಪಟ್ಟಣಕ್ಕೆ ಬರುತ್ತಿರಲು, ಮಾರ್ಗದಲ್ಲಿ—" ವೈರಿಗಳು ಕನೋಜಪಟ್ಟಣಕ್ಕೆ ಮುತ್ತಿಗೆಹಾಕಿ, ಅದನ್ನು ಸ್ವಾಧೀನಮಾಡಿಕೊಳ್ಳಲು ಯತ್ನಿಸಿದ್ದಾರೆ"ೆಂಬ ವರ್ತಮಾನವು

ಅವನಿಗೆ ಹತ್ತಿದ್ದರಿಂದ, ಅವನು ತನ್ನ ದಂಡನ್ನು ತೆಗೆದುಕೊಂಡು, ಯುದ್ಧಕ್ಕೆ ನಿಂತು, ವೈರಿಗಳನ್ನು ಓಡಿಸಿದನು. ವೀರವರ್ಮನು ತನ್ನನ್ನು ಕಾಣುವದಕ್ಕೆ ಬರುವನೆಂಬದನ್ನು ತಿಳಿದು, ಕಮಲಾಕ್ಷನು ಪಾದಚಾರಿಯಾಗಿ ಆತನ ಎದುರಿಗೆ ಹೋದನು. ವೀರವರ್ಮನು ಹತ್ತರಬಂದಕೂಡಲೆ ಕಮಲಾಕ್ಷನು ಅವನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ, ಬಹುವಿನಯದಿಂದ ನಿಂತುಕೊಳ್ಳಲು, ಅರಸನು ಕಮಲಾಕ್ಷನನ್ನು ನೋಡಿ ಇವನೇ ತನ್ನ ವೈರಿಯನ್ನು ಓಡಿಸಿದನೆಂದು ತಿಳಿದು ಗಂಭೀರ ಮುದ್ರೆಯಿಂದ—"ಕಮಲಾಕ್ಷಾ, ಕಡೆಗೆ ನನ್ನ ಸಂಕಟನಿವಾರಣಕ್ಕೆ ನೀನೇ ಕಾರಣನಾದೆಯಾ!! ದೇವರು ನಿನಗೆ ಕಲ್ಯಾಣಮಾಡಲಿ. ನೀನೇ ನನ್ನ ಪುತ್ರನು. ಈ ಎಲ್ಲ ರಾಜ್ಯವು ನಿನ್ನದೇ ಇರುತ್ತದೆ. ಪ್ರಜಾಪಾಲನರೂಪವಾದ ಹೊರೆಯನ್ನು ಹೊರಲಾರದೆ ದಣಿದಿರುವ ನನ್ನನ್ನು ಹೊರೆಯಿಳಿಸಿಕೊಂಡು ನಿಶ್ಚಿಂತನಾಗಿ ಮಾಡು, ಎಂದು ಹೇಳಿ ಅವನನ್ನು ಮುಂಡಾಡಿದನು. ಕಮಲಾಕ್ಷನು ವಿನಯಪೂರ್ವಕವಾಗಿ ವೀರವರ್ಮನನ್ನು ತನ್ನ ಬಿಡಾರಕ್ಕೆ ಕರಕೊಂಡು ಬರಲು, ಪದ್ಮನಯನೆಯೂ, ಜೀವನಕಲೆಯೂ, ವಿಕ್ರಮಾರ್ಕನೂ ಅವನ ಚರಣಗಳಿಗೆ ಪೊಡಮೊಟ್ಟರು. ಆಗ್ಗೆ ಆ ವೃದ್ಧ ನೃಪತಿಯ ಸ್ಥಿತಿಯು ಹೇಗಾಗಿರಬಹುದೆಂಬದನ್ನು ಸಹೃದಯ ವಾಚಕರೇ ತರ್ಕಿಸಬಹುದು. ಆನಂದದಿಂದ ಅವನ ಮೈ ಉಬ್ಬಿ, ಬಾಷ್ಪಗಳು ಉದುರಹತ್ತಿದವು. ಅವನು ಭ್ರಮಿಷ್ಟನಂತೆ ಆಚರಿಸಹತ್ತಿದನು. ಅವನಿಗೆ ಇದೆಲ್ಲ ಸ್ವಪ್ನವೆಂಬಂತೆ ತೋರಹತ್ತಿತು. ಆನಂದದ ಭರವು ಕೆಲಮಟ್ಟಿಗೆ ಕಡಿಮೆಯಾದ ಬಳಿಕ, ವೀರವರ್ಮನು ಪುತ್ರಿಯಾದ ಪದ್ಮನಯನೆಯನ್ನು ಕುರಿತು— "ಪದ್ಮನಯನೇ, ಇತ್ತ ಬಾ. ನನಗೆ ನಿನ್ನ ಮುಖಕಮಲವನ್ನು ತೋರಿಸು! ಇಂದಿಗೆ ನಾನೇ ಧನ್ಯನು! ನಿನ್ನ ವಿಯೋಗತಾಪದಿಂದ ಸಂತಪ್ತವಾದ ನನ್ನ ಶರೀರವನ್ನು ನಿನ್ನ ದರ್ಶನರೂಪವಾದ ಜಲವು ಶಾಂತ ಮಾಡಿದ್ದರಿಂದ ನಾನು ಕೃತಕೃತ್ಯನಾದೆನು." ಎಂದು ಅವಳಮೈಮೇಲೆಪ್ರೀತಿಯಿಂದಕೈಯಾಡಿಸಿ ಕುರುಳುಗಳನ್ನು ತೀಡಿದನು.

ಈ ಪ್ರಕಾರ ವೀರವರ್ಮನು ಸಂತುಷ್ಟನಾಗಿರಲು, ಸುಮತಿಯು ಅವನಿಗೆ, ಕಮಲಾಕ್ಷನು ಪದ್ಮನಯನಾ-ಜೀವನಕಲೆಯರ ಪತಿಯೆಂತಲೂ, ವಿಕ್ರಮಾರ್ಕನು ಪದ್ಮನಯನೆಯ ಮಗನೆಂತಲೂ ತಿಳಿಸಿದ್ದರಿಂದ, ವೀರವರ್ಮನ ಆನಂದವು ಅಪಾರವಾಯಿತು. ಅವನಿಗೆ ಕಮಲಾಕ್ಷನು ಮೊದಲಿಗಿಂತಲೂ ಅಧಿಕ

ಪ್ರಿಯನಾಗಿ ತೋರಹತ್ತಿದ್ದು ಆಶ್ಚರ್ಯವಲ್ಲ. ಪದ್ಮನಯನೆಯು ವಿಕ್ರಮಾರ್ಕನನ್ನು ವೀರವರ್ಮನ ಬಳಿಗೆ ಕಳುಹಲು, ಅವನು ದೌಹಿತ್ರನನ್ನು ಪ್ರೇಮಪೂರ್ವಕವಾಗಿ ನೋಡಿ ಮುದ್ದಾಡಿದನು. ದೇವದತ್ತನು ಮಾರ್ಗದಲ್ಲಿ ಮರಣಹೊಂದಿದ್ದಕ್ಕಾಗಿ ಎಲ್ಲರೂ ದುಃಖಿಸಹತ್ತಿದರು. ತಂದೆಯ ಮರಣದಿಂದ ದುಃಖಪಡುತ್ತಿರುವ ಜೀವನಕಲೆಗೆ ವೀರವರ್ಮನು ಸಮಾಧಾನ ಹೇಳಿ, ಅವಳನ್ನು ತನ್ನ ಮಗಳೆಂದು ತಿಳಿದನು. ತರುವಾಯ ಪರೋಪಕಾರ ದಕ್ಷಕನಾದ ಸುಮತಿಯನ್ನು ಕೊಂಡಾಡುತ್ತ ಅವರೆಲ್ಲರು ಪುರಪ್ರವೇಶಾಭಿಮುಖರಾದರು.

ಪದ್ಮನಯನೆಯು ಪತಿ-ಪುತ್ರ-ಮಿತ್ರರನ್ನು ಕೂಡಿಕೊಂಡು, ಮರಳಿ ಬಂದಳೆಂಬದನ್ನು ಕೇಳಿ ಪೌರರು ಅತ್ಯಾನಂದದಿಂದ ಹಲವುಪ್ರಕಾರದ ಉತ್ಸವಗಳನ್ನು ಮಾಡಹತ್ತಿದರು. ಆಕೆಯ ತಾಯಿಯಾದ ಮನಮೋಹಿನಿಯು ಆನಂದಮಗ್ನಳಾದಳು. ನೋಡಿದತ್ತ ಆನಂದಪ್ರದವಾದ ಸುಲಕ್ಷಣಗಳೇ ಕಂಗೊಳಿಸುತ್ತಿದ್ದವು. ಮಂಗಳ ಸ್ವರವು ಹಬ್ಬಿತ್ತು. ಯಾಚಕರು ದಾನತೆಗೆದುಕೊಂಡು ದಣಿದರು. ಕಮಲಾಕ್ಷನು ಮಾಳವದ ರಾಜ್ಯಕ್ಕೂ, ಕನೋಜದ ರಾಜ್ಯಕ್ಕೂ ತಾನೇ ಒಡೆಯನಾಗಿ ಸುಮತಿಯನ್ನು ಮಂತ್ರಿಯ ಅಧಿಕಾರದಲ್ಲಿ ನಿಯಮಿಸಿಕೊಂಡು, ನ್ಯಾಯದಿಂದ ರಾಜ್ಯಪರಿಪಾಲನೆಯನ್ನು ಮಾಡಹತ್ತಿದನು. ಸಿಂಹಕೇತುವು ಕಮಲಾಕ್ಷನ ಪರಮ ಮಿತ್ರನಾದನು. ಪದ್ಮನಯನಾ-ಜೀವನಕಲೆಯರು ಸುಶೀಲರೂ, ಜ್ಞಾನಸಂಪನ್ನರೂ ಇದ್ದದ್ದಲ್ಲದೆ, ಅವರು ಬಾಲಮಿತ್ರರಾದದ್ದರಿಂದ ಅವರಿಂದ ಕಮಲಾಕ್ಷನ ಸುಖವು ಹೆಚ್ಚಳವನ್ನು ಹೊಂದಿತು. ಒಟ್ಟಿಗೆ ಸತ್ಸಮಾಗಮದಿಂದ ಸತ್ಪಶೀಲರಾದ ಅವರೆಲ್ಲರೂ ಕಡೆಗೆ ಸುಖಸಾಮ್ರಾಜ್ಯವನ್ನು ಹೊಂದಿದರು. ಅವರ ಚರಿತ್ರ ಶ್ರವಣದಿಂದ ಸರ್ವರೂ ಸುಖಸಾಮ್ರಾಜ್ಯವನ್ನು ಹೊಂದುವಂತೆ ಶ್ರೀ ಸದ್ಗುರುವು ಅನುಗ್ರಹಿಸಲಿ !!!

## ಸಂಪೂರ್ಣ.

---

ಇದನ್ನು ಮಿ. ವೇಂಕಟೇಶ ತಿರಕೋ ಕುಲಕರಣಿ, ಗಳಗನಾಥ. ಇವರು ಹಾವೇರಿಯಲ್ಲಿ ತಮ್ಮ ಸ್ವಂತ ಮಾಲಕಿಯ ವೇಂಕಟೇಶಪ್ರೇಸಿನಲ್ಲಿ ಮುದ್ರಿಸಿ ಅಲ್ಲಿಯೇ ಪ್ರಸಿದ್ಧಪಡಿಸಿದರು.